ಖಿಂದೇ ||೫೮|| ಜನಿಸುವನುದ್ವಾದಶವರುಷಗಳು|ಮನುಕಲಿತವೆನಿ
ರ್ಪುವಾತಂ | ಗನುನಯದೆಶ್ರೀಚೆನ್ನಬಸವೇಶ್ವರನೆನಲುಜಗದೀ || ಘನ
ವೆತ್ತಾನಾಮಧೇಯವ | ನನುಗೊಳಿಸುನೀನೆನುತೆತಥ್ಯದೊ | ಳನಿತುವೃ
ತ್ತಾಂತವನುಪೇಳುತೆಸಂಗಮೇಶ್ವರನೂ ||೫೯|| ಅಲ್ಲಿಯಂತರ್ಧ್ಯಾನನಾ
ಲು | ಬಲ್ಲಿದನೆನಲ್ಕೆಸೆವಮುಕ್ತಿಯ | ವಲ್ಲಭನಘನಮಹಿಮಬಸವಂಲಿಂ
ದರ್ಪಣದೀ || ಮೆಲ್ಲಮೆಲ್ಲನೆಕಂಡುಸುಖಿಸ | ಲ್ಕುಲ್ಲಸಿತಪದ್ಮಾಸನಾಸ
ನೋಲ್ಲಲಿತೆಯಿಂದಿರ್ದುಪರಮೇಶಂಗೆನಿಜಹೃದಯ ||೬೦||ಕಮಲವೇಸ
ಯಾಗೆಪಟ್ಟಮು|ಪಮಲಚಕ್ರದೆಪೂರ್ಣಘಂಟಾ|ಸುಮುದಿತೆಸುನಾದದೊ
ಪರವಶಭಾವದಿಂದಿರ್ದು || ಕ್ರಮದಿತಲೆವಾಗಿರುತಿರುವಷ | ಟ್ಕಮಲಗ
ನೂರ್ಧ್ವಮುಖಕೆತ್ತುತೆ |ವಿಮಳಶಶಿನಿಷ್ಯಂದಸಾರಸುಧಾಸುಸೇವನೆಯ
||೬೧|| ಪಥುಳದಿಂಮುಡವಲರುತಂನಾ | ದಕಲೆಯಬಿಂದುವಿನಲೀಲ
ಸ್ಪದನನಯುತರವಿಪ್ರಭಾಭಾಸುರನೆನಿಸುವವನಂ || ಸದಮಳಾತ್ಮ
ಸೋಧರಿಯಗ | ರ್ಭದೊಳುಕಾಣುತಲಾಕೆಗಾಬಲು | ಹದವನರುಪಿಸು
ಖಾನ್ವಿತನುಮಾಗಿರೆಬಸವರಾಜಂ ||೬೨||

ಅಂತು ಸಂಧಿ ೭ಕ್ಕಂ ಪದ ೪೫೪ಕ್ಕಂ ಮಂಗಳಮಹಾ.

## ಎಂಟನೆಯ ಸಂಧಿ

ಸೂಚನೆ||ಅರಿದೆನಲುಚೆನಬಸವನಾಭೂ |ವರನಸಭೆಯೊಳುಜನಿಸಿನಿ
ಜಮಂ| ದಿರಕೆಮನ್ನಣೆವೆರಸಿಜನನಿಯೊಡನೆಬರುತ್ತಿರ್ದಂ ||ಪದ||ಅಂದಿಗಾ
ದ್ವಾದಶವರುಷಗಳು|ಸಂದಿರಲುವೊಂದಿನಮಿಳೀಶನ| ಮುಂದೆಬಂದಾಗು
ಥಚರನಿಂತೆಂದಭೀತಿಯೊಳೂ || ನಿಂದುಜೋಹಾರೆನುತೆನೃಪತಿಯೆ|ಇಂ
ದುಪ್ರೊಳಲೋಳ್ಜನಿಸಿರುತ್ತಿಹು |ದೊಂದುವಾರ್ತೆಯದದನುನಾಂನಿನಗೊ
ರೆಯಲಳುಕುವೆನೂ ||೧|| ಎನಲುಕೇಳ್ದುನೃಪಂಚರನನೀಂ , ಮನದೊ
ಳಭಿಮಾನಭಯಗಳನುಳಿ | ದಿನಿಸುಳಿಯದಂತರಿದುದಂಪೇಳೆನಗೆತಿಳಿವಂ
ತೆ||ಎನಿತುಘನತರವಾರ್ತೆಯಾದೊಡು| ಮೆನೆಧರಾಧಿಪನೇಪುರದೊಳಿಹ| ಜನ
ಗಳೆಲ್ಲರುಮನೆಮನೆಗಳೊಳುಕೇರಿಕೇರಿಯೊಳೂ ||೨||ಅಲ್ಲಿಯಲ್ಲಿಯೆಕೆಲರು
ಕೆಲವೆಡೆ|ಯಲ್ಲಿಗುಂಪುಗಳಾಗಿತವ್ಮೊಳು|ಮೆಲ್ಲಮೆಲ್ಲನೆಯಾಡುತಿರ್ದುದನಳ

ವೆಪೇಳಲ್ಕೆ ॥ ಬಲ್ಲಿದನೆನಿಸಿಕೊಂಬಬಸವಣ್ಣ ।ವಲ್ಲಭನಪೆಸರ್ಗೊಂಡವನಜ ನ್ನಲ್ಲಿಪುಟ್ಟಿರ್ದ್ದಾಕೆಯೂತನಜಗದಕೀರ್ತಿಯನು ॥೩॥ಹಳ್ಳದೊಳ್ಕಲಸಿದಳು ಪಶಿಗಳು । ಮುಳ್ಳವರವೊಲುಗರ್ಭಮಂತಳೆ ।ವೆಳ್ಳನಿತುಲಜ್ಜಾಭಯಂಗಳ ನೆಣಿಸದಿರುತಿಪಳೂ ॥ ಒಳ್ಳಿಕುಲದೊಳುಹುಟ್ಟಿಯಿಂತಹ । ಮುಳ್ಳುತನ ದಿಂಮದುವೆಯಿಲ್ಲವೆ ।ಕಳ್ಳತನದಿಂಪಾದರವನೆಸಗಿಹಳೆನುತ್ತಿಹರೂ ॥೪॥ಬಸ ವಮಂತ್ರಿಯುಶ್ಶೈಲಜಾಧಿಪ। ನಸಮಸದ್ಭಕ್ತಾಗ್ರಣಿಯುಮೇ । ಣ್ಯಸುಧೆ ಯೊಳಗೆನಗಿದಿರುವೆಲ್ಲಿಯುಮಿಲ್ಲವೆಂದೆನುತಂ ॥ ಮಿಸುಪಗರ್ವಸ್ಫೂ ರ್ತಿಯಿಂದಾ । ಬಿಸಜಮುಖಿಯೊಡಹುಟ್ಟಿದವಳತ್ವ ।ಜಿಸಲುಬಾರದಿರು ವನು ಮೂಢನತೆರದಿಮನದೊಳಗೇ ॥೫॥ ಭೀತಿಸದೆಹಾದರವನೊಳ ಕೊಂ । ಬಾತನಾಡನಿದೆಂತುಮೂಕ್ಷ್ಯ । ಖ್ಯಾತಿಶಯವಾಗಿರ್ಪವಿಪರೀತವಿ ದುಪುರದೊಳಗೇ ॥ ಪಾತಕವನಿನ್ನೇನನೆಂಜೆವು । ರೀತಿಯೇಇದೆನು ತ್ತಸತಿಯರು । ಮಾತುಗಳನಾಡುತ್ತಿರಲುಕೆಲಬಲದಲ್ಲಿಯನಿತರೊಳೂ ॥೬॥ ಏನೆನಲುಬಾರದೆನುತಂಪುರ । ಮಾನಿನೀಮಣಿಯರುಕೆಲಬರೆನ । ಲಾನಲಿನಲೋಚನೆಯರೊಳುಮಿಂತೆಂದಳೊರ್ವ್ವಳೆಲೆ॥ಮಾನಗೇಡಿಇದೇ ನುನಿನ್ನಭಿ । ಮಾನಮುಂಕಳಕೊಂಬರೇತಿಳಿ । ಈನಿಮಿತ್ತದೊಳವರ ಮಾತಾಗಾಡಬಾರದುನೀಂ ॥೭॥ಏಕೆಕಾಠಿಣ್ಯದೊಳುನಿಂದಿಪೆ । ಸಾಕು ನುಡಿವುದಮಾತ್ಯನವನೀ। ಲೋಕಪಾಲಕನಾಡಕತದಿಂಜೋಕೆ ಯಿಂದಿರ ದೇ ॥ಬೇಕೆಶಿಕ್ಷೆಯುಬೇರೆಏನುತಲ । ನೇಕವಿಧದಿಂಗರ್ಜಿಸುತ್ತಂ । ಕೋಕಕುಚೆಯರುಕೂಡಿಮಾತಾಡಿದುದನಾಂಕೇಳಿ ॥೮॥ ತಿಳಿಸಬಂದೆ ನೆನಲ್ಕೆಯುವನಂ । ಕಳುಹಿಭೂಮೀಪಾಲಕಂತ ।ನ್ನೊಳಗೆತಾನೇಬಸವ ನೆಂತಹಸತ್ವವಂತನಲಾ ॥ ತಿಳಿದುಸುಮ್ಮನಿಸಲ್ಬಹುದೆಥರೆ । ಯೊಳಗೆ ವರ್ಣಾಶ್ರಮವಿಚಾರಂ ।ಗಳುಕೆಡುವವೀಮಾರ್ಗ್ಗದೊಳಗೆಂಬುಡನುಜಗದೊ ಳಗೆ॥೯॥ಸಕಲರರಿವೊಲುರಾಷ್ಟ್ರಕೃತಪಾ । ತಕವುರಾಜಂಗೆಂಬುದಂ ಮಿಗೆ।ಪ್ರಕಟವಾಗಿಹಧರ್ಮ್ಮಶಾಸ್ತ್ರವಕೇಳಿಸುಮ್ಮನಿರಲ್॥ಸುಕರವಲ್ಲವೆನು ತ್ತನಿಜಕಂಚುಕಿಯನಾಗಳೆಕರೆದುಸೀಘ್ರದಿ। ವಿಕಳಮಾನಸದಿಂದೆಬಿಜ್ಜ ಳನೆಂದನನೊಡನೇ॥೧೦॥ಬಸವಸಚಿವನಕರೆದುಬಾರೆಂ।ಮಸುರಲಾಜ್ಞಾ ಪಾಲಕನುನಸಾ । ವಸ್ಥುಮತೀಶನನುಜ್ಞೆಯಂಶಿರದೊಳ್ಧರಿಸಿಭರದಿಂ॥

ದೆಸಕದಿಂಭಯುನಮ್ರತರಕಾ | ಯಸಹಿತನುಮಾಗಿರ್ದ್ದುನಮಿಸುತೆ | ಅಸಮಬಿಜ್ಜಳನಿಮ್ಮ ಕರತಾರೆಂದನೆನೆಕೇಳಿ ||೧೧|| ಚಿನುಮಯಾತ್ಮನೆನಿಪ್ಪಬಸವಾ |ರ್ಯನುಸ್ವಕೀಯಪ್ರಸೇವಕಾವಳಿ | ಯನುನಯದಿಸೇವಿಸುತಲೊಡನಿರೆಬರುತಲರಮನೆಗಂ || ಜನಪ್ರಮೋದಾನ್ವಿತಮನದೊಳಾ | ಜನಪನಂಕಾಣುತ್ತಲುಚಿತಾ |ಸನದೆಮೂರ್ತ್ತಂಗೈದುಸಹಜಾನಂದದಿಂದಿರಲೂ||೧೨||ತನ್ನ ಕಣ್ಕೆಂಪೆಸೆಯೆಕೋಪವು|ಮುನ್ನಮುಂಬರಿವುತಿರೆಮುಹಿ | ಮೋನ್ನತದಬಸವಣ್ಣನಂಕಾಣುತ್ತೆಬಿಜ್ಜಳನೂ|| ಎನ್ನಮಾತ್ಯಾಗ್ರಣಿಯೆನಿಸಿಬಹು | ಸನ್ನುತಿಯಪಡೆದಿರುತಿಹುದಕಿದು | ಸೊನ್ನೆವಿಟ್ಟಂತಾದುದನುಚಿತಕೃತ್ಯದೋಳ್ಸೇರೀ ||೧೩|| ಅಗ್ರಜೆಯದುಷ್ಟಾಪರಾಧಸ | ಮಗ್ರತೆಯನೊಳಗಿಟ್ಟುನಿಖಿಳರ| ನಿಗ್ರಹಿಸಿಕುಲಶೀಲಮಾನಂಗಳನುನೆರೆನೀಗಿ || ಉಗ್ರಲೋಚನಭಕ್ತರೊಳಗಾ | ನಗ್ರಗಣ್ಯನೆನುತ್ತೆಶೂಲಿಯ| ನುಗ್ರಹಾನ್ವಿತನೆಂದೆನಿಸಿಕೊಳುತಂತಿರಲುನಿನ್ನ ||೧೪|| ಬಳಸಿವರ್ತ್ತಿಸಲೆಂತಹರಿಗುಂ | ಬಳಿಕನರಕಂಸಮನಿಸುವುದೈ|ನಳಿನಲೋಚನೆಗೆಂತುಗರ್ಭವದಾಯಿತೆಂದೆನಲಾ || ಇಳೆಯೊಡೆಯನೊಡನೆಂದನಾಧೀ | ಕುಳಮಣಿಯುಘನಶಾಂತತರಹೃ | ನ್ನಳಿನನಾಗುತೆಕಲ್ಮಷಾಕರಕಠಿಣವಾಕ್ಯಗಳಿಂ ||೧೫|| ನೊರೆವುದೇನದಕಿಲ್ಲಿಗಾಸರ | ಸಿರುಹನೇತ್ರೆಯನೀಕ್ಷಣದೊಳೀ! ಕರಸುವೆನುದುರ್ಭರದಗರ್ಭಸ್ಥಿತಿಯುವಳಕೇಳಿ || ದರೆಪರಿಷ್ಕರವಾಗುವುದಿದೆಂ |ದೊರೆದುಬೇಗನೆಬಿಜ್ಜಳನರೇ|ಶ್ವರನಸಮ್ಮತಪೂರ್ವಕದೊಳತಿಚೋದ್ಯವೆನಲಾಗಾ||೧೬||ತನಗೆಯಾಪ್ತನೆನಿಪ್ಪವನನೋ| ದ್ವನನುಸಾಮಿಪ್ಯಕೆಕರೆದುನೀ| ನನುಯದೆಪೋಗಕ್ಕನಾಗಾಂಬಿಯರನೊಡಗೊ || ಡೂಂಜನಪತಿಯೆಡೆಗೆಕರೆದುತಾರೆನ | ಲನಘಮತಿಬಂದಾಸತಿಯುಪದವ | ನಜಗಳಿಗೆರಗುತ್ತೆತಾಯಿಯೆಅನುಜನರಮನೆಯೋಳ್||೧೭||ಇದ್ದುನಿಮ್ಮಂಕರಮುತರಲಾ | ಸದ್ದಯಾಮೃತಶರಧಿಕಳುಹಿದ | ಸುದ್ದಿಯಿದುಕೇಳಾಸಭೆಯೊಳಗೆವಾದಿಸುತ್ತಿರೆನಾ || ನಿದ್ದೆನೆನೆಗುರುಧ್ಯಾನವಶಳಾ | ಗೆದ್ದುಗಣಪದಕಮಲದೇಶದಿ | ಬಿದ್ದೊಡನೆನಮಿಸುತ್ತೆಭಕ್ತಸಮೂಹಘನಕರುಣಾ ||೧೮|| ದೃಷ್ಟಿಪಾತದೊಳಖಿಲಶುಭಗಳು|ಸ್ಪಷ್ಟದಿಂಹೊಂದಿರುವವೆಂದತಿ | ಶ್ರೇಷ್ಠನವರತ್ನ ಖಚಿತಾಂದೋಳನದೊಳುಂಕುಳಿತೂ || ಇಷ್ಟಸ

ಖಿಯರುತನ್ನನುಂಪರಿ | ವೇಷ್ಟಿಸಿಯೆನಡೆತರುತೆಸಲೆನಿ | ರ್ದಿಷ್ಟಬಿಜ್ಜ
ಳನಾಸಭಾಲಯದೊಳಮನೆಯಪೊಗಲೂ ||೧೯|| ಆಸಮಯದೋಳ್ವಸು
ಮತೀಶನು | ಮೂಸುಶೀಲೆಯೆಯಕಂಡುಮಜ್ಞಾಗು | ಣಾಸಮೇತನುಮೊಗಿ
ಯಕಟಕಟಾವಿಧಿಯೆಯೆಂತಾ || ಮೋಸವಿದುಗಡಸದ್ಗುಣಾಂಭೋ |
ರಾಶಿಸತಿಯಂನುಡಿಸಿನಾಂಬಲು | ಗಾಸಿಯಪ್ಪವಿನಾಶಗುಣಮುಂಟಾ
ದುದಿಳೆಯೊಳಗೇ ||೨೦|| ಪಾಪಿಯೆನಿಪಾವಿಧಿಯುಬರೆದುದು | ರೂಪನ
ವಲೋಕಿಸುತೆಮೋಣದ | ನೇವರೀಕ್ಷಿಸಿತಿಳಿಯಲಡುವೇನ್ನೈಜವಹುದೆಂ
ದೂ || ಭೂಪಪುರುಹೂತಂನುಡಿದನಬ | ಲೇವತಿಯಪಾಣಿಗ್ರಹಣಮಿ|
ಲ್ಲಾಪರಾಧವಿದೆಂತುಗರ್ಭವತಳಪೆಯುಸುರೆನಲೂ ||೨೧|| ಭೂಮಿಭೃ
ಚ್ಚಾಮಾಂಘ್ರಿಕಮಲವ | ನೇಮನದಿನೆನದಾಪರಮಸಾ | ಧ್ವೀಮಣಿಯು
ಬಿಜ್ಜಳಮಹೀಪನೆಕೇಳೆನುತೆಮುದದಿಂ || ಶ್ರೀಮಹಾದೇವೇಶಮದ್ಗುರು |
ಸ್ವಾಮಿಯೇಬಲ್ಲಂಪೆರತನಾಂ | ಭ್ರಾಮಕರಪೊಲದೆಂದುಪೇಳಲಿಯೆನ್ನ
ಗರ್ಭದೊಳೂ ||೨೨|| ಘನತೆಗೊಂಡಿಹಶಿಶುವನೇನೀ | ನನುವಿನಿಂಪೂ
ರ್ವಸ್ಥಿತಿಯಪ್ರಕ| ಟನೆಯಮಾಡುವುದೆಂದುಕೇಳ್ದಡೆತಾನೆತಿಳಿಯಿಸುವಂ||
ಎನಲುಕೇಳಿದರಸ್ಮಿತಾನನ | ವನಜನಾಗಿಧರಾಧಿಪತಿಯೆಂ | ದನುತಿಳಿಯೆ
ಕೇಳರಿಗೆಸೆನಿಂತದ್ಭುತದವಾಕ್ಯಗತೆಂ ||೨೩|| ಕೇಳಿದೆನುಈಸತಿಯನುಡಿ
ಯಂ | ಹೇಳನವಮಾಡುವುದೊಳಿತೆಸಂ| ಬಾಳಿಸಿಯೆಕೇಳುವುದದೇಸದ್ವಿ
ಹಿತವಪುದಾಗೀ || ಕಾಳುನುಡಿಯೇಕೆಂದುಸಂತೆಸ | ವಾಳಿನಗೆವೊಗ
ದೊಡನೆಸಭ್ಯರ ! ಮೇಳವಿಸಿಯಚ್ಚರಿಗೊಳುತೆಗಂಭೀರಧ್ವನಿಯಿಂದೇ
||೨೪|| ಓಹೊನೀನೀಸತಿಯಗರ್ಭದೊ | ಳೂಹಿಸಲದೆಂತಿರುವೆಸುಜ
ನಸ | ಮೂಹವಿದುನಿನ್ನುಕ್ತಿಯಂಕೇಳಲ್ಕೆಕಾಪ್ಪಿಹುದೂ || ಈಹದನ
ನುಸುರುವುದೆನಲುನೃಪ | ನಾಹರನಪದಭಕ್ತನಿವಹದ | ಸಾಹವಾಸಿಯೆ
ನಿಪ್ಪಶರಣಂಕಾಮಕ್ರೋಧಗಳಾ ||೨೫|| ಮದನರಂಕಕ್ಕಯ್ಯನಾತನ| ಸ
ದಮಲಶ್ರೀಸುಪ್ರಸಾದವ | ಮುದದೊಳೀನಾಗಾಂಬೆಗ್ರಹಿಸಿದಕಾರಣದೆ
ಶೋಭಾ || ಭ್ಯುದಯವಪ್ಪಶರೀರವಾಳ್ದನು | ವಿದಿತವಿದುಕೇಳೆಂದುಗ
ರ್ಭದೊ | ಳೊದವಿಶಿಶುವೇಪೆಳೆಸಭ್ಯರುವಿಸ್ಮಯವನಾಳೇ ||೨೬|| ನರಪ

ತಿಯುತನ್ನಾತ್ಮದೊಳುಸ್ಮರ | ಹರವರಾಂಶಜರೆಂಡುಬುದ್ಧಿ | ಸ್ಫುರಣೆ
ಯಿಂತಡ್ಡಿಂಬಕಾಲೋಕನಕುತುಕಮಂತಾಂ || ಧರಿಸುತೇಂದಂನಿಮ್ಮದ
ರ್ಶನ | ಭರದಿರವಿನಿಂದಿಹೆವುಸಂತಸ | ವೆರಸಿಯಖಿಲಜನಾಳಿಕಾಣಲ್ಕಿರು
ವಕಾರಣವೇ ||೨೭|| ತಾವಕಾಕೃತಿದರ್ಶನದೊಳುಶು | ಭಾವಹರ್ಕಳ
ನೆಗಳ್ದುವಿಮಲಕೃ | ಪಾವಲೋಕನಗೈವುದೆನುತಂಪ್ರಾರ್ಥಿಸುತ್ತಿರುವಾ||
ಭೂವರೇಣ್ಯನಮಾತಕೇಳಿನಿ | ಜಾವತಾರದಮಹಿಮೆದೋರುವ | ಭಾ
ವದಿಂಶ್ರೀಗುರುಪದಾಂಭೋಜಗಳಚಿತ್ತದೊಳೂ ||೨೮|| ಸಾವಧಾನದಿಘ
ಟಸಿನಾಗಾಂ | ಬಾವರಸುಜಾಠರದಿಸಂಗತ | ಕೋವಿದನುಮೆನಿಸಿರ್ಪ
ಭೂರಿಗುಣಾಢ್ಯನನಿತರೊಳೂ || ದೇವಿಸನ್ನಿಭೆಳೆನಿಪತಾಯಿಗ್ಗೆ | ನ್ನಾವ
ದೇವತೆಗಳೆಣೆಯೆನೆಶ್ರುತಿ | ಕೇವಲದಿಸಾರುತ್ತಿಹುದರಿಂಜನನಿಯಹಾತ್ಮಕ್ಕೆ
||೨೯|| ಕಷ್ಟವೆನಿಸದವಿಧಿಯೆಸರ್ವೋ | ತ್ಕೃಷ್ಟಯುಕ್ತಿಯದೆಂದಱಿ
ದುಸು| ಶ್ರೇಷ್ಠಸುಂದರವೆನಿಪದೇಹವಸೂಕ್ಷ್ಮವೆಂದೆನಿಸೀ || ಭ್ರಷ್ಟ
ಕುತ್ಸಾವಾಕ್ಪ್ರಬಂಧಸ |ಮುಷ್ಟಿಯಿಂಸೌದಾಮಿನಿಯೊಲುದಿ | ಗಷ್ಟಕೀ
ರ್ಣಸುತೇಜದೊಳುಜನನೀಶ್ರವಾಂತರದಿಂ ||೩೦|| ಪೊರಮಡುತೆಸುಂದ
ರತನುವಿನಿಂ ! ಧರಣಿಪನಮುಂಭಾಗದೊಳುನಿಂ | ದಿರಲರಳ್ಗಳಸೋನೆಗ
ರೆದುದುದಿಶೆಗಳುಪ್ರಸಾದ || ವೆರಸಿರಲುಸುರದುಂದುಭಿಗಳುಂ | ಮೊರೆ
ಯುತಿರಲಾನಾಗಮಾಂಬಿಗೆ | ವರತನೂಭವನುದಯಿಸುತೆಸದ್ಭಕ್ತಿಸಂ
ಭ್ರಮದಿಂ ||೩೧|| ಆಸಮಯದೊಳುಕುವರನತಿವಿ | ಶ್ವಾಸದಿಂದಂ
ಬಾಂಘ್ರಿಕಮಲ | ಕ್ಕೋಸುಗಂವಂದಿಸಿಜನನಿಯಾಜ್ಞಾಮತದಿಮಹಿ
ತೋ || ಲ್ಲಾಸನಹಬಸವೇಶ್ವರನಶ್ರೀ | ವಾಸಪಾದಂಗಳಿಗೆರಗೆಬಲು|
ಲೇಸನಾಳ್ಕೆಯನುತಲಿತ್ತುತ್ತಪ್ರಿಯಾಕ್ಷಣವೇ ||೩೨|| ಫಾಲದೊಳುಭ
ಸ್ಮವಧರಿಸುತಂ | ಮೂಲಮಂತ್ರವಕರ್ಣದೇಶದಿ ! ಕೀಲಿಸುತತೆರೆಯೊ
ಳಗೆಲಿಂಗವಧರಿಸಿಕಂಠದೊಳೂ || ಶೂಲಿಯನಲೊಪ್ಪುತ್ತೆದಿವ್ಯಸು | ಶೀ
ಲನೆನಿಸಿರ್ಪಾತ್ಮಶಿಷ್ಯಂ | ಲೀಲೆಯಿಂದಾದ್ವಾದಶಾಬ್ದಪ್ರಾಯದಿಂದಿದಿ
ರೋಳ್ ||೩೩|| ನಿಂತುಶೋಭಾಕರತೆಯಿಂದಿಹ | ಕಂತುಹರನಪರಾಂಶ
ಡಿಂಬಕ | ನಂತವೆನಿರೀಕ್ಷಿಸುತೆಬಿಜ್ಜಳನುತತ್ರಪಾಭರದಿಂ || ಅಂತರಂಗ

ದೊಳಿಂತುತಿಳಿಯ | ಲ್ಕಂತಕಾಂತಕನಹಹನನಗಿ | ನ್ನೆಂತುಮುಂದಮ
ತಿಯೆೞಿವೆನನಾಂಪರಿಕಿಸಿದೆನಲ್ಲಾ ||೩೪|| ಭೀತಿಯಿಲ್ಲದೆನಿನ್ನಲಾತ್ಮೋ|
ಪೇತನೆನಿಸುತೆಮೆರೆವಬಸವನ |ನಾತನನಸನ್ಮಹಿಮೆಯುಂನಾನರಿದುಮರೆ
ದೀಗ || ಈತೆರವೊಳುಂಪರಿಕಿಸುತೆದು| ರ್ನೀತಿಯಂಮಾಡಿದೆನಲಾಬಹು|
ಪಾತಕನುಕೊಳ್ಳಿಯೊಳುತಲೆಯುಂಒರಸಿಕೊಂಡವೊಲೂ ||೩೫|| ಪ
ರಮಸಚ್ಚಾರಿತ್ರರಂಹೊಂ | ದಿರುವುದೇದುಷ್ಕೃತವುಕೆಂಡವ | ನೊರಲೆ
ಯುಂಟುವುದುಂಟೆಧರಯೊಳ್ತಿಳಿದುನೋಡಿದೊಡೆ|| ದುರಿತಹರನೆಂದಾ
ತನಂಮೇ | ಣಿರದೆನೋಡುತ್ತರಸನೆಂದಂ | ಕರುಣಿಸಲುನೀವ್ತೃಣವು
ಹೇಮಾದ್ರಿಯುದುತಾನಹುದೂ ||೩೬| ಒಮ್ಮೆಮೇರುವುತೃಣವದಪ್ಪುದು
ನಿಮ್ಮಕರುಣವುತೊಲಗೆನುತಿಯಿಸ | ಲೆಮ್ಮಳವೆಭವದೀಯುಮಹಿಮೆಯ
ನೆಂದುಘನತರದಾ || ಸಮ್ಮದದಿಮೃದುಭಾಷಣಗಳಿಂ | ದಮ್ಮಹಾತ್ಮರ
ನುತಿಸೆಸಭ್ಯರು| ತಮ್ಮರಸನಂನೋಡುತತ್ಯದ್ಭುತವಿದೆನುತಿರಲೂ ||೩೭||
ಅಮಿತರತ್ನಸುಭೂಷಣಗಳಿಂ | ವಿಮಳತರಕನಕಗುಣರಚಿತೋ | ತ್ತ
ಮವಸನವಿಸರಂಗಳಿಂಸನ್ಮಾನಿಸುತೆಮುದದೀ || ಪ್ರಮದೆಯರಸೀಮಂತ
ಮಣಿಯುಹ | ಕಮಲಸನ್ನಿಭವದನೆಗುಂಮೇ | ಣಮಲಶ್ರೀಬಸವೇಶ್ವರಂ
ಗುಂನಮಿಸಿಲೋಕದೊಳೂ ||೩೮|| ಭರಿತಸತ್ಕೀರ್ತ್ಯನ್ವಿತದಿನುತಿ | ವೆ
ರಸಿಪರಮಸುಚರಿತದಿಂಸುರು | ಚಿರನೆನಿಸುವರ್ಭಕಗೆಕಲ್ಯೋತ್ಸವವ
ನೆಸಗುತ್ತೆ|| ನಿರುಪಮೂನನಿರಂಗನಿಶ್ಕಲ | ಭರಿತಸಹಜಾನಂದಸುಸ್ಥಿರ |
ಪರಮಪರತತ್ವಾನುವೇತ್ತರುಘನಸುಖದೊಳಿರಲೂ ||೩೯|| ಸಂತಸದೊ
ಳಾನಾಗಮಾಂಬೆಯು | ಕಾಂತೆಯುರುಸೇವಿಸುತಿರಲುಮ | ತ್ಯಂತಭವ್ಯ
ಸ್ವಾಂತಪಂಕೇರುಹನಿಯುತರಾಗೀ || ಕಂತುಹರಲೀಲಾಸುವಿಗ್ರಹ|ರಂ
ತವಿಲ್ಲದಪೂರ್ವವಿಭವವ | ನಂತವಾಳುತೆನೈಜಭವನಕೆವಿಜಯಮಾಡಿದ
ರು ||೪೦|| ಬಸವರಾಜಂಮುತ್ಸುಧಾಮ | ಗ್ನಸಹಮಾನಸನಾಗುತಂತ |
ದ್ವಸುಮತೀಶಾನುಮತದಿಂಪುಷ್ಪಕವಿಮಾನದಪೆಂ || ಪೆಸೆವದಂತಾವಳದ
ಮೇಲಾ | ತ್ಮಸಹಜಾತಾತನುಜನಂಮಂ | ಡಿಸುತೊಡನೆತಾಂಕುಳ್ಳಿರ
ಲ್ಕೆಸಿತಾತಪತ್ರಗಳೂ ||೪೧|| ಅಧಿಕವಾಗಿರೆಘೇರಿಮುರಜಗ| ಳುಧಿಮಿಧಿ

ಮಿಕಿಟಥಕಿಟವೆಂಬಸು | ವಿಧದರಾವಂಭೋರೆನುತೆಭೋರ್ಗರಯಿಸಂಭ್ರ
ಮದಿಂ || ಬುಧನುಗಣಿಕಾನಾಟ್ಯಗಾಯಕ | ಮಧುರಗಾನವಿನೋದದವ್ರೊ
ಳುಮ | ಭ್ಯಧಿಗತಸುಮಾಗಧರುಗಳಕೈವಾರಶೋಭನದೀ ||೪೦|| ಭಿ
ತಚಾತುರ್ವಿಧಬಲವುಕಿ | ಕ್ಕಿರಿದುನಡೆತರೆವೇತ್ರಹಸ್ತರು| ಸರಭಸದಭ
ವಿತತಿಯಿಂಸಂದಣಿಯುತೊಲಗಿಸಲೂ || ಪರಮುಭವುಕಾಲಂಕೃತದೆವಿ|
ಸ್ಫುರಿತರವಿವಿಧುವೀಧಿಗಳುತುಂ | ಬಿರಲುಮತಿವಿಜಯಾನ್ವಿತರುವಿಭ್ರಾಜ
ಮಾನತೆಯಿಂ ||೪೩|| ಘನಬಸವಮಂತ್ರೀಶನಂತರ | ಳನನುಮಾದೇವಿಯು
ರಪೌರಸು | ಜನನಿಕರವೀಕ್ಷಿಸುತೆಕೊಂಡಾಡಿದರದೆಂತೆನಲೂ || ವನಜ
ಮುಖಿನೀಬಾರೆಲೌಶೋ | ಭನಸುಸಹಜಾಕೃತಿಸುಷುಮೆಗೆಣೆ | ಯೆನಿ
ತಹರುಪುರುಹೂತಕಾಮಕುಬೇರತನುಭವರೂ ||೪೪|| ವನರುಹಾಸ್ತ್ರ
ಪ್ರಮುಖರಾಗಿ | ರ್ಪನಿಮಿಷಾಳಿವಿವರ್ಣಿತಸುರು | ಚ್ಯನುಪಮಿತಸುಗು
ಣಾಭಿರಾಮುರನಚಲಧೃತಿಯುತರಾ || ಧನದಸಖಸೇವಕಹಿತರಚಿ | ದ್ಘನ
ಮಹಿಮಜಯುಪತಿತಪಾವನ | ವೆನಿಪನಾಮರಲೋಕದೀಪ್ತಯಶಃಪ್ರಥಾ
ನರನೂ ||೪೫|| ಎಡೆಯೆಡೆಯೊಳಬಲೆಯರುಸನ್ಮಣಿ | ಯೊಡವೆರದಚಿ
ನ್ನದಗೆಲಸದಮು | ಹಡಿಯಮೇಲ್ಭಾಗದೊಳುಸಿಂಗರವೆನಿಸಿನಿಂದಿರ್ದ್ರೂ|
ಕಡುಮುದದಿನವಸುಮಾಕ್ಷತೆಗಳ | ಗಡಣವೆಂಬಸವರಸನಾತನ | ಒಕ
ನೊಗೆದಯುಕ್ಕಗಳಮೇಣ್ತದ್ವರತನೂಭವನ ||೪೬|| ಮೇಲೆಚಲ್ಲುತ್ತಿರ
ಲುಸರ್ವಜ | ನಾಳಿಯುತ್ಯಾಶ್ಚರ್ಯಗೊಂಡಪ | ಕಾಲದೊಳುಪಾರುವರಪ
ಣ್ಣುಳುಕೂಡಿಜೊತೆಜೊತೆಯಿಂ || ಸಾಲಿಡಿದುನಿಂದಿರ್ದುವುಹಿತವಿ | ಶಾ
ಲವಹಮಿಸುನಿಯುತಳಿಗೆಯೊಳು | ಕೀಲಿಸಿಹಶುಭದಾರತಿಗಳಂ ಎತ್ತಿದರು
ಮುದದೀ ||೪೭|| ವಿಲಸಿತಸುಮಣಿಮಯಪ್ರಸಾದ | ಸ್ಥಲಗಳೊಳುನೆರೆ
ನಿಂದುನೋಡುವ | ನಳಿನಲೋಚನೆಯರುಗಳಾತ್ಮದೊಳುಬ್ಬಿತವರ್ಮ್ಮೊ
ಗೇ||ಕಲಕಲಧ್ವನಿಯುತಪಿಕಸ್ವರ| ಕಲಿತಪದ್ಧತಿಯಿಂದಲಾನಿ|ರ್ಮ್ಮಲತರಾ
ತ್ಮಂನಾಗಮಾಂಬಾಕರ್ಣಸಂಜಾತಂ ||೪೮|| ತರಳಲೋಚನೆಈತನೇನಿ
ರ್ಭರಸುಗರ್ಭಾಂತರದೊಳಗೆಪ | ನ್ನೆರಡುವರುಷಗಳಿರ್ದನಿರ್ವಿಷಯೈ
ಕವಿಗ್ರಹನೂ|ಸರಸಿಜಾನನೆಈತನೇಪುರ|ಹರನೆನಿಸುವೆರಡನೆಯಮೂರು

ತಿ| ಕರಿಗಮನೆಕೆಈಸುಕೃತಿಯೀತಾಯ್ಕುಂದನಳಿಸಿದವಂ ||೪೯|| ರಾಜಮು
ಖಿಯೀಕೇಳುಬಿಜ್ಜಳರಾಜನಿಂ | ಮನ್ನಿಸಿದಮಹಿಮನಸ |ಮಾಜನಂನೋ
ಡಿದೆವುಕಣ್ಗಳಬರವುಹರಿವಂತೇ || ಈಜಗದಿಪುಟ್ಟುತ್ತೆ ಸಫಲವ | ನೋಜಿ
ಯಿಂಜನ್ಮಕ್ಕೆನೆಗಳ್ದೆವು | ನೈಜವೆಂದಲ್ಲಲ್ಲಿಕರಗಳಮುಗಿದುತರುಣಿಯರು
||೫೦|| ವಿವಿಧದಿಂನುತಿಸುತ್ತೆನಮಿಸುತೆ | ತವೆಮುಗುಳ್ದಿಂತೆಂದರವರೆಲೆ |
ಯುವತಿಯೀದ್ವಾದಶವರುಷಗಳುತಾಯಬಸುರಿನೊಳೂ || ಅವಿಕಲತೆ
ಯಿಂದಿರುವುದಾಶ್ಚರ್ಯವುಜಗದೊಳಲ್ಲದೆಥರಿತ್ರೀ | ಥವನುಕರೆಯಿಸಭಾಂ
ತರದಿನುಡಿದುದೆವಿಚಿತ್ರವದೂ ||೫೧|| ನುಡಿದುಜನನಿಯಕರ್ಣಪಥದಿಂ|
ದೊಡನೊಗೆದುದತಿವಿಸ್ಮಯವಿದಾ | ಜಡಜಮುಖಿಬಸವೇಶ್ವರನಪ್ರತಿಬಿಂ
ಬವೆನಿಸಿಹನೂ || ಮೃಡನಭಕ್ತರಸುಪ್ರಮೋದದ | ಕಡಲಿಗಿವನುಡು
ಪತಿಯುನಿಶ್ಚಯ | ಪಡೆವಿಡದಕರುಣಾಲಪಾಲನೆನಿಪಶುಭಾಂಗನಿವಂ ||
ಆಲಲಿತಶರಣಪ್ರಸಾದಜ | ಸೀಲನೆಂತಹಪುಣ್ಯಮೇರುವೊ | ಆಲಿಸಲ್ಕೀ
ತನವೊಲಾರ್ಬಲ್ಲದರುಜಗದೊಳಗೇ || ಬಾಲಶಂಕರರೂಪನತಿಶಯ |ಲೀ
ಲೆಯಿಂನೋಜಿಗವೆನಲುಪಮ | ಥಾಳಿಯೊಳ್ತೋರ್ಪಂತೆಕಾಣಿಸು
ತಿಹನುಕಕ್ಕಯನ ||೫೪|| ಸುಲಭವಪ್ಪಪ್ರಸಾದಪಿಂಡಕೆ | ನೆಲೆಯನಿಸಿ
ತಾಗರ್ಭವಂತೀ | ಲಲನೆಯುಂಬೆಸಗೊಳಲದೇನುಸುರುವಳುಕೇಳ್ದರಿಗೇ||
ಮಲಹರನಸದ್ಭಕ್ತಿಯುತೆನಿ | ರ್ಮಲೆಗಡಾಮೇಣ್ಮುಗ್ಧೆಸಾಧ್ವಿವಿ | ಮಲ
ಗುಣಿಯುನವರಾಧೆಯೆಂದವರಾಥಕೆಣೆಯುಂಟೀ ||೫೪|| ಪರಮಸುಪವಿ
ತ್ರೆಯುಮೆನಿಸುವೀ | ಸರಸಿಜಾಕ್ಷಿಯಭಾವವರಿಯದೆ | ದುರುಳಚೇ
ಷ್ಟಾನಿರತೆಯೆಂದೀಯಕ್ಕನಾಗಮನಂ || ಪರಿಪರಿಯನಿಂದೆಗಳನಾಡಿದ |
ದುರಿತಪರಿಹರಕಾವಮಾರ್ಗವು | ಹರಹರಾಯವಿವೇಕಿಗಳಿಗಿನ್ನೆಲ್ಲಿಸದ್ವಚ
ನಂ ||೫೫|| ಕುಸುಮಬಾಣಾಸನಮದಾಪಹ್ಯ | ದಸಮಮುರ್ತ್ಯವರಾ
ವತಾರಂ | ಬಸವನಾತನೊಡನೆಜನಿಸಿಹಳುಶರಣವದಲಗ್ನಾ ||ಭ್ಯಸ್ತನಮೊ
ನಸಬಿಸಜೆಯನಿಸುತ | ಲೆಸೆವುತಿಹಸುಪವಿತ್ರಸದ್ಗುಣ |ವಿಸರಸಾಧ್ವಿಗೆ
ಲೋಕದವರೋಲ್ವಾಂಛೆಪುಟ್ಟುವುದೇ ||೫೭|| ಎಲೆಸಖಿಯೆತಿಳಿಯದಲೆ
ನುಡಿದಾ | ಹಲವುಮಾತುಗಳಿಂದೆಘಟಿಯಿಸಿ | ದಲಘುಪಾತಕವೀಮಹಾ

ತ್ರರದರ್ಶನದಫಲದೀ ॥ ಸುಲಭವಿಂತೊಲಗಿತ್ತುಮುಕ್ತಿಯ | ಲಲನೆಯೊ
ಡಗೂಡಿರ್ಪಸೌಖ್ಯದ|ನೆಲೆಯತುದಿಯೊಳುಪ್ರೊಂದಿದಾಸದ್ಧನ್ಯರಾದೆವಲಾ॥
॥೫೭॥ ಇಂತುನುತಿಸಿಕರಗಳನೆತ್ತಿಯ | ನಂತವಿಧದಿನಮಸ್ಕರಿಸುತಂ|ನಿಂ
ತುಪಟಹಢವನೂಮಿಮುರಜಾಭೇರಿಶಬ್ದಗಳಂ ॥ ಸಂತಸವನಾಳುತ್ತೆ ಕೇಳ್ವ
ತ್ತ್ಂತವಿಲ್ಲದಸೊಬಗುಸ್ನೋಜಿಗ | ವಂತುನೋಡುತನಿಬ್ಬರಗಿನಿಂಸ್ವಾಂ
ತವರಳುತ್ತಂ ॥೫೮॥ ಈವಿಧದಿಪ್ರೆರಜನನಯನಗಳಿ | ಗೇವಿಶದದಿಂಪರ್ವ
ವಾಗೆಸು ! ಭಾವಹವಿಯಾಚಕರವಾಂಛಿತವಿತ್ತಸಮಯದೊಳೂ॥ಶ್ರೀವಿಭ
ವದತಿಶಯವನಖೇಚರ | ದೇವತೆಗಳದ್ಭುತದಿಕೀರ್ತಿಸ | ಲಾವಿನೋದವಿಶೇ
ಷದಿಂನಿಜಗೃಹವೆಡೆಗೆಬಂದೂ ॥೫೯॥ ನಿರುಪಮಿತಭದ್ರೇಭದಿಂಸ | ತ್ವ
ರಮಿಳಿದುಭಗಿನೀಸುತನಸುಂ| ದರಕರವಬಸವೇಶನಾನಿಜಕರದೆಪಿಡಿಯು
ತ್ತೆ ॥ ಬರುತಿರಲುಕಂಚುಕಿಗಳ್ಗಾಗಳ್ | ಪರಿಯಿಸಲ್ಪಂಡಣಿಯುಮುನ್ನಡೆ
ತರುತೆಕಾಂಚನಸಿಹ್ಮದ್ವಾರಂಬೊಕ್ಕುಹರುಷದೊಳೂ ॥೬೦॥ಭರ್ಮ್ಮಮ
ಣಿಸಮುದಂಚಿತಸಭಾ | ಹರ್ಮ್ಯದಂತರರತ್ನಪೀಠದಿ | ನಿರ್ಮ್ಮಲಿನಭಾವಿಕ
ನೆನಿಪಭಗಿನೀತನೂಭವನಂ ॥ ಪೇರ್ಮೆಯಿಂಕುಳ್ಳಿರಿಸಿಭೂಭೃ| ದ್ಧರ್ಮ್ಮಸ
ಮಮೂರುತಿಯುನಾದಿಯ | ಧರ್ಮ್ಮರೂಪನುಮಲ್ಲಿಯೇಮೂರ್ತ್ತಿಸುತಲಾಕ್ಷ
ಣದಾ ॥೬೧॥ ನಿರುಪಮಾನವಿಲಾಸಚೋದ್ಯಸು | ಪರಿಕರವಕಾಣುತ್ತೆ
ಕಾಂಚನ | ವರಪಟಾವಳಿಮಣಿಮಯಸುಭೂಷಣಸಮಾಜವನು॥ ಸರಸ
ಕವಿಬುಧಮೌರಜಿಕಬಂ |ಧುರಪ್ರವಾಂಶಿಕವೈಣಿಕನಿಕರ |ವರನಟನಕಾ
ರರಿಗೆಸಿರಿತುಳುಕಾಡುವಂದದಲೀ ॥೬೨॥ ಅವರವರನಾದರಿಸುತಂನಿಜ ! ಭ
ವನವೈದಲನುಜ್ಞೆಯಿತ್ತುತ್ತಿ | ಭುವನಪೂಜ್ಯನೆನಿಪ್ಪಬಸವೇಶ್ವರನುಮಾ
ಬಳಿಕಂ ॥ ಸವಿನಯದೊಳಳಿಯನೊಡಗೂಡು | ತ್ತವೆಂಬಳಮನೆಯಪೊ
ಕ್ಕುಮಾತ್ರಿಕ | ಯುವತಿಯುಹಗಂಗಾಂಬೆಗುಂಮುಖ್ಯಾಂಗನಾಜನಕೆ ॥
॥೬೩॥ ಭಾಗಿನೇಯನನವರ್ಗೆನಮಿಸ | ಲ್ಗಾಗಿಕಳುಹುತೆಪೋಗಿಸಮುಚಿ
ತ | ವಾಗಿರುವಪರಿವಾರಮುಕ್ತನುಮಾಗಿಸದ್ಗೋಷ್ಟೀ ॥ ಭಾಗಧೇಯಂ
ಶರಣನಿವಹದೊ | ಳಾಗಗಣಸಿಂಹಂಗಳೆನೆಭವಿ| ತಾಗಲವನಂಸೀಳಿಮತ್ತ
ಸುವಿತ್ತಮಾಚಯ್ಯಂ ॥೬೪॥ ಮಣ್ಣನೇಕರದೊಳಗೆಪಿಡಿದೊಳೆ | ಹೊ

ನ್ನನೆಸಗುತೆಸುಪ್ರಸಿದ್ಧದಿ । ಧನ್ಯನಹಕಲಕೇತಬೊಮ್ಮಯನಲ್ಲದತಿಶ
ಯದಿಂ ॥ ಸನ್ನುತಸುಜಂಗಮಪದಾಂಬುವ । ನಿನ್ನುಚೆಲ್ಲುತೆಕಟ್ಟೆಗೆಗ
ಳಂ । ಚೆನ್ನವೆನಿಸಿದಮೋಳಿಗೆಯಮಾರಾರ್ಯನಿರುತಿಹನೂ ॥೬೫॥ ಕಡುಗೆ
ದಿಂಖಲನಂಕಡಿದುಮಾ । ಮೃಡನನುಡಿಸುತೆಮಡಿಡಮನುಜನಿ । ಗೊಡನೆ
ಯಸುಗಳನಿತ್ತಕಿನ್ನರಬೊಮ್ಮನಿರುತಿಹನೂ ॥ ಪೊಡವಿಯೊಳಗೇಳ್ನೂ
ರುಬರಿಸಂ । ಜಡಜಜನಮಿತಿಮೀರಿವರ್ತಿಪ । ಕಡುಗಲಿಯೆಸಕಳೇಶಮಾದ
ರಸಾದಿಜಂಗಮರೂ ॥೬೬॥ ಭರಿತಸಂತೋಷದೊಳುಬಂದಿರೆ । ಪರಮ
ಗೌರವದಿಂದೆಬಸವೇ । ಶ್ವರನುಮೆಲ್ಲರಮೆಲ್ಲಡಿಗಳಿಂಗೆರಗಿಕರತಂದೂ ॥
ಸುರುಚಿರಾಸನಗಳಲಿಯತಿಸಾ । ದರದೊಳುಂಕುಳ್ಳಿರಿಸಿಯಳಿಯನ । ನಿ
ರದೆಪ್ರೀತಿಯೊಳವರನವಿಸಲ್ಕಳುಹಲತಿಶಯದ ॥೬೭॥ ಭಕ್ತಿಯಿಂದಿಹಸ
ಮಯದೊಳುಮೃಡ । ಭಕ್ತಿಪಟ್ಟಸುಬದ್ಧರೆಲ್ಲರು । ವ್ಯಕ್ತದಿಂದೇಕವಚ
ನದೊಳೆಂದರುಬಸವನಿನ್ನ ॥ ಭಕ್ತಿಸನ್ಮಾಹಾತ್ಮ್ಯಯುಸುರಲ । ಶಕ್ತ
ನಾದಂಬೊಮ್ಮನೆರೆಯು । ದ್ರಿಕ್ತದಿಂಸಮಯದೊಳೆಪ್ರತ್ಯಯವಿನ್ನು
ತೋರುವುದೂ ॥೬೮॥ ನಿನಗೆಸಲ್ಲುವುದಂತುಮಲ್ಲದೆ । ವನಿತೆಸಹಜೆಯೆ
ನಿಪ್ಪನಾಗ । ಮ್ಮನಯಶೋನ್ವಿತೆಸನ್ಮಹಿಮೆಯೇನೆನಲುಬಹುದಯ್ಯಾ ॥
ಘನತರದೆತತ್ಕರ್ಣಸಂಭವ । ನೆನಿಪಸುಕುಮಾರನಮಹಿಮೆಯಿಂ । ತೆನು
ತೆಬಣ್ಣಿಸಬಹುದೆಭಾಸ್ವದ್ರತ್ನವರ್ಯಗಳಂ ॥೬೯॥ ಒಂದೆಡೆಯೊಳೇಕೂ
ಡಿಸಿದಬಾ । ಲೇಂದುಧರನಂಮೆಚ್ಚುವುದುಚಿತ । ವೆಂದುಕೊಂಡಾಡುತ್ತ
ಲಾಬಾಲಕನಕೂರ್ತವರೂ ॥ ಎಂದರೆಲೆಬಸವೇಶ್ವರನೆಯಿಂ । ಕಂದನಸು
ಚಾರಿತ್ರವಿನಯಸು । ಬಂಧುರತೆಯುಚಿತಜ್ಞತೆಯದುಮನೋಜ್ಞತರ
ಭಾಷಾ ॥೭೦॥ ಪರಿಕರವದೀಯಚಲಜಂಗಮ । ಚರಣಸರಸೀರು
ಹಸುಭಕ್ತಿಯು । ಪರಮಶಾಂತಿಯಭಾಸುರತೆಯಂಭಾವದೊಳುನೆ
ನದೂ ॥ ಪರಿಕಿಸುತೆನೋಡಲ್ಕೆತುಲೆಯೊಳೆ । ಗಿರಿಸಿತೂಗಿದವಿಧದಿಸರಿ
ಬರು । ತಿರುವನಲ್ಲದೆನಿನಗೆಕಡಮೆಯದಿಲ್ಲವಣುಮಾತ್ರಂ ॥ ೭೧ ॥ ಶ್ರೀ
ಕರಾಭವಭಕ್ತಲೋಕಾ । ನೀಕಪಿಕಸಂಕುಲರಸಾಲಾ । ನೋಕಹವ
ನುರೆಪಲ್ಲವಿಪಬುತುರೂಪನಾಗಿಹನೂ ॥ ಪ್ರಾಕಟಿತಚರಬಾತಕಾಂಡಜ ।

ಕೇಕಮಲದನೆನಿಸುವನನಘಪಿ | ನಾಕಿಯುಕ್ಕೃಕ್ರಂಗಳಿಗೆಕಮಲಾಪ್ತ
ನೆಂದೆನಿಪಂ ||೭೨|| ಕಲಿತಮಾಹೇಶ್ವರಚಕೋರಕ | ಕುಲಕೆರಾಕಾಶಶ
ಧರಂಭಲ | ಭಲರೆಘನತರದಿವ್ಯಪುರುಷನರಸನೆಯಿಂನುತಿಸೇ || ಸುಲಭ
ವಾಯಿತುಕಣ್ಣಳಿಂಕಾಂ | ಬಲಘುಭಾಗ್ಯನಿಯುಕ್ತರಾದೆವು | ಲಲಿತ
ಮೋಕ್ಷಾಂಗನೆಯಿವಗೆಮರುಳಾಗದಿರುತಿಹಳೇ ||೭೩|| ಈ ವಿಧದಿಸಕ
ಲಾವನಿಯುನುಂ | ಪಾವನವಮಾಡುವಕತದೆದು | ಭಾವಡುಷ್ಟಮತಸ್ಥ
ರಂಶಿಕ್ಷಿಸುವಕಾರಣದೇ || ಕೇವಲಸುಸದ್ಭಕ್ತಿವರ್ಧಿಸು | ವಾವಸರವಿಧಿ
ದವತರಿಸಿದಂ | ಸಾವಧಾನನೆನಿಪ್ಪಮಹಿಮಾಕರನುಬಸವೇಶಾ ||೭೪|| ಅ
ತುಲಿತಸುಸದ್ಭಕ್ತಿಜ್ಞಾನಾ | ನ್ವಿತವಿರತಿನಿಷ್ಠಾಗರಿಷ್ಟಗೆ | ಪ್ರತಿನಿಧಿ
ಯುನಿನಗೀಮಹಾತ್ಮನುಮೆನಿಪಕತದಿಂದೇ || ವಿತತವಾಗಿಹನಿನ್ನನಾಮ
ನಿ | ಯುತಪುರಸ್ಸರದಿಂಕರವೆವೆಂ ! ದತಿಶಯದಿಭಕ್ತಾಭಿವಾಂಛಿತವಾಗಿ
ರುವುದೆಂದೂ ||೭೫|| ನುಡಿವಳಯ್ಯಂಮುಖ್ಯವಾಗಿಹ | ಮೃಡನಶರಣ
ಗಣಂಗಳೆಲ್ಲರು | ನುಡಿದವಾಕ್ಯಂಗಳಿಗೆಯದರಂತಾಗಲಿಯದಾಗಿ || ಒಡೆ
ಯಸಂಗಮನಾಥದೇಶಿಕ | ರಡಿಗಳಾಣತಿಯಿಂತೆಯಾಗಿ | ರ್ಪೆಡೆಯೋಳ
ಲ್ಲರುನಾಮಕರಣವಮಾಡಿರೆನಲವರೂ ||೭೬|| ಅಸಮುಪ್ರಮುದಿತರಾಗು
ತಂಚೆನ | ಬಸವರಾಜನೆಎಂದುನುಡಿಯಲುಬಸವದಂಡಾಧೀಶ್ವರಂಸಂ
ತೋಷಭಾವದೊಳೂ || ಶಶಿಧರಾಭರೆನಿಪ್ಪಪ್ರಮಥರ | ನಿಸರಪ್ರಿಯಕರ
ಕಾರ್ಣದಚಿ| ದ್ವಸಿತವೀಳ್ಯಸುವಸ್ತ್ರಭೂಷಣಪ್ರಸರಗಳನಿತ್ತೂ ||೭೭||
ದಲಿತದುರಿತರುನುಪ್ಪಭಕ್ತಿಸ | ಫಲಿತರೆಲ್ಲರುಮಾಬಸವನುಂ ! ಸುಲಲಿತ
ದಶಿವತತ್ವಗೋಷ್ಟಿಯೊಳಿರ್ದಸಂಭ್ರಮದಾ || ಇರವನುಸುರಲ್ಬಹುದೆ
ಯಂತೆ| ಪ್ಪಲಘುಕೌಶಲನಿಯುತವಚನದೆ| ಸಲೆಸುಖದೊಳೊಪ್ಪಿರ್ದರಖಿ
ಳಶಿವಾನುಭಾವಿಗಳೂ ||೭೮||

ಅಂತು ಸಂಧಿ ೮ಕ್ಕಂ ಪದ ೩೭೭ಕ್ಕಂ ಮಂಗಳಮಹಾ.

## ಚಿತ್ರಕನ್ಯೆಯಕಥೆ.

ಸೂಚನೆ || ಧಾತ್ರಿಯೊಡೆಯನನುಜೆಯೆನಿಸುವಾ ! ಚಿತ್ರಕನ್ಯಕೆ ಎಂಬಳಂಸುಖ | ವಿತ್ರಿಯನಿಸುತೆಬಸವಿಯಂಮಾಡಿದನುಬಸವೇಶಂ ||

ಪದ|| ದ್ವಾರಪಾಲಕನಾಸಮಯದೋ |ಳ್ಸಾರಿಪೇಳ್ದಂದೇವಮರ ಕತ | ಹೀರಮೌಕ್ತಿಕರತ್ನವೈಡೂರ್ಯೇಂದ್ರನೀಲಮಯಾ|| ಚಾರುತರಕಂ ಕಣವಿರಾಜಿತ | ಸಾರಕರಯುಗ್ಮಂಗೃಹಬಹಿ | ದ್ವಾರದೇಶದಿಭೋರೆ ನುತೆಬಿದ್ದಿಹುದುಚಿತ್ತವಿಸೂ ||೧|| ಬೇಗಬಂದಾಶ್ಚರ್ಯದಿಂಬೀ | ಳ್ವಾ ಗುಪಿತಬಗೆಯೇನೊತಿಳಿಯಪ | ದಾಗಿಯಾಭರಣಾಕಲಿತವಾಗಿರುವುದಂ ನೋಡೆ || ಸೋಗೆಸೋರ್ಮುಡಿಯುಳಕರಗಳಿನ | ಲಾಗಿಶರಣನಿವಹದೊಡ ನೆಬಂ | ದಾಗಬಾಹ್ಯದ್ವಾರವಾಟಿಕೆಯಲ್ಲಿಬಿದ್ದಿರುವಾ ||೨|| ಕರಗಳಂ ನೋಡುವುದಕಾಪರಿ | ಚರಜನಂಮುಂದೆಸೆಯೊಳೈತರು | ತಿರಲುಃಬಸವ ಣಪಂಡನಾಥಂಬರ್ಪಸಮಯದೊಳೂ || ಪರಿಪರಿಯಭಕ್ತನಿವಹಾನ್ವಿತ ! ನಿರುತರುಂತತ್ಕರನಿರೀಕ್ಷಣ | ತ್ವರಿತರುಂಮಹಾತ್ಮ್ಯಭರಿತಸುಚರಿತರನಿ ತರೊಳು ||೩|| ಬಂದುಕಂಡರಪೂರ್ವಶೋಭಾ | ಮುಂದಸುಂದರಹಸ್ತ ಯುಗ್ಮವ| ನಿಂದುನೋಡಿಮನೋಂಬುಜದೊಳಚ್ಚರಿಯಗೊಂಡಾವ || ಮುಂದಗಮನೆಯಕರಗಳೋಯೆ | ಲ್ಲಿಂದಬಂದವೊಇಲ್ಲಿಗೆನ್ನಲು | ಮುಂ ದೆವಂದಿಸಿಬಂದಚಾರಂಪೇಳ್ದನವರೊಡನೇ ||೪|| ಚದುರಬಿಜ್ಜಳನೊಡ ನೊಗೆದಪು | ರ್ಮದನಿಯುತೆಯಹಚಿತ್ರಕನ್ಯೆಯು | ಮದನಕದನಕ್ಕಿದಿ ರಕಾಣದೆಕುದುರೆಕಾಯ್ವವನಂ || ಎದೆಯೊಳಪ್ಪತಕ ೂಡೆಕುಲಸೀ | ಲದ ವಿಧಿಯುಮನ್ನಣೆಯುನೀತಿಯು | ಹೃದಯದೊಳುನಾಚಿಕೆಯನುವುದ ಣುಮಾತ್ರವಿಲ್ಲದಲೇ ||೫|| ಪೊರಗಿನವನಂಆನುಜೆಕೂಡಿದ| ಪರಿಯನಾ ಪ್ತಂಪೇಳೆಕೇಳಲು | ಉರಿಯಗೊಂಡಶಲಾಕೆಕಿವಿಯೋಳ್ಚುಚ್ಚಿದಂತಾ ಗೆ || ಧರೆಯರಸದಿಗಿಲ್ಗುಂಡಿಗೆಯನುಡಿ | ಬರವಡಗಿವೊಗವಿಳೆಯನಿಟ್ಟೆ ಸೆ | ಭರಿತಸಂತಾಪಾಬ್ಧಿಯೊಳುಕೆಲಹೊತ್ತುಮುಳುಗೆದ್ದು ||೬|| ರಮ ಣಿಯುದುರಾಚರಣೆಯರುಹಿದ | ಸುಮನನೊಡನಿಂತೆಂದನತಿದು | ಷ್ಕ್ರ

ಮದೊಳೆಂತಹಸಾಹಸಾತ್ಮಕಳಾಗಿರುವಳಹಹಾ ॥ ಅಮಿತಕಲ್ಮಷೆಯಾಗಿ
ಗಂಡನ । ಸಮುಚಿತದಮರ್ಮಗಳಬಿಟ್ಟಳು । ಭ್ರಮದಿಬಂಧುಕುಲಾಳಿಕೀ
ಳ್ಗಿಳಹಿಸ್ಕೃತವನೂಳ್ಪ ॥೭॥ ಭೀತಿಯಿಲ್ಲದೆಈಸತಿಯಳತಿ । ಪಾತಕವಿ
ದೆನ್ನ ದೇವರನಬಹು । ಘಾತಕನಸಖ್ಯವನುಮಾಡಿದಳಯ್ಯೊಯಬ್ಜಜನಾ ॥
ನೀತವನುವಿಚಾರಲುಬಹುದೆದಾ । ಮಾತುಮರುಗಳಿಗಾದೊಡಿಳೆಯೊಳು ।
ಯೇತಕಾಡಿದೆನಯ್ಯೊಬಸವಾಧಿಪನಸೋದರಿಯಾ ॥೮॥ ನಿಂದಿಸಿದಫ
ವದುವೆತಾನೆ । ಲ್ಲಿಂದಪ್ರೋದಪುದೊಡನೆಯುಣಿಸಲ್ ! ಬಂದುದಿದುನ
ನಸಿಜನವೈರಿಯಕಾಂತೆಗೆಣೆಯಪ್ಪಾ ॥ ಸುಂದರಿಯಮೇಲ್ಮುಕ್ಕಂಡಪ್ರೊ
ಸಿದೆ॥ಮುಂದಮುಕಿಯಿಂಸಂದಕಾರ್ಯ ! ಕ್ಕಿಂದುಸಂತಾಪಿಸುತೆನೊಂದಡ
ಚಂದವೆನಿಸುವುದೇ ॥೯॥ ಖಳಜನರುನಿಂದಿಸಿನಗಲುಮಾ । ವಳತೆಯಿಂ
ಸೈರಿಸಲದೆಂತ । ಗ್ಗಳದಕುಹೃದೆಯಮುಖವನೋಡುವೆನೆಂತೆನುತ
ಕೋಪಾ ॥ ಕುಳಿತಮಾನಸನಾಗಿಯಶ್ವಂ । ಗಳನುಕಾಯ್ವನನಿಸಿತಶ
ಲ । ಕ್ಕಿಳಿಯಹಾಯ್ಕಿರೆನುತ್ತಲಪ್ಪಣೆಯಿತ್ತುವ್ರೊಳಮನೆಗೇ ॥೧೦॥ ಸ
ಸರನೆಪ್ರೋಗುತ್ತೆಸುಂದರಿ । ಯರುಸುಭಾಮಿನಿಯರುಗಳೂಳಿಗ । ವೆರ
ಸಿರಿಯಿಂದಿರುವತನ್ನ ಯತಂಗಿಯಂನೋಡೀ ॥ ಸ್ಫುರಿಪರೋಷವತೋ
ರಲೀಯದೆ । ಕರೆಯುಲೊಡನೆಯೆಎದ್ದುಬರ್ಪಳಿ । ಗರಿಕೆಯಾಗಡತೆರ
ಹೊರಗಣ್ಣೊಬ್ಬಳನೆಕರೆದೂ ॥೧೧॥ ತಾನುಮುನ್ನಲ್ಲಿರೆನಿಗೂಢ । ಸ್ಥಾ
ನದೊಳುನಿಲಿಸುತೆನಿಂತನಿ । ಜಾನುಚರರಾತ್ಮಾಧಿನಾಥನಕಂಡುನಮಿಸ
ಲ್ಕೆ ॥ ಮಾನಿನಿಯನವರಿಂಗೆತೋರಿಕು । ಜಾನಿಯುವರೊಡನೆಂದನೆ
ನೀ । ಮೀನಿತಂಬಿನಿಯನತಿಘೋರಾಟವಿಗೆಕೊಂಡೊಯ್ದು ॥೧೨॥ ಅ
ಯಿನೀಡುಷ್ಟೆಯಸಿರವತುಂ । ಡಿಸಿರೆನುತಲಾಣತಿಯುಗುಡೆವಂ । ದಿಸೆ
ಹೋದರಿಯತ್ತನೋಡದೆಶೀಘ್ರದಿಂತೆರಳೀ ॥ ಸಸಿನೆಯಿಂದೀಚೆಗೆಬರ
ನಿ । ರ್ಹಸಿತಮುಖಿಯಂಭೀಕರಾಟವಿ । ದೆಸೆಗೆಕೊಂಡೊಯ್ವುತ್ತೆನಿ
ಸಿಕೊಲ್ಲುವನಿತರೊಳೂ ॥೧೩॥ ಬಾಲೆಯಾಸೌಂದರ್ಯಮಂತ । ಲ್ಲಾ
ತಾತುಲದೈನ್ಯವೀಕ್ಷಿಸಿ । ಯಾಲತಾಂಗಿಯನೆಂತುಕೊಲ್ಲುವೆವೀಕರಗಳಿ
ದೆ ॥ ಕಾಲಕರ್ಮವಿದೇನೆನುತ್ತೆಕೃ । ಪಾಲವಾಲರತೆರದೊಳೆಂಡರು । ಲ

ಲಲೋಚನೆಯೊಳಮನೆಯೊಳಿರ್ಪಾಕೆಯಿವಳಿಂಗೇ|೧೪|ಹೊರಗಡೆಯೊಳಿ ರ್ದಶ್ವಪಾಲನ| ನರಸಸಂಗವದೆಂತುಘಟನವಿ|ದರರೆಸಹಜಾತೆಯನುಕೊ ಲ್ಲಲದೆಂತುಭೂವರನು || ಕರುಣವಿಲ್ಲದೆಪೇಳಿರುವನೋ | ಪರಮಸು ಖಯುತೆರಾಜಸುಂದರಿ | ಬರಹಫಣೆಯೊಳದೆಂತುಬರೆದನೊಸರಸಿಜಾಸ ನನೂ||೧೫||ಈಯುಬಲೆಯುಂಕೊಲ್ಲಿಸುವದ| ನ್ಯಾಯಕಾರ್ಯವಿದೆಂಡುವಿಬು ಧರು | ರಾಯನಂಬೋಧಿಸುವರಾರಿಲ್ಲಾ ಡರೀಸಮಯಂ || ರಾಯಸವಿದಿ ನ್ನೇವೆವುವಿಧಿಯಿ | ದೇಯಿದರವರನೋಡಲಿನ್ನೇ೦ | ಸಾಯುವಾರಿಂದಹು ದುಚಿಂತಿಸಲೇಂಫಲಂಕರಿಣ ||೧೬|| ಹೃದಯನಾಳಾಗಿರ್ಪವದಕೀ |ಸು ದತಿಯುಂಸಂಹಾರಮುಂಮಾ | ಳ್ಪುದಕೊಡಂಬಟ್ಟ್ಯಹೆವಲಾಎಂದಳಲಿರಾ ಜಾಜ್ಞೆ || ಯದನೆಮಾಡಲ್ವೇಳ್ಕೆನುತೆಕಡು ! ಗದಿಕಡಿದೊಡಾಕೆಯರುಚಿ ರದೇ | ಹದಕಡಿಗಳಾನೆಲದಿಬಿದ್ದುದರೊಳಿಗೆರಡುಕೈಯ್ಯಂ ||೧೭|| ಮೊ ರುತಂತರೆರಯದೆತತ್ಕರ| ವಾರಿಜಂಗಳುಬಂದುಪೆತ | ದ್ದ್ವಾರದೇಶದೆಭೋ ರೆನಲ್ಬಿದ್ದಿಹವೆನುತೆಪುರದ || ಚಾರನೋರ್ವ್ವಂಪೇಳಲಾಬಂ | ಡಾರಿಬಸವ ಸುಧೀಮಣಿಯುಮುನಿ | ವಾರಿತಾಕ್ಷರ್ಯಾಂತರಂಗನುಮಾಗಿನಿಂದಿರಲಾ ||೧೮|| ಆಸಮಯದೊಳುಜಂಗಮುವಿಟಾ | ಧೀಶರಚ್ಚರಿಗೊಂಡುಯಾರವು | ಈಶಯುಗಳಿಂತಪ್ಪಸುಂದರಶೋಭೆಯಿಂದಿಹವೂ || ಲೇಸೆನಿಪಕರದಿಂವಿರಾ ಜಿಪ|ಕೇಶಪಾಶೆಯುಳೆಂತಿಹಳೊಯೆಂ ! ದಾಶೆಪುಟ್ಟಲುಬಸವಧೀರನಕರದು ದಂಡೇಶಾ ||೧೯|| ಈಕರದ್ವಯದಿಂಪ್ರಕಾಶಿಸು | ವಾಕಮಲಲೋಚನೆ ಯಚೆಲುವಂ | ಪ್ರಾಕಟದೊಳೀಕ್ಷಿಸಲುಬೇಕೆಂಬಿಚ್ಛೆಯಿಹುದಾಗೀ || ಕೋಕಕುಚೆಯನನೇಕವಿಧದಿಂ | ದಾಕಲಾಪರಿಪೂರ್ಣಪೂರ್ವ ! ಶ್ರೀಕ ಲಿತಗಾತ್ರಯನುಮಾಡುತೆತೋರುಪ್ರೀತಿಯೊಳೂ ||೨೦|| ಇಷ್ಟಕ್ಕಾ ಮ್ಯವನಿತ್ತುವರಬಿಂ | ಬೋಷ್ಠಯರುಮೆನಿಸಿರ್ಪವಾರವ | ರಿಷ್ಠಸತಿ ಯರಭೋಗದಿಂಸಂತುಷ್ಟರಂಮಾಡಿ || ಶ್ರೇಷ್ಠತರಭಕ್ತಿಯೊಳುವೋಹ | ಗರಿಷ್ಠರಾದೆಮ್ಮುವನೆಪಾಲಿಪ | ನಿಷ್ಠೆಯುಳ್ಳವನೀನೆನಮಗೇಕಾರಣಾನ್ಯ ಮೆನಲೂ ||೨೧|| ಎಮ್ಮವಿಜ್ಞಾಪನೆಯಕೇಳ್ಳೈ | ಯೊಮ್ಮೆಪ್ರತ್ಯುತ್ತರ ವನಾಂಕುಡ ! ಲವ್ಮ್ಮೆಜಂಗಮನಿಚಯಭಾಷಾಪಾಲಕತ್ವದೊಳಾ || ಸ

ಮ್ಮದದೊಳೀಕಾರ್ಯಮಂನೆರೆ |ಸಮ್ಮತದಿರಚಿಸುವೆನುಕಾಮ್ಯವ | ದಿಮ್ಮ
ಡಿಸೆನಿಮ್ಮಡಿಯಕಮ್ಮಲಸಮ್ಮನದೆನೆನದೂ ||೨೬|| ಭಕ್ತರಾವುದಬೇಡ
ಲದನುನಿ | ರುಕ್ತದಿಂಕುಡುತಿರ್ಪನೇಮುಸು | ಶಕ್ತಿಮಾಹಾತ್ಮ್ಯಂಬಸವ
ನಾಚಾರನಂಕರೆದೂ ||ಪ್ರಾಕ್ತನೂಶಕಲಗಳನೆಲ್ಲನಿ | ಯುಕ್ತವೆನಿಸುತ
ತರ್ಪುದೈನಿಜ|ಯುಕ್ತಿಯಿಂನೀನೆನೆಸುತಕಳುಹಲ್ಕವನುಶೀಘ್ರದೊಳು||೨೩||
ಪೋಗಿವಿಪಿನದೊಳಲ್ಲಿಕಡಿಕಡಿ | ಯಾಗಿಬಿದ್ದಿಹಶಕಲಗಳಜೊತೆ | ಯಾ
ಗಿಮಾಡುತೆತಂದುಬಸವಸಚಿವನಮುಂದಿಡಲೂ || ಬೇಗದಿಂದಾಚರನಮ
ನದನು | ರಾಗಮುಂತೀರಿಸಿಶರಣಗಣ | ದಾಗರಿಮಯುತಪಾದಪದ್ಮಂಗ
ಳಿಗೆವಂದಿಸುತಂ ||೨೪|| ಸಂಗಮೇಶ್ವರನಂಸ್ಮರಿಸಿನಿಜ|ಲಿಂಗಮುಂನೆನವು
ತ್ತಹಸ್ತದೊ|ಳಂಗನೆಯಶಕಲಿತತನೂಚಯುವೆಲ್ಲಜೋಡಿಸುತಂ || ಜಂಗ
ಮಾಂಘ್ರಿಸರೋಜವಾರಿಯ|ಸಂಗದಿಂದೀಷದ್ವಿಭೂತಿಯ| ನಂಗದೋಳ್
ಪ್ರೋಕ್ಷಿಸಲುಮಾಜಲವದಕೆಸಂಧಾನ ||೨೫|| ಸರಣಿಪಾವನ ವೆನಿಸಭಸಿತ
ವು |ಪರಮಜೀವಕಳಾಕರವದಾ|ಗಿರುತೆನಿಷ್ಠೆಯುತೀರ್ದರ್ಜಮೆಚ್ಚರಗೊಂ
ಡತೆರದಿಂದೇ || ಸುರುಚಿರದೆಚಿತ್ರಾಂಗನೆಯುಬಂ | ಧುರಸುಜೀವಸಹಿ
ತೆಯೆನಿಸಿನಿಂ | ದಿರುವಸಮಯದೆಚರವರರಕಣ್ಗೆಸೆದಳೆಂತೆನಲೂ ||೨೬||
ಮಾರನೆಂಬುವಶೂರನತಿವಿ | ಸ್ತಾರದಕಠಾರಯೊಪಿಡಿಡಕ್ಕೆ |ಚೂರಿಯೋ
ಸೀಮಾವಿನೆಳೆದಳಿರಾಂತಕೊಂಬೆಯಿದೋ || ಸಾರಕನಕದಲತೆಯೊಚಪ
ಲೆಯೊ|ಸಾರಸಶರನಸತಿಯುಮುಂಗೈ| ಕೀರವೋಶೃಂಗಾರರಾಶಿಯೊರತ್ನ
ದಿರಚಿಸಿದಾ||೨೭||ಬೊಂಬೆಯೋಎಂತೆಂಪುನೋಳ್ಪವ|ರುಂಬೆರಗುಗೊಂಡಿ
ರಲುಸುಂದರ|ದಿಂಬುವಾರಿಜಗಂಧಿಯತ್ತುಳವಿಳಾಸಧುರ್ಯಳೆನೆ||ಸಾಂಬಮೂ
ರ್ತಿಯಬಿಂಬವಪ್ಪಡ|ಯಾಂಬುನಿಧಿಬಸವಾರ್ಯವರ್ಯನ |ಮುಂಬಿನೊಳುಸಂ
ಭ್ರಮದಿನಿಂದಿರುತಿರ್ಪಸಮಯದೊಳು||೨೮|| ಅಲ್ಲಿರುವಮರ್ತ್ಯಾವಳಿಯು
ಮುನ |ದಲ್ಲಿವಿಸ್ಮಯಯುಕ್ತವಾಗುತೆ | ಎಲ್ಲಿಯುಂನೋಡಿಲ್ಲವಾವಿಂತಪ್ಪ
ಚಿತ್ರವನೂ || ಅಲ್ಲಿಯುಳ್ಳಿಯೆಕಡಿದುಬಿದ್ದಿಹ | ಪಲ್ಲವಕರೆಯಗಾತ್ರಖಂ
ಡಗ | ಳೆಲ್ಲವಂಕೂಡಿಸಿಸಜೀವೆಯಮಾಡಿದಂಬಸವಾ ||೨೯|| ಈತನ
ಪ್ರಾಶಸ್ತ್ಯವರಿವಡೆ | ಭೂತಪತಿಯಿವನಲ್ಲದೇನರ | ಜಾತನೆಂತಹನೆಂ

ದುವೆಲ್ಲರುಕೀರ್ತ್ತಿಸುತ್ತಿರಲಾ ॥ ಆತಮಣಿಬಸವೇಶ್ವರನಶ್ರೀ|ವೂತಶಕ್ತಿ
ನಿಯುಕ್ತ್ತವಜ್ಜಲ । ಜಾತಗಳವೇಲ್ಬಿದ್ದು ಶರಣೆನುತೆದ್ದು ಕೈಮುಗಿದು
॥೩೦॥ ನಿನ್ನ ಕರುಣಾಮೃತಶರಧಿಯೊಳ । ಗೆನ್ನ ನಾಳಿಸಿಪೃಥ್ವಿಯೊಳಂಭ
ವ । ದುನ್ನತಕರಕಮಲಜೆಯುಮೆನಿಸಿಕೀರ್ತ್ತಿಕಾರಣದಿಂ ॥ ಸನ್ನುತನೆಭ
ವಭಯವಿರಹಿತೆಯು । ನಿನ್ನುಗೈದೆಧರೆಯೊಳುಸುಖಸಂ । ಪನ್ನೆಯಂನೆ
ರೆನೆಗಳ್ದು ಭಕ್ತಿಯನಿತ್ತುನಿತ್ಯದೊಳು ॥೩೧॥ಆವವಿಧದಿಂಕಾಯ್ದುತಿರ್ಪೆ
ಯೊ । ಕೇವಲಪವಿತಾತ್ರ್ಮಳೆನಿಸುತೆ ।ಪಾವನನೆನಿರ್ಮ್ಮಲಿನಚಿತ್ತವನೆಂತುಕಾ
ಡುತಿಹೆಯೈ ॥ದೇವಲೋಕವಿತಾನಕೀರ್ತ್ತಿತ|ಭಾವನೀನೆಂದೊರೆದುಸುದತಿ
ಯು|ಸಾವಧಾನವಿಶೇಷದೈನ್ಯದಿಶರಣುಹೊಗಲಾಗೀ ॥ ೩೨॥ಬಸವದಂಡಾ
ಧೀಶಚಂದ್ರಮ|ನಸಮುಪ್ರಮುದಿತನಾಗಿಕ್ರಮದಿಂ|ಸಶಿವನೆಂದೆನಿಪ್ರೊರ್ದ್ವ
ರೇತಯ್ಯಂಗರುಹಿಕೂಡೆ ॥ ಪೊಸತಿದೆನ್ನ ಲುಲಿಂಗಧಾರಣ|ವೆಸಗಿಸುತೆಶ್ರ
ದ್ಧಾವಿಮಲಹೃ|ದ್ಬಿಸಜೆಯನಿಸಿ ದನಂತರದೊಳಾಯುವತಿನಮಿಸುತ್ತೆ॥೩೩
ಮತ್ತೆನುಡಿದಳುಬಸವಗುರುವೇ|ಚಿತ್ತವಿಸುವುದುತೊತ್ತೆನಿಸುವಳ|ಚಿತ್ತವಿ
ಜ್ಞಾಪನೆಯದೆಂತೆನೆಧರಣಿಯೊಳ್ತ್ತಮ್ಮ ॥ ಉತ್ತಮೋತ್ತಮವೆನಿಪನಿಜ
ನಾ|ವಾತ್ತರಾಗಿಡುದೇವಪ್ರಸಿದ್ಧವ| ದೆತ್ತಿನೋಡಲುಸಕಲವಿಧದಿಂಪನ್ನಘ
ನದೈವಂ ॥೩೪॥ ನೀನೆಯಲ್ಲದೆಯನ್ಯವಿಲ್ಲವ| ದೀನಿಮಿತ್ತದೆಭವದಭಿಖ್ಯಾ
ನೂನಸಂಪ್ರಾಪ್ತಿಯನಿಸುತ್ತಂನಿಖಿಲಭುವನದೊಳೂ ॥ ಮೂನಿತದಿವರ್ಧಿ
ಸುವುದೆನೆಮಹ| ದಾನಿಶ್ರೀಬಸವಾಧಿನಾಥನು| ಮೂನಶರಣಗಣಂಗಳಾನನ
ಮಂನಿರೀಕ್ಷಿಸುತೇ ॥೩೫॥ ಹಸಿತಮೌನಮುಖಾಬ್ಜನಾಗಿರೆ । ಮಿಸುನಿ
ವೆಟ್ಟದವಿಲ್ಲಬಗುತರು । ಬಸನರಾಜನಭಾವಪದ್ಧತಿಯಂತೆಬಸವಿಯೆನೆ॥
ಅಸಮನಾಮಪ್ರಸಿದ್ಧವಂಮಾ । ಡಿಸಿಯಬಲೆಯಂಕರೆವುತಿರಲೀ । ವ
ಸುಧೆಯೊಳುಸುವಿಲಾಸಲೀಲಾವತಿಯುಸುಂದರಿಯೂ ॥೩೬॥ ಕಮಲದ
ಳನಿಭನೇತ್ರೆಸಾಮಜ ! ಗಮನೆಶೃಂಗಾರಾಕಲಿತೆಸಲೆ । ಸಮುಚಿತಸುಲಾ
ವಣ್ಯವಿಭ್ರಮರೂಪಸಂಯುತೆಯೂ ॥ ಅಮಿತವೆನಿಪದ್ಭುತದಿಶೋಭಿ
ಸೆ । ಪ್ರಮುದಜಂಗಮುಸುವಿಟರೆಲ್ಲರು । ಸುಮಶರಾಸನಮೂರ್ಗ್ಗ ಹೋದ್ಯ
ದ್ವನ್ಹಿಹೇತಿಚಯಾ ॥೩೭॥ ಸಂಗತರೆನಿಸಿಕಡುತವಕದಿಂ । ಜಂಗಜನ

ಕ್ರೀಡಾಸುಸೌಖ್ಯೋ | ತ್ತುಂಗವಾಂಛಿತರಾದರಿಷ್ಟ್ರಿಯುಪೂರಯಿಸು ನುತೆ||ಮಂಗಳಾತ್ಮಕನಹಬಸವಗುರು|ಲಿಂಗಮೂರ್ತಿಯುತತ್ಸತಿಯಕ ದಂಗಣಂಗಳಕುಸುಮಶರಕ್ರೀಡಾಸುತೃಪ್ತರಸು ||೩೯|| ಪ್ರೀತಿಯಿ ಮಾಡಲ್ಕೆಪೋಗೆಂ | ದಾತರುಣಿಗಪ್ಪಣೆಯಕುಡಲಾ | ಮಾತಿಗಾಕೆಯು ನಮಿಸಿಬಸವಾಧೀಶಕೇಳುನುತೆ || ಭೂತಲದೊಳೊಬ್ಬಳಿಗೆಜೊತೆಯ ಬ್ಬಾತಪುರುಷವರೇಣ್ಯನಿರ್ಪ್ಪದು | ನೀತಿಯಲ್ಲದೆಯೊಬ್ಬಳಿಗೆಬಹುನಾ ರಿಗುತಿಪುದು||೪೯|| ಭುವನದೊಳಗಿದುಬಹುವಿಚಿತ್ರಂ|ಸ್ವವಶವಪ್ಪದೇ ವಿಧಾನವು|ಭವವಿದೂರರುಮುಗಣಿತರುಮಹಾನೋರ್ವಳಾದುದರಿಂ||ಶಿವನ ಲಾವಿಗ್ರಹನೆಈ | ಯುವಗಡವನೀಂತೊಲಗಿಸುತೆನಿ | ಮ್ಮುವಲಸತ್ಕ ಣಾಕಟಾಕ್ಷಕೆಪಾತ್ರಳೆಂದೆನಿಸ್ಯೆ ||೪೦|| ಎನಲುಬಸವೇಶ್ವರನುಮಿಂ ದನುಕಮಲದಳನೇತ್ರಯೇಯಿಂ | ತೆನಲುಕಾರಣವಿಲ್ಲಭಕ್ತರಕಾಮ ಖದಿಷ್ಟಂ || ಜನಿಸುವಾವೋದಾಳ್ಪಭೋಗವ | ಮನದಣಿಯುವ ಲ್ಕುಡಲಿನೀನೆಂ | ದೆನುತೆಗಿರಿಶಂನಿನ್ನನೇನಿರ್ಮಿಸಿಹನೀಕತದಿಂ||೪೧|| ಶಿಸುವುದೇಕಾನುಕರುಣಾ ! ಸ್ವಾಂತಸಾರಸವರಳಕೊಟ್ಟಿನ | ನಂ ತೃಸಮರ್ಥತೆಯುನಿನಗಾಗಲಿಂತೆಂದೂ||ಸಂತಸದೊಳಿವರಿಂಗೆಕೈವಶ|ಪ್ರ ತವಕದಿಂದಾಗಿರೆಮನೋ | ಭ್ರಾಂತಿಯುಂತೀರುವುದುನಮ್ಮವಚನ ನಂಬಿರಲೂ ||೪೨|| ಘನಕೆಘನವಾಗಿರ್ಪಮೋಕ್ಷವು | ನಿನಗೆಕೈಸೇ ವುದುನಿಜವೆಂ |ದನುನಯದೊಳಾದರಿಸುತವಳನೊಡಂಬಡಿಸುವೆಡೆಯೊ ಳ್||ಮನವೆಳಸಿಮುಂಬರಿವುತಿರಲಾ! ಮನಸಿಜನಬಾಣಾಹತರುಮೆಂ|ದೆ ಸುವಿಟಗಣಂಗಳಂಕೂರ್ತೆಂದನಾಬಸವ||೪೩|| ಸ್ವಾಮಿಗಳೆನಿಮ್ಮಾತ್ಮದ ಳಗಣ|ಕಾಮಿತವಶೀರಿಸಿಕೊಳುವುದೀ | ಕಾಮಿನಿಯುನೊಡಗೂಡೆ ತ್ತಂಕಳುಹಳಾಚಪಲ||ಭಾಮಿನಿಯನೊಡಗೊಂಡುನೈಜಸು| ಧಾಮಕ್ಕೆ ರುತಿರಲುಬಸವನಿ|ದಾನಮಹಿಮಾತಿಶಯಮುಂಬಣ್ಣಿಸುವಸಮಯದೊ ||೪೪|| ವಿದಿತಮಾದರಸಾರ್ಯಮುಖ್ಯಸು | ಹೃದಯರೆನಿಸುವಶಿವಶ ರಾ | ಸುದತಿಯಹನಾಗಾಂಬಿಯಂನೋಡುವತವಕದಿಂತ || ತ್ಸ ಸುಕೈತವಲಾಸತೀಮಣಿ | ಮುದವೆರಸಿಸದ್ಭಕ್ತಿಯಿಂದಂ | ಮಹ

ಪುಶರಣಾಳಿಗಭಿವಂದಿಸುತೆನಿಂದಿರಲೂ ||೪೫|| ವನಜಲೋಚನೆಭಕ್ತಿ
ವೈರಾ | ಗ್ಯನಿಯುತೆಸುಮಹಿಮಾಗರಿಷ್ಠೆಯು | ಅನಿತರಕ್ಷಿಯುಪ
ರ್ವಾಗಿರಲಾತ್ಮದೊಳುಮೆಚ್ಚಿ || ಘನತರಾಮೋದದೊಳುನಾಗ | ಮ್ಮ
ನಗುಣೋತ್ಕರ್ಷವನುಮಾಡುತ| ಲನುಪಮಿತಹರ್ಷಾಕ್ರಾಂತರಾಳಡೊಳಿರ್ದ
ರತಿಮುದದೀ ||೪೬|| ಬಸವನಂಸಕಳೇಶಭಕ್ತರ | ವಿಸರವತಿಸಂತೋ
ಷದಿಂಪ್ಪ | ದ್ವಿಸಜದೊಳುತನ್ಮಹಿಮೆಯಂನೆನೆಯುತಿರೆಸಭೆಯೊಳಗೇ||
ಲಸಿತಗಿರಿಜಾಪತಿಯುಪದಮಾ | ನಸಪದಾಂತಃಕಾರಣರಾಗುತೆ | ಸುಸ
ರದಿಂನಿರತೋಲ್ಲಸನಮತಿಯೊಡನೆಪ್ರಮಥರನು ||೪೭|| ಲಾಲನೆವ
ಮಾಡುತ್ತೆಸಂಪ | ತ್ಸೀಲಸುವಿಳಾಸದೊಳಿರಲುಚಿ|ನ್ಮಾಲಮೂರ್ತಿಯು
ರೇಣುಕಾರ್ಯಂಕುಂಭಸಂಭವಗೇ || ಲೋಲಕಾರುಣ್ಯಪ್ರಯುಕ್ತ್ಯನು
ಕೂಲಮಾನಸದಿಂಪೇಳುವ | ಕಾಲದೋಳ್ಮಂಡಣಕಥೆಯಬೆಸಗೊಂ
ಡನತಿಮುದದೇ ||೪೮|| ಕಾರ್ತಿಕೇಯಸ್ವಾಂಶವೇಘನ |ಮೂರ್ತಿಯಾಗು
ತೆಯಿಳೆಯೊಳಿರುತಿಹ ! ಮೂರ್ತಿಗಳನೆಲ್ಲರನುಪರಶಿವಮೂರ್ತಿಗಳಮಾಡೀ||
ಧೂರ್ತಮತಗಳಖಂಡಿಸುತೆಸ | ದ್ವರ್ತಕರಮನ್ನಿಸಿಪೊರೆದಗುರು | ಮೂ
ರ್ತಿಶ್ರೀಚನಬಸವರಾಜಸಪರ್ಥಿಮಾಂಪಾಹೀ ||೪೯|| ಇದುವೆರೇಣುಕಸಿದ್ಧ
ಸದ್ಗುರು | ಪದಪಯೋರುಹಜಾತಸಿಷ್ಯಸ|ಮುದಯದೊಳುನಿಜಮಠಸು
ದೇಶಿಕಸುಕಾರುಣ್ಯ || ಒಡವಿಸುವಶ್ರೀಸಿದ್ಧರಾಮಂ | ಮುದದೆಪೇಳಿದಚೆ
ನ್ನಬಸವಾ|ಭ್ಯುದಯವೆನಿಪಪುರಾಣದೊಳಗಿದುಪ್ರಥಮದಾಶ್ವಾಸಂ||೫೦||

ಅಂತುಸಂಧಿಗಕ್ಕಂಪದ ೪೭೦ಕ್ಕಂಮಂಗಳಮು.ಹಾ



## ಪ್ರಸಾದಮಹಿಮೆ ದ್ವಿತೀಯಾಶ್ವಾಸ

## ಪುಂಡ್ರಪಾಮರಬಂಡಗಿಯರಕಥೆ

ಸೂಚನೆ || ಅನಘಶಾಂತ್ಯೈಕಾಂತರೀರ್ವರು | ಘನತರದಿಶಪಿಸಲ್ಕೆಗಂಧ
ರ್ವನನವಂಚರಸೇಷದಿಂನಿಜಪದವಿಯುಂಪಡೆದಂ ||ಕ್ಷವದ || ಶ್ರೀಕರಂ
ಭಕ್ತಲೋಕವ | ಶೀಕರಂಶಿವಪ್ರಮುಖಮಣಿರ | ತ್ನಾಕರಂಗಿರಿಜಾಪತಿ
ಭಕ್ತಿಯನುವರ್ಧಿಸುತಂ || ಲೋಕಪಾವನಕಾರಣಂನುತ | ನಾಕಭೂ
ಹನೆನಿಪಸುಸ್ಮೇ | ರೈಕವದನನಖಿಲರಹಸ್ಯಪ್ರಾಕಟಿತನಿಭವಂ ||೧||
ವಘರಿಸುಕುಂಭಜನೆನಿಸೀನೆಂ | ದವಿರಳಸುಕಾರುಣ್ಯದಿಂದಾ | ಶಿವನ
ದ್ಭಸಿತರೇಣುವಿನಿಂದೊಗೆದುಪರಮ || ಶಿವನಸಾಮರಸಾನುಭವವೆಂ
ಬುವುದನೊರೆಯಲುಸಾಧಕರುಗಳಿ | ಗವತರಿಸಿಮೆರೆದಿರುವ ಘನತ
ಣುಕಾಚಾರ್ಯಂ ||೨|| ಪೇಳತೊಡಗಿದನೆಂತೆನಲುಶರ | ಣಾಳಿಸಭೆಗ
ಲುಮಿಗೆಸಂ | ಮೇಳನವಿಜಂಗಮಪ್ರಸಾದದಘನಮಹಾತ್ಮ್ಯೆಯನು
ಕೇಳುವಿಚ್ಛಾವೋದಶರಥಿಯೊ | ಳಾಳುತವರ್ರುಧರಾರಥಿಕನೆಂ ! 
ಗೆಯಸತ್ಕೀರ್ತಿಯಂಡಶದಿಶೆಗಳೋಳ್ಪಡೆದೂ ||೩|| ಯುಕ್ತಧನ್ಯತೆ
ಮೆರೆವನಿಜ | ಮುಕ್ತನಪಮೂದರಸನನಂಸಂ | ಸಕ್ತಶ್ರವಣೇಚ್ಛೆಯೊ
ಕಂಡುಸುಖಸ್ಫುರಿತಮಾದ || ಉಕ್ತಿನಿಚಯದೊಳನಘಶಿವಕಂ | 
ಕ್ತರಾಹಸ್ಯಂಗಳೊಳುನಿಜ | ಮುಕ್ತಿಕಾರಣವಹ ಪ್ರಸಾದದನುಹಿ
ಯಂಪೇಳೀ ||೪|| ರಕ್ಷಿಸೆನಲಿವರಿಂಗೆಸಾಕ್ಷಾ | ತ್ತ್ರ್ಯಕ್ಷನೆನಿಪಮಹ
ತನವರನಿ | ರೀಕ್ಷಿಸುತೆನಿಮ್ಮಯಕರುಣದಿಂ ಪೂರ್ವ್ವದೊಳಗಾನೂ
ಉಕ್ಷಕೇತನಭಕ್ತರುಗಳಸ | ಮಕ್ಷಮದಿಕೇಳಿರ್ದನಿತುಪ್ರ | ತ್ಯ
ಸತ್ಪ್ರಮಾಣ್ಯದಿಂದರುಹುವೆನದೆಂತೆನಲೂ ||೫|| ಪರಮಪದಸಂದಾ
ಕದೊಳ | ಪ್ಸರಃಪೂರ್ಣವದೆನಿಸುತಂಸುಂ | ದರದಸಾರಂಗಾನ್ವಿ
ದಿಸಂಚರಿಪದೇವವರ || ಪರಿಕರದಿಗಂಧರ್ವರಾಜನ | ತೆರದೊಳತಿಶಯ
ದಿಂಮೆರೆವುದೀ | ಧರಣಿಯೊಳುಕೈಲಾಸವೆಂದೆನೆಮೆರೆವಶ್ರೀಗಿರಿಯೂ
ಭಾಸಮಾನನೆನಿಪ್ಪತದ್ಗಿರಿ | ವಾಸನಂಸನ್ನುತಿಪಪರಮವಿ | ಲಾಸದಿ
ಶುಕಶಾರಿಕಾಮುಖಪಕ್ಷಿನಾದವನೂ ||. ಲೇಸೆನಲ್ಕೇಳುತ್ತೆರೋಮಾಂ

ಚಂಸಕಂಚುಕವೆನಿಸೆಮುನಿಜನ । ಕಾಸುಬೇಶಂರಾಜಿಪುದುಸದ್ವಾಪಸಘ
ನವೆನಿಸೀ ॥೭॥ ಆವಹಿತಭಾಯಾಪ್ರಕಟಿತಾ । ಮ್ಲಾವನೀಸಂಜಾತಪ್ರ
ಮುಖಶು । ಭಾವಹಮಹೀರುಹನಿಕರದಿಂಮೆರೆಯೆಕದಳಿಬನಂ ॥ ಆವ
ರಾರಣ್ಯಾಂತರದೆಜಲ । ಜೀವಕಮಲಕುಲಾಳಿಚಯಮುಂ । ತೀವಿರುವಕ
ಮಲಾಕರಂಕಮನೀಯದಿಂಮೆರೆವ ॥೪॥ ಕಮಲವೈರಿಯಕಿರಣಸೀತಲ ।
ಕಮಲದಿಂದೆವಿರಾಜಿಸುತ್ತಂ । ಸಮವಿರಹಿತವದೆನಿಸಿಪೆಂಪಿನತಂಪಿನಿಂಪಿಂ
ದೇ ॥ ವಿಮಲವಹತತ್ತೀರದೊಳುಘನ । ಶಮದಮಮಹಿಮಸಾಂದ್ರರೆನಿ
ಸುವ । ಸುಮನಸರುಮೌನೀಂದ್ರರಚ್ಚರಿಗೊಂಡುನೋಡುತ್ತೆ ॥೬॥
ನಿಂತಿರಲ್ಕಾಲಾನುಕಾಲದೊ। ಳಂತಕಾಂತಕಪಾದಪೂಜಾ । ಸ್ವಾಂತ
ರುಂಕಾಮಾಂತಕ ಭಯಭ್ರಾಂತಿದೂರಕರೂ ॥ ಅಂತರರಚರದ್ವೈರಿಷ
ಟ್ಕನಿ । ಹಂತರುಂಯೋಗಾಧ್ವದೊಳುವಿ । ಶ್ರಾಂತರುಂಷಡ್ವರ್ಣ್ಣಮನು
ಜಾಪಕವ್ರತಸ್ಥಿತರು ॥೧೦॥ ಪರಮಶಾಂತಾಚಾರ್ಯನುಂಸ । ತ್ಪುರುಷ
ನೇಕಾಂತಾರ್ಯನೆಂಬೀ । ರ್ವರುಮಹಾಂತರುಶ್ರೀಗಿರಿಕ್ಷೇತ್ರದೊಳುಚರಿ
ಸುತ್ತೆ ॥ ನಿರತವಾಸ್ಥಲದಲ್ಲಿರುವಸ । ಚ್ಚರವರರುಗಳಗೇಹಭಿಕ್ಷಾ । ಪರಿ
ಕರಾನ್ನವಕೊಂಡುಶಿವಲಿಂಗಾರ್ಚನೆಯಮಾಡಿ ॥೧೧॥ ಶಿವನಿವೇದನವೆಸ
ಗಬೇಕೆಂ । ಬುವನೆವದೆತತ್ಸರಸಿಯಾತೀ । ರವನುಸೇರಿವಿನೋದಮತಿ
ಯಿಂ ವಿಶ್ರಮಿತರಾಗೀ ॥ ಸವಿಯೆತಾವ್ತಂದನ್ನಮಂಪಾ । ತ್ರವನೆತುಂ
ಬಿಷಡಕ್ಷರೀಮಂತ್ರವಿನಿಯುತಚಿದ್ಭಸ್ಮಸಂಶುದ್ಧಿತಪ್ರಸಾದವನೂ॥೧೨॥
ಇಷ್ಟಲಿಂಗಾರ್ಪಣವಮಾಡುತೆ । ಶ್ರೇಷ್ಠವೆನಿಪಪ್ರಸಾದಮುಮನು ।
ತ್ಕೃಷ್ಟವಿಧಿಯಿಂಭೋಜ್ಯಭೋಜ್ಯಶಿವಾರ್ಪಣವಮಾಡಿ ॥ ನೈಷ್ಟಿಕಸು
ಯೋಗಾನುಭಾವಗ । ರಿಷ್ಠರಾಗಿರ್ಪವರನೀಕ್ಷಿಸಿ । ಕಷ್ಟತರತಪವೆಸ
ಗುತಿರುತಿರ್ದ್ದೋರ್ವಗಂಧರ್ವಂ ॥೧೩॥ ಅವರಚರ್ಯೆಯತಿಶಯವಿಪರೀ ।
ತವಿದೆನುತಲಿಂತೆಂದನಜ್ಞಾನು । ಶಿವನಧರಿಸುತೆಸಂತತಂಶ್ರೀಪತಿಸುಮಾ
ರ್ಗಣನಂ ॥ ಅವಿರತಂಯಜಿಸುತ್ತೆವಿಧುಸಂ । ಭವಹರನಚಿತ್ತದೊಳುನಿ
ಲ್ಲಿಸಿ । ಪವನಸಖಪ್ರಗ್ಲಾಂಛನಗಳಂಭಕ್ತಿಯಿಂಧರಿಸೀ ॥೧೪॥ ಘನಮ
ಹಾತ್ಮರುವೊಳ್ಳಿದರುಮೆಂ । ಬನುಪಮಸುಚಾರಿತ್ರರಾಗುತೆ । ಯನಘರೆ

ನಿಸಿಹತಾವುಸವನವಿರೋಧಿಗುಚ್ಛಿಷ್ಟಾ||ಶನವನರ್ಪಿಸುವುದುನಿಮಗ
ವನವಿಧಿಯೆಭೂಮಿಯೊಳುಪಾಮರ | ಜನರೊಳಿಲ್ಲಿಂತಪ್ಪದುರಿತವಿ
ದೂಷಿಸಲೂ ||೧೫|| ಕೇಳಿಕೋಪೋಜ್ವಲತರಾವೃತ | ಕೀಲಮಾನಸ
ಗಿಯತಿಶಯ | ಹೇಳನದಗಂಧರ್ವನಂಕಂಡೆಲಪ್ರೊಮೂಢಾತ್ಮ || ಕೋ
ರಿಪೂರ್ಣ್ಣಸುಕೃಪಾಮೃತ | ಮೂಲವಪ್ಪಮಹಾಪ್ರಸಾದವಿ | ಶಾಲವ
ಮೆಯನೀಂ ತಿಳಿಯದುಚ್ಛಿಷ್ಟಭಾವನೆಯಿಂ ||೧೬|| ದೂಷಿಸಿದಕಾ
ದೊಳಿಂತಹ | ದೋಷವಳಿಯುವದಿಲ್ಲವೆಂದತಿ | ರೋಷಮತಿಯಿಂ
ಸಮುದ್ಧರುನುಡಿದರೆಲೊನಿನ್ನ || ವೇಷದಪೊಬಗನೀಗಿಖಚರವಿ|ಶೇಷ
ಯುತೊಲಗಿಶರಣ | ದ್ವೇಷಿಯೇಧರೆಯೊಳುವರಾಹಾಕೃತಿಯನೈದು
ದೂ ||೧೭|| ಎನಲುಭಯಹೃದ್ವನಜನಾಗುತೆ | ವಿನಯದಿಂಕೈಮುಗಿ
ಕಂಪಿಸು | ತನಘರೇತಾವಕಮಹಿಮಗರಿಮೆಯನರಿಯದುಲಿದಾ || ಘ
ತರಾಘವಚೋಫಲವನಾ | ನನುಭವಿಸಬೇಕಾಯ್ತು ಇನ್ನಾ | ವನುವು
ಪವಿಮೋಚನವದೆಂತಹುದುಪೇಳೆನ್ನ ||೧೮|| ಸ್ವಾಂತತಾಪವಬಿಡಿಸಿಪ
ರೆವಮ | ಹಾಂತರೆಂದೇನಂಬಿಜೆನುನಿ | ಮ್ಮಂತರಂಗವುಕರಗಿಮದ್ದ
ನ್ಯೋಕ್ತಿಗಳಕೇಳಿ || ಅಂತವಿಲ್ಲದಚಿಂತೆಬಿಡಿಸಿನಿ | ರಂತರವುನಿಮ್ಮ
ಯಸೇವಕ | ನಂತೆಭಾವಿಸಿಪ್ರೊರೆಯಿರೈಶಿವಶರಣರೇಎನಲೂ ||೧೯|
ಕೋಪಶಾಂತಿತರಾಗುತಂರು | ದ್ರಾಸರಾಕೃತಪುರುಷರುಗಳಾ | ಚಾಪ
ಲಾತ್ಮಕನಾದಗಂಧರ್ವನದಯದಿನೋಡೀ || ನೀಂಪ್ರೋಡವಿಯೊಳುಕಲಿ
ನಂಕಿಟ | ರೂಪದಿಂಚರಿಸುತ್ತೆಭೂಧರ | ಚಾಪಶರಣರಸುಪ್ರಸಾದ
ದೊರೆಯೆನಿಜರೂಪಂ ||೨೦|| ಧರಿಸಿಶಾಪವಿಮೋಚನದೆಪುರ | ಹರನಸ
ವಿಸ್ತಾಸ್ಯವನುಸೇವಿಸುವೆ | ನಿರತವಿಪುನಂಬಿನ್ನು ಪೋಗೆಂದೆನಲುಖೇಚ
ನು || ಪರಮುಪದವಿಗೆಕಾರಣದಪು | ಸ್ತರದುರಿತನರಪೋರ್ಬಲವಪರಿ|
ಪರಿಸಲಾವಿನಿದಾನವಖಚರವರ ಪ್ರಸಾದವನೂ ||೨೧|| ನಿಂದಿಸಿದದು
ರ್ದೋಷವದುಮ | ತ್ತೊಂದುವಿಧದಿಂತೊಲಗಲಾರದು | ಬೆಂದುಪೋ
ಪುದುತತ್ಪ್ರಸಾದಂಸಂದಿಸಿದಕ್ಷಣವೇ || ಎಂದುನಿರ್ಧರಿಸುತ್ತವಂನಿಜ|
ಮಂದಭಾಗ್ಯದಿಬಂದಶಾಪಕೆ | ನೊಂದುಸುಂದರದೇಹನಿಳೆಯೊಳುಹುಂದಿ

ರೂಪಾಗೀ ‖ ೨೨ ‖ ಗುರುಕುಗುರುಕೆನ್ನುತ್ತೆಪೊಡವಿಯ । ಮೊರವೆೞರ ನೆಕೊೞರೆವುತ್ತೆಕೆಡಹಿಹೆ । ದರಿಹೆಪರಿಹಿಂದಕ್ಕೆನೋಡುತೆಓಡಿಪೋಗುತಿರೆ‖ ಪೆರವತಿೞರದಬೊಜ್ಜೆತೞಗು । ತ್ತಿರಲುಡೊಂಕುನಡೆಯೊಳುವಲ್ಗಳ । ಕರಕರನೆಕಡಿಯುತ್ತೆ ಭೂಮಿಯೊಳಿರ್ಪಜೇಕುಗಳ ‖ ೨೩ ‖ ಕೆದರಿಪೊ ರಮುಡಿಸುತ್ತೆಬಳ್ಳಿಯ । ಪೊದೆಯೊಳಡಗಿಕೊಳುತ್ತೆಜಾತಿಯ । ಹದನ ದಿಂಚರಿಸಾಡುತಿರ್ದ್ದಂವಂದಿರೂಪಿಗನೂ ‖ ಅಡುವೊದಲ್ತತ್ತಿಕಿಟಿಯುಬಹು ಗಾ್ರ । ಮುದೊಳುಕೆಲಕೆಲದಿವಸವಿರ್ದುಸು । ಪದವೆನಿಸುವಾವಿಜಯ ವಾಟೀಪಟ್ಟಣವಸೇರಿೀ ‖೨೪‖ ಆಪುರವನೆಲೆಯಾಗಿರುವಬಲು । ಪಾಪಿ ಕೊರೆಯುರಕುಲದಿಪುಟ್ಟಿಹ । ಕಾಪಟನುಮಿಗೆಪುಂಡ್ರಪಾಮರನೆನಿಪಪೆ ಸರಿನವಂ ‖ ಕೋಪಮುಂದಾಗಿರ್ಪದುರ್ಗ್ಗುಣ । ಕೂಪೆಯೆನಿಸುವಳಮಿ ತಮೂನಸ । ಚಾಪಲತೆಯಿಂಸತ್ಯನಾಶನರೂಪಿಯಾದವಳು ‖೨೫‖ ಅವ ನಹೆಂಡತಿಕಳವುಮಾಡುವ । ವಿವರವಂಬಲ್ಲವಳುಶಾಪಿಸು । ವವರೊಳಗೆ ಮಿಗಿಲೆನಿಸುವಳು ಪೈಶಾಚಿತಿರುಕುಚುಲಿ ‖ ಅವಗಡದಬಂಡುಗರತಿಯು ನಿಂ । ತವರನಿಟ್ಟಿಸಿಬೈವಜಗಳದ । ಗವಟಿಸುಳ್ಳಿಯುವನಪಿಮಾಯಿನಿ ಕಟಕಿಗುಳ್ಳೆನರಿ ‖೨೬‖ ಬೋಡಿಕೂಳರಿಕೊಂಡೆ ಗಾತಿಯು । ನೋಡಿ ದೊಡೆನೂಂಕುತ್ತೆವಿಧಿಯೊಲು । ಕಾಡುವಳುಕಂಗೆಟ್ಟುಕಂಡರಕೂಡು ವಳುಕುಟಿಲ ‖ ಮಾಡಿಕೊಳ್ಳುವಳಾಸುರಿಯುಬಲು।ಕಾಡುಗಾತಿಯುಕಾಲ ಮಿತ್ತದ । ನಾಡಲೇಂಪುಟ್ಟಿದಪೆಸರುಭಂಡಂಗಿಯೆಂಬುವಳೂ ‖ ೨೭ ‖ ಅಂತಘರಮನೆಹಿತ್ತಲಲ್ಲಿರು । ವಂತಹನೊದೆಯುಹುಲ್ಲಮನೆಯೊಳ । ಗಂ ತರವಿಗುರುಕುಗಳನಿಡುತಲ್ಲಲ್ಲಿತಿರುತಿರುಗೀ ‖ ಕುಂತರೇಳದತೆರದಿಬಳಲಿ ಕೆ । ಮುಂತುಗೊಂಡಿಹಕಿಟಿಯನಂತವ । ನಿಂತುಪೆಣ್ಣಂಕರೆದುತೋ ರುತೆಪುಂಡ್ರಪಾಮರನು ‖ ೨೮ ‖ ಹಂದಿಚಂದವನೋಡಿದೆಯೊಇದು । ಬಂದಿರುವುದೆಲ್ಲಿಂದವೂರೊಳ । ಗೊಂಡುನೋಡಿದ್ದಿಲ್ಲಗಂಜಿಯನೀನು ಹಾಕಿದೊಡೇ ‖ ಹೊಂದಿಕೊಂಡಿಹುದಿಲ್ಲೆನಮ್ಮನೆ । ಯಿಂದೆಪೋಗದಿ ದೆಂದೆನುತಲವ । ನೆಂದಮಾತಂಕೇಳಿಸಂತಸದಿಂದಕರೆದಪಕೇ ‖ ೨೯ ‖ ಹುಳಿಯುತಂಗಳಿನಂಬಲಿಯೊಳುಂ । ಹಳಸಿನಾರುವಗಂಜಿಯನುನೆಲೆ ।

ಗೊಳಿಸಿಪರಿಯಾಣದೊಳು ಹಾಯ್ಕಿರಲದನನಿತು ಕುಡಿದೂ ॥ ಒಳ್ಳೆ
ಯುದೋರಲದುಕೊರೆಯನ । ನಿಲಯುಸಮೀಪ್ಯದೊಳುಚರಿಸುವ । ಬ
ಳಿಕೆಯಾಗಿರುತಿರ್ಪುದದುತಜ್ಞಾತಿಗತಿಯಿಂದೇ ॥೩೦॥ ಇಂತಿರಲುಶಿವ
ತ್ರಯುಂಬರ । ಲಂತವಿಲ್ಲದಜನರೊಳಗೆಯು । ತ್ಯಂತಸ್ಪೃಹೆಯಿಂಶ್ರೀ
ಗಿರಿಯುಮಲ್ಲೇಶನಂಕಾಂಬ ॥ ಸಂತಸದಿಮುದಿಜಂಗಮನುವೋ । ರಂತ
ನೆಡೆತರಲಾರಪೇಸಾ । ಯಂತವಾಗಲುಸೇರಿದಂ ಬೆಜವಾಡವಂಹಸಿದು
೩೧॥ಕುಂದಿಜಠರಾನಲನಬಾಧೆಗೆ । ಕಂದಿರುವವೊಗದೊಡನೆಹೆಜ್ಜೆಯ
ಮುಂದಕಿಡಲಮ್ಮದೆಸಕುತಿಯಿಲ್ಲದಲೆಸಂತಾಪ ॥ ದಿಂದೆಹರಶಿವಶಂಕರ
ಭವ । ಕಂದುಗೊರಳನೆಎನುತಭಕ್ತರ । ಮಂದಿರದಭಿಕ್ಷವನುಕೈಕೊ
ಚೇಕೆನುತ್ತಳಲೀ ॥೩೨॥ ಅರಿಯುಪೇಯಿದುಪುರಹರನಭ । ಕ್ತರನಿಲಯ
ವೆಂದೆಂಬಭಾವದಿ । ದುರುಳನೆನಿಪಾಪುಂಡ್ರಪಾಮರನಿಹಮನೆಗೆಬಂದೂ।
ಚರವರಂತದ್ವಾರದೇಶದೊ । ಳರಿದೆನಲುಘಂಟೆಯನುಬಾರಿಸಿ । ಭದ
ಶಂಖವಪೂರಿಸುತೆಭಿಕ್ಷಾಎನುತೆಕೂಗೇ ॥೩೩॥ ಕೇಳುತಾಭಂಡಂಗಿಕ್ಷೋ
ಪವ । ನಾಳುತಂತಾಂಬಂಡುಕಂಡಳು । ಹೇಳಲೇನಾಮುದಿಯಜಂಗಮ
ವರನಚಿನ್ಹೆಗಳಂ ॥ ಕಾಳುಮೈಯೆನ್ನೆಲ್ಲೆತ್ತರೆನರೆಯುಭ್ರೂ । ಗೋಳವ
ಟಿಹಗುಂಬಕಣ್ಣುಗ । ಳೋಳುಕಾಣದ ಆಲಿನಡುಗುವಸಿರವು ಹಲ್ಲುಗ
ಳೊ ॥೩೪॥ ನೀಗಿರುವಬಾಯ್ಬಗಲೊಳಗೆಹು । ಬ್ಬಾಬಗಿರುತ್ತಿಹಕಂಠ
ಯುಂಬಿಳಿ । ದಾಗಿರುವಗಡ್ಡವದುಶ್ಲೇಷ್ಮದೆತಡೆಯುತಿಹಮಾತೂ ॥ ಬಾ
ಗಿಬೆನ್ನಿಗೆನಟ್ಟಹೊಟ್ಟೆಯು । ಸಾಗುಕೋಲ್ಪಿಡಿದಿರ್ಪಕೆಮ್ಮಂ । ಕಾ
ಗೆನೋಟವುಜಡೆಗಳುಂಜೋಲಿಗೆಕೊಡೆಯುಕಂತೆ ॥೩೫॥ ಯಾಂತುಕಿವಿ
ಯೊಳುನಾಗಫಣೆಗಳು । ಕುಂತುನಿಂತೆಡೆಯುಡುರ್ವಕಟ್ಟೆಯು । ಕಂ
ತುಹರನಿರುತಿರ್ಪಸಜ್ಜೆಯುಎದೆಯೊಳೊಪ್ಪಿರಲೂ ॥ ಮುಂತೆಧರಿಸಿಹವ
ಯ್ಯಬೂದಿಯು । ನಿಂತಿಹಮುದಿಯಜಂಗಮನೊಳೆ । ತ್ಯಂತಕೋಪದಿ
ಪುರ್ಚುಜಾಯಿಲನಂತೆಹರಿಬಿದ್ದೂ ॥ ೩೬ ॥ ಮನ್ನಣೆಯೊಳಾನೊಬ್ಬಳಿ
ರುತಿಹು । ದನ್ನುತಿಳಿದೀಕಾಲದೊಳುಬಿ । ಕ್ಕನ್ನುವುಜ್ಜುಗದಿಂದೆಬಂದೆ
ಯುಚೇರೆನೆವದಿಂದಾ ॥ ಚುನ್ನಕೆಲಸಿಗಮನೆಯಗಂಡನು । ನಿನ್ನಕೊಟ್ಟ

ಡೆಬಿಡನವನುಬ! ರ್ಪನ್ನೆ ಗಂನಿಲಗೊಡೆನುನೆರೆಯೊಳುಸುಳ್ಳುಹೆಂಗಸರೂ ||
||೩೭||ಕಂಡುಅಣಕಿಸಿಹಿಂವೆಜರಿಗಿದ |ದಿಂಡುಗವನಿದಿರಿಟ್ಟುವೈರದಿ! ಗಂಡ
ನಿಗೆಹೇಳಿದೊಡೆಮನೆಯಂಹೊರಡಿಸುವನೆನ್ನಂ || ಬಂಡುಮಾಳ್ಪಂಸಿಕ್ಕಿ
ದರೆಯಿಾ | ಕೊಂಡೆಯರುಮೇಣ್ಪಿಡಿದುಕುಡುವರು | ಮುಂಡೆಬಾಗಿ
ಸಿಕೊಂಡುಇಲ್ಲಿರಬೇಡಹೋಗಯ್ಯಾ ||೩೭|| ಎನಲದಂಕೇಳುತ್ತೆಜಂಗ
ಮ | ಮನದೊಳಗೆವಿಪರೀತವಿಸ್ಮಯ | ವನುಕರಿಸೆಕಿವಿಗಳನುಕೈಯಿಂ
ಮುಚ್ಚಿಕನಲುತ್ತೆ || ತನುವಿನೊಳುಉಸುರಡಗಿಕುಸಿಬಿ|ದ್ದನಘನಕಟಕ
ಟಯ್ಯಾಹರಶಿವ| ಮನಸಿಜನವೈಕಾರಿಗಳೆನಾವ್ಕಳ್ಳರೆನಿಸುವೆವೇ ||೩೯||ಶ್ರೀ
ಗಿರಿನಿವಾಸನನುಸೇವಿಸೆ | ಪೋಗುವೆವುಜೊತೆಯವರೊಡನೆನಾ ವ್ | ಸಾ
ಗಲಾರದೆಹಸಿದುಭಿಕ್ಷಕೆಬಂದೆವೀಮನೆಗೇ || ಹೋಗಲರಿಯೆವುಮುಪ್ಪು
ಕೂಡಿಹು|ದಾಗಿಹೆಜ್ಜೆಯನಿಡಲಿಕಾಗದೆ | ಬಾಗಿಕೋಲಂಪಿಡಿದುನಡೆ
ಯುವಬಾಳಮುದುಕನಲಾ||೪೦||ಏಕೆವ್ಯರ್ಥದಿನುಡಿವನುಡಿಗಳು|ಸಾಕುಕಾ
ಡದೆಭಿಕ್ಷವನುನೀ | ಡೇಕಳಿಸುಯಿನ್ನೇನುಬೇಕಿಲ್ಲೆನಲವಳ್ಕ್ರೋಧದಿಂ ||
ದ್ರೇಕದಿಂಮುದಿಯಯ್ಯಮತಿಯಿ | ಲ್ಲೇಕೆಪೈತ್ಯವುಪೆರ್ಚಿಹುದೆಮತ್ತೇ
ಕಡಿದುತಿಂದಿರುವೆಯೇದತ್ತೂರಿಕಾಯ್ಗಳನೂ||೪೧|| ಮದನಮದಸಂಹಾ
ರಭಕ್ತರ | ಸದನಗಳಬಿಟ್ಟಿಲ್ಲಿಗೈತಂ | ದುದುಬಳಲಿತಿದಲ್ಲೆನಲುಮುಗು
ಳ್ದಿಂತೆಂದಜಂಗಮನೊ || ಮುದಪತಿಯನೀನಾಡುತಿರ್ಪುದು |ಸದರವಹು
ದೆಮಗೊಂದುವ್ರತವಿ | ರ್ಪುದುಮೊದಲುಬೇಡಿದಾಮನೆಯೊಳಗೆಭಿಕ್ಷವಂ
ಕೊಂಡೇ ||೪೨|| ಪೋಗುವಾಪದ್ಧತಿಯುಮೆಮಗಿಹು | ದಾಗಿಯಿಲ್ಲೆ
ನ್ನದಲೆಯಿನಿತನಿ ! ತಾಗೆಲವ್ವಾಬೇಗನೇಸಂತೋಷದಿಂನೀಡೀ || ಸಾ
ಗಿಸುವುದೆನಲವಳುಬಿಂಕದೊ | ಳಾಗನುಡಿದಳುನಮ್ಮಮನೆಯೊಳ |ಗಾ
ಗಲುಂಸಾಸಿವೆಯನಿತುಮಯ್ಯಂಗಳಿಗೆಭಿಕ್ಷಾ ||೪೩|| ವಿಕ್ಕುವೆದುಎಂದೆಂ
ದುಸಡತೆಯು | ನಿಕ್ಕದಿಂದಿಲ್ಲಾಗಿನಿಲ್ಲದೆ | ಗಕ್ಕನೇನಡೆಯುನಲುಚರವರ
ನೆಂದಪೂರ್ವಿಕರಾ || ಅಕ್ಕರದಚರಿತೆಯನರಿಯೆಯಾ | ಅಕ್ಕಗಳುಮಾ
ಸೂರಸಾನಿಯು|ಮಿಕ್ಕವರುಮುಕ್ಕಣ್ಣನಸಮಾನರಹಶರಣರನೂ ||೪೪||
ಭಕ್ತಿಯಿಂದೇಪೂಜಿಸುತನಿಜ | ಭುಕ್ತಿಮುಕ್ತಿಗಳಂಪಡೆದಿಹುದು |

ಪ್ರೋಕ್ತವಾಗಿಹುದಖಿಳಶಿವಸಿದ್ಧಾಂತನಿಕರದೊಳು ||ವ್ಯಕ್ತದಿಂದಿಹುದಿ
ಗಿಲಿಂಗನಿ | ಯುಕ್ತರಂಸೇವಿಸಿದವರನತಿ | ರಿಕ್ತದುರ್ದೋಷಾದಿಗ
ಪ್ರೊದ್ಧವವೆತಿಳಿಯದೆನೀಂ||೪೫|| ಕೇವಲಾಘಸಮೇತವಚನವ |ನೀಪ್ಪ
ವೊರೆಯೆಜನರುನಗುವರು | ಬಾವೆಎನಲತಿಕ್ರೋಧಘೂರ್ಣಿತವದನದಿ
ನ್ನೃತಿ||ದೇವಿಯೇತಾನೆಂಬವೋಲ್ಲು| ಭಾರ್ವಿಯೆಂದಳುಸ್ವಾಮಿಸಲ್ಲದು
ಸಾವಿರವನಾಡಿದೊಡುಮುವರಂತಿಲ್ಲಿಘನತರದಾ||೪೬|| ರಾಶಿಗಳುತುಂಬಿ
ಬೆಳದೆವೆ| ವೋಸುಧಾನ್ಯಗಳುಂಟೆಮನೆಯೊಳು | ಗಾಸಿಯಾಗದೆಪ್ಪ
ಗುನಿಂತಕೆಡಬ್ಬುವೆನುನಿನ್ನಾ || ಈಸಮಯದೊಳುಹಸಿದೆನೆಂದೊಡೆ
ಬೇಸರಿಸದಾಘಂಟಿಯುಡವಿ | ಟ್ಟಾಸಕಲವಂಕೊಂಡುಹೊಟ್ಟೆ
ತುಂಬಿಕೊಳಹೋಗೂ ||೪೭|| ಬೆಳ್ಳಗಾಗುವತನಕಬಾಯ್ಬಿಡು | ತು
ಳ್ಳಿದಡೆನಾನಿಡುವವಾತದು | ಸುಳ್ಳುನಿಲ್ಲಲುಬೇಡನಡೆಎಂದೆನಲುಚರವ
ನೂ || ಜಳ್ಳುಮನೆಗಾನೇಕೆಬಂದೆನೊ | ಒಳ್ಳೆವರಮನೆವೊದಲುಬೇಡು
ದುಳ್ಳವ್ರತವಿಡದಿರಲುವೊದಲೇವೋಗದಿಹೆನದರಿಂ ||೪೮|| ಆವನಿತನಿ
ಮೊಡೆವೋಗುವೆ | ಲೋಪವಂಮಾಡದಿರುನೀನೆನೆ | ಪಾಪಿದುರುಳೆಪಿ
ಚಿಗುದಿಗೆಯಕೊಂಡುಮುರಿಬಿದ್ದು || ಕೋಪದಿಂಪೋಗೆನುತೆಪ್ರೊಡೆ
ಲ್ಪೋಪಸಮುಯದೊಳವಳಗಂಡನು | ಪಾಪವೈದುವುದೆಲೆಲಿಬಿಡೆನುತ
ದುಭಿಕ್ಷುಕನಾ ||೪೯|| ಪ್ರೊಡೆವುದೇಕೆನೆವೋಲಕೆತ್ತಿದ | ದಡಿಯಿನವ
ಗಂಡನಂಗಡ | ಗಡನೆಗರ್ಜಿಸಿನೋಡಿದೆವ್ವಿದುಬೇಡಿಕೊಳುವುದಕೆ|
ಒಡನೆಬಂದೆಷ್ಟೋಒದರುತಂ | ಅಡಿಯಿಡದೆನಿಂತಲ್ಲೆನಿಂತುದು|ಹೊ
ಡೆಯದಲೆವೋಗದುದರಿಂನಾಂಬೊಡಿವೆಬಿಡೆನೆನಲೂ || ೫೦ || ಪಾಮ
ರಂಹೆಂಡತಿಗೆವೇಳ್ದಂ | ಭಾಮಿನಿಯೆವೃದ್ಧನುಮದಲ್ಲದೆ | ಸಾಮಯ
ಮಿಾರಿಹುದುಹಸಿವಿಂಬಳಲಿಬಂದಿರುವಂ||ನೀಂಮನಸ್ಸಿಗೆತಂದುವೋಗಂ
ಬಾಮತಿಯುಬಿಟ್ಟಾಪನಿತುನೀ | ಡೀಮಹಾಂತಂಗೆಂಬಗಂಡನನುಡಿಗಳ
ಕೇಳಿ ||೫೧|| ಈನಡುವೆಬಂದಿರ್ಪಹೆಣವಿದು | ಏನುಕಾರಣವಾರರಿಯ
ದೋಲ್ | ತಾನೆಬಂದಿತ್ತೆಂದುಕೋಪಾಗ್ನಿಯೊಳುವ್ಯರ್ಥವ್ರಯು ||
ವೇನುಬಂದಿತ್ತೆನುತೆತನ್ನೊಳು | ತಾನೆಗೊಣಗುಟ್ಟುತ್ತಲವನಂ| ಮಾನಿ

ನಿಯುಬ್ಬೈವುತ್ತ್ತಿರುಗಿದಳೇಸುತೋರದಲೇ ||೫೨|| ತಲ್ಲಣಿಸಿಸೈರಿಸದೆವಶಾನನ | ಪಲ್ಲಿಕೋಪಂಮುಂಬರಿವುತಿರೆ | ಕುಲ್ಲನೆನಿಸುವಗಂಡನಂಕೋಡಿದೆನೆನುತೆಬೈದು || ಅಲ್ಲಿಮನೆಯಾಮೂಲೆಯಡಕಿಲಿ | ನಲ್ಲಬೈಚಿಟ್ಟಹುದುವೆನೆನ | ಹಿಲ್ಲಡಿರೆಸುರಿದಿರುವರಾಗಿಯುಹಿಟ್ಟಭಿಕ್ಷುಕಗೇ ||೫೩|| ನೆರೆಯರೆಯಲುಕ್ಷುಧಾತುರರಿಗಾ | ಸುರುಚಿಯುಂಪರಿಪಕ್ವವೆಂಬುದು | ಸ್ಥಿರವೆನಿಸದಿಸುದಾಗಿಹಶಿವಂ ತಾಳಲಾರದಲೇ || ಕರುಕೆನಿಪಹಿಟ್ಟನಿತಕೊಂಡತಿ | ತ್ವರಿತದಿಂದಾತ್ಮೇಶ್ವರಾರ್ಪಣ | ವಿರದೆಮಾಡುತಲನಿತುಕೈಕೊಂಡುದುದು ಗಂಟಲೊಳೂ ||೫೪|| ಚಲಿಸದುಸುರಾಡದಿರೆಕೈಯಿಂ | ತಲೆಯಬೊಡುಬೊಡುಕೊಳುತೆಶ್ಲೇಷ್ಮಾ | ಕುಲಿತದಿಂಬೋರ್ಲ್ಲಾಗಿಬಿದ್ದುಪ್ರೊಡವಿಗೆಕೈಯ್ಯೂರೀ || ಮಲಹರಾತ್ಮಂಮೂರ್ಛೆಗೆಡಂಡ್ಹಂ | ಬಲಿಸುತಲ್ಲಿಯೆ ಕುಳಿತುಕೊಂಡಾ | ಲಲನೆಭಂಡಂಗಿಯನುಕೂರ್ತೆಂಡಂದನಿಯುಕೊರಗೀ ||೫೫|| ಮಾನಿನಿಯೆಸಹಿಸಲುಮದಾಗದ | ಈನಿರರ್ಥದಹಿಟ್ಟನನಗೆಂ | ದೇನೆಬಯುಚಿಟ್ಟದೆಯೊಸಾಕೆಂತೆಂದುಮುಳಿದುದನೇ || ಆನೆಲದೊಳೇಹಾಯ್ದುಪ್ಪೋಪನು | ಜ್ಞಾನಮೂರ್ತಿಯೆನಿಪ್ಪಜಂಗಮು | ನಾನಿತಂಬಿನಿತಂನಸಖಿಯುರಕರಡುನೋಡಿದಿರಾ ||೫೬|| ನಮ್ಮನೆಯಗಂಡಸಿನಕೆಲಸವು | ನಿಮ್ಮಮನಸಿಗೆಬಂದಿತೇನೌ | ಸುಮ್ಮನೇನಮ್ಮವನುಮುದುಕಂಗಿಡಿಸಿಮನೆಯಲ್ಲಾ || ಕೆಮ್ಮನೇಹಾಳ್ಮಾಡಿದನುಕೇ | ಳಮ್ಮಗಳಿರಾನಾನುಹೀನನ | ನೆಮ್ಮಬಾಳುವುದೆಂತದೆಲ್ಲಿಂಬಂದಮುದಿಯಯ್ಯಾ ||೫೭|| ಅವನಮಾಯಾಬಲೆಗೆಸಿಲ್ಕದ | ವಿವರಹೀನನುಮೇಸೊದಿನದಿಂ | ಪವೆಇರುವೆಗೊಂದಿನಿತುಸಿಗಲೀಯದಲೆಬಯುತಿರ್ದ || ಯುವತಿಯುರೆಎನ್ನನುವಿಡಂಬಿಸು | ತವನಿಗಿಕ್ಕೆಂಪನಿವನಿವನಿಂ | ಸವನಿಸದುಸಂಸಾರವಿನ್ನಿರಲಾರೆಮರುಳೊಡನೇ || ೫೮ || ಹುಗ್ಗಿಯಂದದೊಳಿರ್ಪಹಿಟ್ಟಂ | ಜೊಗ್ಗಿಯುಗುಳುಗುಳುತ್ತೆಚೆಲ್ಲಿದನಿಗ್ಗೊನೋಡಿರೆತಿಂದವನಿಗಿಕ್ಕುವರೆದಯುದಿಂದೇ || ವೆಗ್ಗಳಡಗಂಡನನ್ನು ಹಿಂದಕೆ | ನುಗ್ಗಿನೂಕುತಲಿವನೊಡನೆಬಲು | ಕಗ್ಗಳಾಗಿರೆನಯ್ಯನಿಂದಲೆಬದುಕುಗೊಳಲೆನುತಂ ||೫೯|| ಮನೆಯುಪೊರಡುತೆಪೋಗುತಿರ್ದಹೆ |

ಣ್ಣನೆಕರೆದುಬೆನ್ನಂಟಿಪಾಮರ । ನನಿತರೋಳ್ಕೈಪಿಡಿದುನಿನ್ನಂಬಿಟ್ಟ
ಯರೆನಿಮಿಷಂ ॥ ಮನವುನಿಲ್ಲದುಎನ್ನತಪ್ಪಗ । ಳನಿತುಸೈರಿಸುಕ್ಷ
ಮಿಸಲುಬೇ ! ಡೆನುತೆತನ್ನಯಸತಿಯುಳಂಕರೆತಂದನಾಮನೆಗೇ ॥೬೦
ಆಸಮಯದೋಳ್ಬಂದಿಬಂದುನಿ । ವಾಸದೋಳ್ತಾಪಸನುಸುರಿಸಿದ
ಲೇಸೆನಿಪದಿವ್ಯಪ್ರಸಾದವನೋಡುತಂಹಿಗ್ಗಿ ॥ ಆಸೆಯಿಂಭಕ್ಷಿಸುವು
ಕಂ । ಡಾಸತಿಯೊಡವೆಯೊಡವೆಯುವರಿಂ । ಗೀಸಹಜದಿಂಸೇರಿತ
ಯಮಿಗೆಮಹಾಭಾಗ್ಯಂ ॥ ೬೧ ॥ ಎನುತೆಶೀಘ್ರದಿಮನೆಯಪ್ರೊಕ್ಕಾ
ಮಿನೆಯನಂಕೂಡುತ್ತನಿದ್ರಾ ! ಘನಸುಖದೊಳಿರುತಿರಲುಕಿಟಯಾ
ಗಮುಪ್ರಸಾದ ॥ ವನಿತಸೇವಿಸೆಭಕ್ತಿಭಾವದಿ । ಘನತರಸುಮಹಿಮ
ಶೋಭಿತ ! ಮನಸಿಜಾಂತಕಭಕ್ತರುಗಳಿಂಬಂದಶಾಪವದೂ ॥೬೨॥ ತ
ಲಗಿಪರಿಶುದ್ಧಪ್ರಸಾದಸು । ಫಲಬಲದೊಳಾಕ್ಷಣವೆತದ್ವಪು । ವಲ
ತರದಿಂಬಿಟ್ಟುಗಂಧರ್ವಾತ್ಮವಿಗ್ರಹದೀ ॥ ಸುಲಭವೆನಲೀಶನಪದವನಿ
ಸ್ತುಲದೊಡನೆಸಾರುವೆನುಮೇಣಾಂ ! ಸಲಲಿತಸ್ಥಿತಿಯಿಂದಲೀಶಬರಾ
ಯದೊಳಿದರ್ೂ ॥೬೩॥ ವರಮುಸುಖಕಾರಣಪ್ರಸಾದಂ । ದೊರೆದು
ಪವಿಮುಕ್ತನಾದೆನು । ಸ್ಥಿರವೆನಿಸಲುಪಕಾರವಿವನಿಗೆಮಾಡದಿರೆತಪ್ಪು
ಬರುವುದದುಕಾರಣದೆಪ್ರತ್ಯುಪ । ಕರಿಸಿಮುಕ್ತಿಯಪದವಪ್ರೊಂದುವೆ
ಧರೆಯೊಳಲ್ಲಿಯತನಕಕಿಟಯಾಕಾರದಿಂದಿಹೆನೂ ॥ ೬೪ ॥ ಎಂದು
ಸುತಾಮನೆಯುಬಿ । ಟ್ಟಂದುಧರನಾಲಯಪ್ರಾಂತವ । ಹೊಂದಿಬಂದಾ
ಜನ್ಮವರ್ತನಬಂಧವೀಡಾಡೀ ॥ ಕಂದುಗೊರಳನಧ್ಯಾನಪರವಶ । ದಿಂ
ದುತ್ತಿರಲಿತ್ತಬಳಗಾ । ದಿಂದೆಕೊರೆಯನುಹೆಂಡತಿಯನೆಬ್ಬಿಸಿನಿಜಾಂಗ
ಣದ ॥೬೫॥ ಭೂತಲದೊಳಾಕಿಟಯುಕಾಣದೆ । ಘಾತವಾಯಿತೆಂದು
ತ್ತಲ । ಖಾತಬಿಲದೊಳುನೆರೆಹೊರೆಯಬೀದಿಯೊಳು ಬಯಲೊಳಗೇ
ಪ್ರೀತಿಯಿಂದಿರದಿರದೆ ಹುಡುಕುತೆ । ಕೌತುಕದಿ ಕಳವಳಿಸಿಕೈಕಾಲ್
ಸೋತಡೆಲ್ಲಿಯುಪಂದಿಯಿಲ್ಲಾಮುದಿಯಜಂಗಮನೇ ॥೬೬॥ ನಿರತದಿಂ
ಕೊಂಡೊಯ್ದನಯ್ಯೋ । ಪರಮಭಕ್ತನುಮೂಗಿಯೆಂತಹ । ದುರುಳ
ಕಾರ್ಯವಿದುಂಡಮನೆಜಂತೆಗಳನೆಣಿಸುವುದೂ ॥ ದುರಿತವೆನುತವನಿರೆಕೆಲ

ವುವಾ । ಸರಗಳೈದಲುಶರವಿಕಸನದಿ । ಪರಿವಿಡಿದುಭಾಸುರಸರೋವರವ ಬ್ಜನಿಕರಗಳಿಂ ॥ ೬೭ ॥ ಮೆರೆದಿರುವಶರದಾಗಮಂಬಂ । ದಿರುವಸಮ ಯಾಂತರದಿಮಾಧವ । ಶರನವೇವಿಯಘನಸುಪರ್ವವುಸಮನಿಸಿರಲಂಡು ॥ ಧರಣಿಪಂಸಂತೋಷದಿಂವಿ । ಸ್ಫುರಿತಮಹಿಮಳಿನಿಪ್ಪದೇವಿಯ । ಚರಣ ಗಳಿಗರ್ಪಿಸುವಹಬ್ಬದಬೇಟೆಗಳತರಲೂ ॥೬೮॥ ಸಂತಸದಿತಳವಾರರುಮು ನ । ತ್ಯಂತಶೀಘ್ರದಿಕಳುಹಿಸಲ್ಕ । ಶ್ರಾಂತಪುರದೊಳಗಿರ್ಪವರುವೊಡ ಲಿಂದಕುಡುವವರಾ ॥ ಸ್ವಾಂತವನೊಡಂಬಡಿಸುತಂಮದ । ವಾಂತಕಾಸ ರಮೇಷಕಿಟಗಳ । ನಂತಮಂಮಿಗೆ ಕೈಕೊಳುತಲಾ ಪುಂಡ್ರಪಾಮರ ನಂ ॥೬೯॥ ಎಲವೊಪಾಮರಆದಿಶಕ್ತಿಗೆ । ಬಲಿಗುಡುವಬಲುಹಬ್ಬವಿದು ನೀಂ । ನಿಲಯದೊಳಗಿಹಪಂದಿಯಂತಾರೆನಲುಮನವನೆಂದಂ ॥ ಹಲವುಧಿ ನದಿಂಮನೆಯೊಳಿಲ್ಲಿಯಿ । ಚಲಿಸದಂತಿರುತಿರ್ದುದೆಲ್ಲಿಯೊ । ಕೆಲವುಧಿನವಾ ಯಿತ್ತುಪೋದುದೆನುತ್ತಪೇಳಲ್ಕೆ ॥೭೦॥ ವನಜಸಾಯಕವೈರಿವಾಸದೊ ಳನಿತುದಿನದಿಂದಿಹುದುಸೂಕರ । ವೆನುತಲೋದ್ವಂತಿಘುಹೆತವಕದೊಳಾ ಯೆಡೆಗೆಪೋಗೀ ॥ ಘನಮನೋಹರಕಿಟಿಯನುರೆಬಂ । ಧನವಮಾಡಿಧ ರಾಧಿಪನಮುಂ । ದನುನಯದೆಕೊಂಡೊಯ್ದು ನಿಲ್ಲಿಸೆ ಪಾಮರಂಕಿಟಿ ಯಂ ॥೭೧॥ ಭೂರಮಣನರುಹಿದನುಹರ್ಷಸು । ಪೂರಿತಾತ್ಮಕನಾಗಿ ಕಂಡಿದ । ನಾರುಹೊಡೆಯಲ್ಬಾರದಾನೇಹೊಡವೆನೆಂದೆನುತಾ ॥ ಸಾರ ಸುಂದರವೆನಿಪವಂದಿಯ । ಸಾರಿಪಕ್ಕದೆನಿಂಡುಖಡ್ಗದಿ । ಘೋರಬಲದಿಂ ಹೊಡೆಯಲದುಚಾಮೀಕರವದಾಗೇ ॥ ೭೨ ॥ ನರಪರಸುಮತಿವಿಸ್ಮಯಾ ನ್ವಿತ । ಭರಮನೋನಾಳೀಕನಾಗುತೆ । ಕರಸುತೆಂದನಮಾತ್ಯನಂನೋ ಡಿದೆಯನೀಂಚಿತ್ರ ॥ ತರವಿದೇನತಿಕೌತುಕವ್ರುಅಸಿ । ಯುರುಸುವರ್ಣ ಮುದಾಯ್ತುಸೋಂಕಲು । ಧರಣಿಯೊಳುಪೊಸತ್ಯೆನಿಇದುಸಾಮಾನ್ಯಕಿ ಟಿಯಹುದೇ ॥೭೩॥ ಎನುತೆಚರ್ಚಿಸುತಿರಲುಮಂತ್ರಿಯಿಂ । ದನುವಿಚ ಕ್ಷಣಶೀಲನದ್ಭುತ । ಮನದೊಳಾಗಳ್ತಮ್ಮರಾಜ್ಯಾಂತರದೊಳಿರುತಿರ್ಪ ॥ ಅನುಪಮದಕಬ್ಬುನವಪೋತ್ರಿಯ । ತನುವಸೋಂಕಿಸಲನಿತುಕಬ್ಬು ನ । ವನಿಮಿಷಾಚಲಷಂತೆತೋರ್ಪುದುಕನಕಮಯವಾಗಿ ॥೭೪॥ ಆಸ

ಮಯದೊಳ್ವಂದಿದೇಹವ | ದೋಸರಿಸೆಗಂಧರ್ವನಾಗಳೆ | ಭಾಸುರ
ಚಿತಗಾತ್ರದಿಂಮಣಿಭರ್ಮನಿರ್ಮಿತಸ || ತ್ತಾಕಿಸಿತಾನುಪಮಾನದಿವ್ಯವಿ |
ಸವನಿಸುವವ್ಯೋಮಯಾನದಿ | ಲೇಸಿನಿಂಕುಳ್ಳಿರ್ದುಜಂಗಮಸುಪ್ರ
ದೋಪ ||೭೫|| ಭೋಗಮಹಿಮೆಯುವಶದೇಶಾಪವ | ನೀಗಿವರಮಸುಖ
ವಿಗ್ರಹ | ನಾಗಿರುವೆನೆಂದತುಳಿಸಂಭ್ರಮದಿಂದೆಶಿವಪುರಕೆ || ಪೋಗು
ಕೋಲಾಂಗವಿತ್ತಲ್ | ಬೇಗದಿಂಕಾರ್ತಸ್ವರಮಯುವ | ದಾಗಿಪ
ಸುತ್ತಲಿಹುಪಂಕಂಡಿದರಿದರಿದೂ ||೭೬|| ಧರಣಿಪುರುಹೂತಂಪ್ರ
ಯು | ಭರಿತವಾನಸನಾಗಿಶಬರನ | ಕರಸಿಎಲೋಈಕಿಟಿಯುನಿನಗ
ರೆಪುದದೆಂತೆನಲೂ || ನರವರನೆಕೇಳೊಂದುದಿನವಾ | ನರಿಯೆನೆಮ್ಮ
ಹಿತ್ತಲೊಳಗಿದು | ಗುರುಕುಗಳನಿಡುತಿರಲುಗಂಜಿಯುನಾಗಹಾಕಿದೆನ
||೭೭|| ಅದನೆಕುಡಿದುಂಹೊಟ್ಟತುಂಬಲು | ಕದಲದಂತಿರೆಕೆಲದಿನಗ
ದ | ಗಿದವುಮಾಶಿವರಾತ್ರಿಯುಂಬರಲದಕೆಶ್ರೀಗಿರಿಯಾ || ಸಪನನ
ಸಲ್ಕೆಪೋಗುವ | ಮುದಿಯಜಂಗಮನೋರ್ವರಾತ್ರಿಯೊ | ಳೊ
ಕ್ಷಾಎಂದುಬೇಡಿದನಶನವಾತಂಗೇ || ೭೮ || ಎಷ್ಟೊದಿನದಿಂದಿಟ್ಟ
ಯ | ದಿಷ್ಟುಹಿಟ್ಟಂಕೊಟ್ಟವಡನುರು | ನೈಷ್ಠೆಯಿಂತಿನೆಪೋಗದಿ
ನಲ್ಲಳಿಸಿಪೋದಂ || ಶ್ರೀಷ್ಮಸುಂದರವೆನಿಸಹಂದಿಯು | ದಷ್ಟುತಿನ್ನು
ಲಧುವೊಡಲುಶ್ರೀ ! ವೈಷ್ಣವಿಯುಗಂಡನಗುಡಿಯುನಡುವಂಗಣದೊ
ರಲೂ ||೭೯|| ತಿಳಿದುದೇವಿಯುಪ್ರೋಜಿಗಿಡನಾಂ | ಳ್ಳಿಲನ್ನೈದಿಸಿದೆನು
ಜಂನೀಂ | ತಿಳಿಯಲೆಳ್ಳನಿತ್ತಿಲ್ಲಸುಳ್ಳೆಂಬುದುನರಾಧಿಪನೇ || ಒಳಗಣ
ದೆಂದುಪೇಳಲು | ಇಳೆಯೊಡೆಯನತ್ಯದ್ಭುತಸುಹೃ ! ನ್ನಳಿನನಾಗು
ಶಮುಜಂಗಮುವರಪ್ರಸಾದಶ್ರೀ ||೮೦|| ಕರಸುಸನ್ಮಾಹಾತ್ಮ್ಯವೆಣಿಸಲು
ಸ್ವರಸಿಜೋದ್ಭವಗಳವಹುದೆಯೆಂ | ದುರುತರಶ್ರದ್ಧೆಯೊಳುಕೀರ್ತಿಸಿವಸ್ತ್ರ
ಭೂಷಣಸ || ತ್ಪರಿಕರಾರ್ಥಪ್ರಚಯಮುಂಮು | ದ್ಭರವೆನಿಸಲಾಕೊ
ಯುನಿಗೆಕೊ | ಟ್ಟರಿದೆನಲ್ಕಾದರಣಪೂರ್ವಕದಿಂದೆಕಳುಹಿದನು ||೮೧||
ತುಭರಣೀಪತಿಯೊಡನೆಯು | ತ್ಯಂತಬಹುಮಾನಿತನುಮಾಗಿಸ | ಮಂ
ಶೊಳ್ಳೆಯುನೆನಿಸುವನಾತ್ಮಗತಾತಿಶಯುನಿಯುತ || ಸ್ವಾಂತನಾಗುತೆರಾ

ಘುನ್ನಣೆ | ಯಂತವಿಲ್ಲದೆವಡದಧರೆಯೊಳ | ಗಿಂತುದ್ರವ್ಯದರಾಶಿಯಂ
ಕಂಡೆನಿದುಮುತ್ಸುಕೃತ ||೮೨|| ಫಲವೆಪ್ಪೋತ್ರೀರೂಪದಿಂಮ | ನ್ನಿಲಯ
ಕೈತಂದಲ್ಲಿಯೇಯಿರು | ತಲಘುಕಷ್ಟವನಾಳಿದೆನ್ನ ನಪೂರ್ವಸೌಭಾಗ್ಯ ||
ವಿಲಸಿತನವಮಾಡಿತ್ತುನಿರ್ವ್ಯಾ | ಕುಲನೆನಿಸಿದೆನುಧರಣಿಪನೊಳುಸ | ಕಲ
ಸಮುಚಿವನಾಳ್ದಿನದುತತ್ತನುವನೀಡಾಡೀ || ೮೩ || ಪೋದುದಂಚಿತ್ತು
ಕಾಂತಿಗೌರವ|ವಾದದೇಹವನೈದುತದರಿಂ | ದೀಧರೆಯೊಳಿಹಸೂಕರವ
ದೆಂದೆನ್ನಲೆಂತಹುದು || ಶ್ರೀದಸಖನೇಬಲ್ಲನೆನುತಂ | ಮೋದದಿಂದಾ
ಕೊರಯನುಂನಿಜ | ವಾದನೆಲೆಗೈತರುವ ಸಮಯಾಂತರದಿಮಾರ್ಗದೊ
ಳೂ ||೮೪|| ಸಿರಿಮಳೆಯುವಲ್ಲಭನಕಂಡಾ | ಪರಮಜಂಗಮನಾತ್ಮಕಿಸೀ
ಮೆಗೆ | ತಿರುಗಿಪ್ಪೋಗುವ್ವಸಮಯದೊಳಗಾಪುಂಡ್ರಪಾಮರನೂ || ಚರ್ಯವ
ಥನಕಂಡಾಕ್ಷಣದೊಳೀ | ಪರಮಹರುಷಸ್ವಾಂತನಾಗುತೆ | ಧರಣಿಪಾ
ಲಗೆವಂದಿಸುತಲಿಂತೆಂಡನುಜವಪೊಳೂ ||೮೫|| ಭೂರಮಣಪೂರ್ವದ್ಯೊ
ಳುಬಂದಾ | ಧೀರನೆನಿಸುವಜಂಗಮವರಂ | ಊರೊಳಗೆಬಂದಿರುತಿಹನ್ನ
ನೋಡೆಂದುಪೇಳಲ್ಕಿ || ಸಾರತರಸವ್ಮೋದಪಾರಾ | ವಾರದೊಳ್ಮುಳ್ಗು
ಗುತ್ತೆನೃಪತಿಯು | ಮಾರಸುಂದರನತುಲಿತಮಹೋತ್ಸವದೊಳೊಡಗ್ಗೂ
ಡೀ ||೮೬|| ಧೀರರೆನಿಸುವಮಾತ್ಯರಂಕರೆ | ದಾರಯದೆಜಂಗಮವರೇಣ್ಯ
ನ | ಭೂರಿಗೌರವದಿಂಕರಸಿಮಾಣಿಕ್ಯಮಯಪೀಠ || ವೇರಿಸುತ್ತೆಭಕ್ತಿ
ಯೊಳಗರ್ಘ್ಯವ | ಸಾರಪಾದ್ಯವನೀವುತೆನಮ | ಸ್ಕಾರನಿಚಯದೆಸನ್ನು
ತಿಗಳಿಂಪ್ರೀತನಂಮಾಡಿ ||೮೭|| ಶ್ರೀಮಹಿತಗಂಧರ್ವರೂಪದಿ | ಹೇಮ
ಮಯದವಿಮಾನವೇರಿಪಿ | ತಾಮಹಾದಿಸುಪರ್ವರುಂಮುನಿಗಳುಪ್ಪೊಗಳ
ತಿರಲೂ || ಸೋಮಶೇಖರನಿರ್ಜನಿಶ್ಚಲ | ಧಾಮವೈದಿಸ್ಸುಖಾತ್ತನಾದಂ |
ಈಮಹೀತಳದಲ್ಲಿಯದ್ಭುತವಿದುವಿಚಾರಿಸಲೂ || ೮೯ || ದೇವನಿಮ್ಮಮ
ಹಾತ್ಮ್ಯೆಯರಿಯಲ ! ದಾವನಿಂದಹುದೆಂದುನುತಿಸುವ | ಭೂವರನವಾ
ಕ್ಯಗಳಕೇಳಿಯಪೂರ್ವಕೃಪೆಯಿಂದಾ || ಭಾವಜಾರಿಸಮಾನನಪಸ |
ದ್ಧೀವರೇಣ್ಯನುಮೆಂದನಿನ್ನಸ್ವ ! ಭಾವವರಿದೆನುಭಕ್ತಕುಲಪಾವನಚರಿ
ತಶೀಲಾ ||೯೦|| ಭುವಿಯೊಳಗೆಜಂಗಮಪ್ರಸಾದವು | ಭವರುಗೌಷಧವ

ಹುಪುಪಾರ್ಥಿವ | ವಿವರಿಸುವೆಕೇಳ್ತನ್ಮಹಾತ್ಮ್ಯವವಿಶದವಪ್ಪಂತೇ || ಪ್ರವಿಮಲಸುಮತಿಯಿಂದೆಕೇಳೆಂ | ದವಿರಳಿತಕಾರುಣ್ಯದಿಂದಾ | ಭವನಮೂರ್ತಿಯೆನಿಪ್ಪಜಂಗಮನರುಹತೊಡಗಿದನು ||೯೧||

ಅಂತುಸಂಧಿ ೧೦ಕ್ಕೆ ಪದ ೫೧೪ಕ್ಕಂ ಮಂಗಳಂ ಮಹಾ

---

## ಹನ್ನೊಂದನೆ ಸಂಧಿ

## ಜಂಗಮ ಪ್ರಸಾದ ಮಹಿಮೆ

ಸೂಚನೆ|| ಜಂಗಮಂಸತ್ಕರುಣದಿಂಚರ |ಲಿಂಗಶೇಷಮಹಾತ್ಮ್ಯೆಯಂನೃಪ |:ಪುಂಗವಂಗರುಪಿದಕಥಾವೃತ್ತಾಂತವೆಂತೆನಲು ||

ಪದ|| ಇಳೆಯೊಳಿರ್ದನದೋರ್ವಭಕ್ತಂ | ನಳಿನಶರಘಸ್ಮರಪದಾಂಬುಜ | ಲುಳಿತಷಟ್ಪದನೆನಿಪಶ್ರದ್ಧಾವೋದಸಂಚಿತನೂ || ಲಲಿತದಿವ್ಯಪ್ರಭಾವದಿಂಸ | ದ್ವಿಲಸಿತಾಭವಶರಣಮಂದಿರ | ದೊಳಗೆಭಿಕ್ಷವಕೊಂಡುಜಲಪೂರಿತತಟಾಕಥರಾ ||೧|| ವಲಯದೊಳುಪರಿಶುದ್ಧನಾಗುತೆ | ಜ್ವಲನಲೋಚನನರ್ಚನಾಂತದಿ | ಫಲಿತಮುಕ್ತಿಯಹೇತುವೆನಿಪಮಹಾಪ್ರಸಾದವನು || ಸುಲಲಿತದಸದ್ಭಾಜನದನೆಲೆ | ಗೊಳಿಸಿಲಿಂಗಾರ್ಪಿತವಮಾಡುತೆ | ಜಲದೊಳಾಚಷಕವನುಬಿಟ್ಟಾಚರವರಂಪೋದಂ ||೨||ಅಂತುನೀರೊಳಗಿಟ್ಟಭಾಜನ | ದಂತರದೊಳಿನಿತೊಂದುಕಣವುಜ | ಲಾಂತರದಿಚರಿಸುವಝಷದಸುಕೃತಾತಿಶಯದಿಂದಂ || ಮುಂತೆಯುಳಿದಿರೆಚರಣಶೇಷವ|ದಂತವಕದಿಂಮಂಗಲಾಕ್ಷಣ| ವೆಂತವಿಲ್ಲದಸೌಖ್ಯಮೂರದಿಕೆಲವುದಿನವಿರಲೂ ||೩|| ದೈವವಶದಿಂದೋರ್ವಶಬರನು | ಮಾವನಾಂತರದಲ್ಲಿಬೇಟೆಗೆ | ಕಾವಲಿರ್ದೇಬಳಲಿಬಂದನುಬಹಳನೀರಡಸಿ || ಆವನೇಚರನತಿಶಯದೊಳಿರು | ವಾವನಾಳಿಯುಕಾಣುತಿದರೊಳು | ಭಾವಜನಕೇತುಗಳುನೆಲಸಿರುತಿರ್ಪವೆಂದೆನುತ ||೪|| ಆಪುಳಿಂದಕನತುಲಮುತ್ಸ್ನಂ | ಪಾಪಕದಿಬಲೆವೀಸಿಶಳೆಯಲು | ಚಾಪಲಾಟನೆಯುಕ್ತಮೀನ್ಗಳಶ್ರೇಣಿಯೊಳುಸುಕೃತ || ರೂಪವಪ್ಪಪ್ರಸಾದಭೋಗಪ್ರ | ತಾಪಮ

ತ್ಸ್ಯವುಸಿಕ್ಕಿಬರಲಡ । ನೇಪರೀಕ್ಷಿಸಿನೋಡೆತೆನುರೋವೋದ್ಗಭುವದಾ
ಗೆ ॥೫॥ ಜಾಲದೊಳಗಿರಲದನುಶಬರನು । ಮೋಲಯುಕೆಕೊಂಡೊಯ್ದು
ತನಗನು । ಕೋಲನೂನಸಳಪ್ಪಹೆಂಡ್ಕತಿಯೊಡವಳಕರೆದೂ ॥ ಲಾಲಿಸುತ
ಲವಳಿಂಗೆತನ್ನ । ತಾನ್ಸ್ಯಳಿಯುಂತೋರುತ್ತಳೆಂದನು । ಲೋಲಲೋ
ಚನೆನೋಡಿದೆಯಸುಂದರವೆನಿಪಮೀನಂ ॥೬॥ ತಂದೆನಿದಬಾಣಸವಮಾಹ
ತ್ರಿ । ಚಂದವೆನೆಸವಿಯುವ್ರೊಲುಶೀಘ್ರದೊ । ಳೆಂದೆನಲುಮವಳಂತೆಮಾ
ಡುತಲವಗೆಬಡಿಸಿದಳೂ ॥ ತಿಂದನವನತಿಶಯಮುದಂಚಿತ । ಮಂದಹಾ
ಸಾನ್ವಿತಮುಖದೊಳುಪು । ಳಂದನಾರುಚಿಗಳಿಗೆಮತಿಯುಗ್ಗಡಿಸಿಯುಗ್ಗ
ಡಿಸೀ ॥೭॥ ಅದುವೊದಲುಗೊಂಡಾಶಬರನುರೆ । ಸದಯಮಾನಸನಾ
ಗಿಕೊಲ್ಲುವು । ದೆಪೆಯೊಳಿನಿತಿಲ್ಲದೆಗಿರೀಶ್ವರನಂಘ್ರಿಪದ್ಮಗಳಂ ॥ ಹೃಡ
ಯದೊಳುನೆಲೆಗೊಳಿಸಿರುತ್ತಿರೆ । ಮುದದಿಕಾಡಿಡಕಿಟಯದೊಂದಿನ । ಚ
ದರಿಸುತ್ತಂಪಕ್ಕಣಂಬೊಕ್ಕಲ್ಲಿಮನುರಜನೂ ॥೮॥ ಕೊಲ್ಲುತಂಬರುತಿದ್ದು
ದಿದಿರೊಳು । ಭಿಲ್ಲನಂನೋಡುತ್ತೆಮದನಿಯು । ತೋಲ್ಲಸಿತದಂಷ್ಟ್ರ
ದೊಳುಪ್ರೊಡೆಯಲ್ಕವನುಗತಜೀವಂ ॥ ಅಲ್ಲೆಬಿದ್ದಂಪವಿಹತಾಚಲ ।
ವಲ್ಲಿಯೇಬೀಳ್ವಂತೆಯವನಂ ।ಖುಲ್ಲನೆನುತಂಯಮನದೂತರುನರಕಬಾಧೆ
ಯನೂ ॥೯॥ ಮಾಡಲೂಹಿಸಿಮನದಿಕೋಪವು । ಮೂಡಿಕೊಂಡೊ
ಯ್ಯುವುದಕೆಬಂದಿರೆ । ನೋಡಿಈಶ್ವರದೂತರೆಂದರುನಿಲ್ಲಿನಿಲ್ಲಿರೆಲೋ ॥
ನಾಡೆಜಂಗಮಶೇಷವದುಕ್ಕೈ । ಗೂಡಲನುಭವಿಸಿದವನಹಿಡಿಯ । ಬೇಡಿ
ಶಿವಭಕ್ತಪ್ರಭಾವದಿಮಿಗೆಸುಕೃತಿಯಿವನೂ ॥೧೦॥ ಶಮನನಿಲಯವಸಾ
ರ್ವನಲ್ಲಂ । ಭ್ರಮಿತರುಗಳೇತೊಲಗಿರೆನ್ನುತ । ಲಮಳತರಸುರಭೂಜಕು
ಸುಮಾನ್ವಿತವಿಮಾನದೊಳೂ ॥ ಕ್ರಮದಿಮೂರ್ತವಮಾಡಿಸಲುಘನ ।
ಪ್ರಮದನಾಗಿರೆದಿವ್ಯಸುರಮುನಿ । ಸಮುದಯಂಸನ್ನುತಿಸೆಪ್ರಮಥಾಧಿ
ಪನಲೋಕವನೂ ॥೧೧॥ ಭರದಿಸೇರುತ್ತಾತನುರೆವಿ । ಸ್ಫುರಿಸುತತ್ಯನು
ಪಮಸುಸೌಖ್ಯ । ಸ್ಥಿರತರಾನುಭವೈಕತೃಪ್ತಿಯೊಳಿರ್ದನದರಿಂದೇ ॥ ಶರ
ಣಶೇಷಮಹಾಪ್ರಭಾವವ ।ಧರಣಿನಾಥನೆತಿಳಿವುದೆನ್ನುತೆ । ಪರಮಗೌರವ
ದಿಂದೆತನ್ನಹಿಮೆಯನುಚರವರನೂ ॥೧೨॥ವಿವರಿಸಲುವಸುಧೇಶನತಿಶಯ ।

ಸುವಿನಯದಿನವಿಸುತ್ತಲೋಹೋ । ಶಿವನಸನ್ನಿಭದಿವ್ಯಮೂರ್ತಿಯೆಶ್ರೀ
ಪ್ರಸಾದವನೂ ॥ ಅವಿರಳಸುಕಾರಣ್ಯದಿಂದಂ । ಸವನಿಸುತೆಕಾರಣಜನ
ನಯೆ ! ನ್ನವನುವಿಮಳಶರೀರಿಯೆಂದೆನಿಸೆನುತೆಪ್ರಾರ್ಥಿಸಲೂ ॥೧೩॥
ಮಂಪಹಾಸಾಂಕಿತಮುಖದಿಚರ । ನೆಂದಶಂಕರನನ್ವಯಾಮೃತ|ಸಿಂಧು
ಜೈವಾತೃಕನೆ| ಇದುಸಾಮಾನ್ಯವೇನಿನ್ನಂ ॥ ಹೊಂಪುವುದೆಸುವಿಭೂತಿ
ಯೆಂಬುದು|ಮಂದರಿಗೆದೊರೆಯುವದುದುರ್ಲಭ |ವೆಂದುಸುಚರಂಮತ್ತ
ರಾಜಂಗೆಂಥನಾದರದೀ ॥೧೪॥ ಭಸಿತರುದ್ರಾಕ್ಷಾಭರಣನಾ । ಗೆಸೆದುಪಂ
ಚಾಕ್ಷರಸುಮಂತ್ರಾ| ಭ್ಯಸನದಿಂಮಹಿತೇಷ್ಟಲಿಂಗವಧರಿಸಿಗುರುಭಕ್ತಿ ॥
ರಸದಿಸಂಗತನಾಗುತಿರುತಿರ । ಲಸಮುಪರಮಪ್ರಸಾದವೆಂಬುದು । ವಸು
ಮತೀಪಾಲಕನೆಸಂಪ್ರಾಪ್ತಿಸುವದೆಂದೆನಲೂ ॥೧೫॥ ವಿನಯದಿಂದೆಮಹೀ
ಶನಿಂತೆಂ| ದನುಮಹಾಗುರುತಿಲಕನೇತ|ದ್ಭನಮಹಿಮೆಯಂಪರಿವಿಡಿದು
ಬೋಧಿಸೆನೆಚಿದ್ಭಸ್ಮ||ಸನುಪಮಿತಮಾಹಾತ್ಮ್ಯಯುವುವೆ|ಮನದಿನಿಶ್ಚ
ಯಿಸುತ್ತೆಕೇಳೈ| ಜಸವಶೇಣ್ಯಂನೀನೆನುತಲನಘಾತ್ಮನಸಮಾನಂ ॥೧೬॥

## ವಿಭೂತಿ ಮಹಿಮೆಯು

ವರಕೃಪಾಭರಿತಾಂತರಂಗದೊ । ಳೊರದನನುಪಮಭೂಮಿಪಾಲ
ನೆ | ಹರನೆಪಡುವಲುಬಡಧತೆಂಕಣಮೂಡಮೇಲ್ಮೊಗದಿಂ ॥ ನಿರುತದಿಂ
ಪಿಂಗಳಶಿತಾಸಿತ । ವರಸುಧೂಮ್ರಾರುಣದವರ್ಣನಿ । ಕರದಿನಂದೆಸುಭ
ದ್ರೆಸುರಭಿಸುಶೀಲೆಸುಮನೆಯನಲ್ ॥೧೭॥ ನಾಮಭೇದದಧೇನುವವರಿಂ ।
ದೀಮ್ಮಹಿತಭೂತಿಯುಭಸಿತಮುಂ । ನೇಮಭಸ್ಮಂಕ್ಷಾರಮುಂರಕ್ಷೆಯ
ಮಮದರಿಂದ ॥ ಶ್ರೀಮಹಾಭಸಿತವದುಪುಟ್ಟಿಹು । ದೀಮತಸ್ಸುಮಾ
ರ್ಗಂಗಳೈದಿಹ । ವೀಮಹಿಗೆಕಲ್ಪಾನುಕಲ್ಪಸಕಲ್ಪವೈಕಲ್ಪ ॥೧೮॥ ವೆಂಬ
ವುಗಳೊಳುಕಲ್ಪವಿಧಿಯೆಂ|ದೆಂಬಭೂತಿಯದುತ್ತಮತರಂ| ಎಂಬುದದು
ದೊರಕವಿರೆನಿಕ್ಕಾನತಲ್ಕನೆಸೆಗುವುದು ॥ ಸಾಂಬಲೇಪನಪ್ರಿಯವಿಭೂತಿ
ಯು |ನೆಂಬಿಮಾಡುವವಿಧವಕೇಳೈ । ಕೊಂಬುದುತ್ತಮಗೋಮಯ
ವಿದಂಭುವಿಯೊಳಗೆಪತನ ॥೧೯॥ ವಾಗಲೀಸದದಂಕರದೆಪಿಡಿ । ವಾ
ಗಳೆಂಬುಜಪತ್ರದೊಳಗಿಡು ! ವಾಗಸದ್ಯೋಜಾತಮಂತ್ರೋಚ್ಚರಣೆ

ಪಂಪಾಡೆ ॥ ಭೋಗಮೋಕ್ಷಸುಕಾರಣಾತ್ಮಕ । ವಾಗಿಮೆರೆದಿಹಪಾವನ
ದೇವದಿ । ಬೇಗಪಿಂಡಂಗಳನುಗೊಳಿಸುತೆತತ್ಪುರುಷದಿಂದೇ ॥೨೦॥ ಆರತಿ
ಘುತಲಘೋರಮಂತ್ರೋ । ಚ್ಚಾರಣದಿಶೈವಾಗ್ನಿಮಧ್ಯದಿ । ಸೇರಿಸು
ವುದದುಕಲ್ಪವೈಗಹನಾಂತರದೊಳೊಣಗೀ ॥ ತೋರುತಿರ್ಪಗೋಮ
ಯವುಕ್ಕೆ । ಸಾರೆತಿಳಿಸಿದಪೂರ್ವವಿಧಸುವಿ । ಚಾರದಿಂಸುಡಲದನುಪ
ನುಕಲ್ಪವದೆನಿಸುತಿಹುದು ॥೨೧॥ ತಾನೆಸುಟ್ಟಬೂದಿಯೊಳುಕಸ । ವೇ
ನುಳುಳಿಸದೆವಸ್ತ್ರದಿಂದೆನ । ವೀನವಾಗಲುಶೋಧಿಸುತೆಗೋಮೂತ್ರದಿಂ
ಪಿಂಡ ॥ ವಂನಿಯತದಿಂಮಾಡೆಪುನುಜಂ । ಮಾನಿತಸಕಲ್ಪವದೆನಿಸುವು
ದು । ಏನುಮನುಸರಿಸದಿಹವಿಧವದಕಲ್ಪವೆನಿಸುವುದು ॥೨೨॥ ಏಂದರಿ
ಘುವೀತದ್ವಿಭೂತಿಯ । ಮುಂದಮಹಿಮಾಖಿಳವಿಧಿಗಳಂ । ಹೊಂದಿಶ್ರೀ
ಕಾಲಾಗ್ನಿರುದ್ರೋಪನಿಷದುಕ್ತಿಯೊಳೂ ॥ ಸಂದಿಹುದುಶ್ರುತ್ಯಂತಸೂ
ಕ್ತಾ । ನಂದಮಾರ್ಗದಿಸಿರವುಮುಖವದ । ಮುಂಡುಗೊಂಡಿರುವವಯವ
ಗಳೊಳನವರತಂಬಿಡದೆ ॥೨೩॥ ಧಾರಣವಮಾಡುವತ್ರಿಪುಂಡ್ರದ । ಕಾರ
ಣಂಮಿಗೆಸಿದ್ಧವಪ್ಪುದ । ಪೂರಯಿಪುತಿಂತಹಭಸಿತವದನಾವಹಾಮ
ಹಿಮಂ ॥ ಧಾರಣವಮಾಡುವನವಂಸ್ಥಿರ । ಭೂತಘನುಮೋಹನಿದಕೆಸರಿಶ
ಯು । ದೋರುವುದೆಯ್ಣುಮಾತ್ರಮುಂನರನಾಥಕೇಳಿನ್ನೂ ॥೨೪॥
ಶ್ರೀಕರಂಮುಕ್ತ್ಯಂಗನಾಸುವ । ಶೀಕರಣಕೃತ್ಯಾಂಕತಿಲಕಂ ।
ಪ್ರಕಟತಸಂಸಿದ್ಧಿಕರಪ್ರಖ್ಯಾತಿಯುತಭೂತಿ ॥ ಆಕುಲಿತಘಿಪಘೋರ
ಪಾಪಾ । ನೀಕಪಸುಧಾಭೃತ್ಸಮುಚ್ಚಯ । ಪಾಕಶಾಸನಪಾಣಿಸಂಸ್ಥಿ
ತಹೇತಿಚಿದ್ಭೂತಿ ॥೨೫॥ ಉರಗರಾಟ್ಕಂಕಣಶರೀರಾಂ । ತರವಿಲೇಪನ
ಪ್ರೀತಿಭೂತಿಯು । ಸ್ಫುರಿತಫಾಲತಲಾಂಬುಜೋದ್ಭವಪೂರ್ವವಿಲಿಖಿತದಾ ॥
ಪರಮಪಾಪಾಕ್ಷರನಿಶಿಗೆಭಾ । ಸುರಪ್ರಭಾಮಯಜ್ಯೋತಿಭೂತಿಯು ।
ಸ್ಥಿರತರಾತ್ಮೀಯೈಕಮಾನಸಪನುಪಮಸುಭಕ್ತೀ ॥೨೬॥ ಭಾವನಾಧಾರ
ವುನರಾನೀ । ಕಾವನೈಹಿಕದಿವ್ಯಮೋಕ್ಷಪ್ರ । ಭಾವಪೂರ್ಣಭವಕೃಪಾ
ಸಂಭೂತಿಯುತಭೂತಿ ॥ ಈವಿಭೂತಿಮಹಾಮಹಾತ್ಮ್ಯಗೆ । ಪಾವನಿತ
ಮಹಿತೇತಿಹಾಸವು । ಭೂವರೇಣ್ಯನೆಮೋಣಿಹುದುಪೇಳುವೆನದೆಂತೆನಲೂ

||೨೭|| ಓರ್ವಪಾಪಿಯುರೋಗಬಾಧಾ । ಪೂರ್ವಕದೆಸಂಚಾರಗೈವುತೆ ।
ಗುರ್ವಿನಿಂದಿಪವಕ್ಕಣದಬಾಹ್ಯದೆಶ್ಮಶಾನವಹಾ || ಊರ್ವಿಯೊಳ್ಬಿದ್ದಿ
ರಲುಶುನಕಂ । ಸಾರ್ವದೇಹಂಭಸಿತಮಯುವೆನೆ । ಉರ್ವಿಮೆಟ್ಟುತ್ತ
ಲವನದೇಹವಕಾಲ್ಗಳಿಂತುಳಿಯೇ ||೨೭|| ಆಮಹಾಪಾತಕಿಯಪೇಹದ।
ನೇಮದಿಂಘುದ್ರಗಳುವೊಪ್ಪಿರೆ । ಪಾಮಠನುಮಾಸಮಯದೊಳ್ನಿಜ
ಪ್ರಾಣಮಂಬಿಡಲೂ || ತಾಮರಸಮಿತ್ರೋದ್ಭವನಭಟ । ರಾಮಹಾಶ
ಯದಿಂದಲವನಂ । ಭೀಮತರದಿಂಸಿಕ್ಷಿಸಲುಯಮನಿದಿರುನಿಲ್ಲಿಸಲೂ
||೨೯|| ಆಸಮಯದೊಳಗಾಕೃತಾಂತನು । ಮಾಸುಶೀಲನನೋಡಿಪ್ರಾ
ಣಾಂ। ಶಾಸುಕಾಲದೊಳಾಗಿರುವಭಸ್ಮೈಕಧಾರಣದ || ಲೇಸೆನಿಪಪ್ರಾ
ಹಾತ್ಮ್ಯವಶದಿಂ । ದೇಸಮಸ್ತಾಘಗಳಕಳೆದುಶು । ಭಾಸಮೇತನೆನಿಪ್ಪಕ
ತ್ರದೆಮದೀಯಸಿಕ್ಷೆಗಿವಂ||೩೦|ಎಂತುಪ್ರಾಪ್ತನೆನುತ್ತೆಸನ್ಮತಿ|ವಂತನವನಂ
ಮಾನಪೂರ್ವಕ। ದಿಂತರುಣಶಶಿಶೇಖರನಲೋಕಕ್ಕೆಘನತರದಾ || ಸಂ
ತ್ರಸದಿಕಳುಹಿದನುಮಾಗಿಯ । ನಂತವುಹಿಮಾಸ್ಪದವೆನಿಪಭ । ಸ್ಮಂತ
ಳೆದಸತ್ಕೃತ್ಯವಿಂತಹುದಂತುಮಲ್ಲದೆಯುಂ ||೩೧|| ಲೋಕನಾಯಕ
ಕೇಳ್ವುದೀಭೂ । ಲೋಕದೇವನುಮೋರ್ವಘೋರಾ । ನೇಕಪಾಪಾಚಾ
ರನಾಗಿರಲವನಬಂಧುಗಳೂ || ಸಾಕಲಿತದುಷ್ಕೃತ್ಯಗಳಕಂ । ಡಾಕನಿ
ಷ್ಮನಸೇರಲೀಯದೆ । ಲೌಕಿಕದೊಳವನಂಕುಲದೊಳುಬಹಿಷ್ಕರಿಸಲವ
ನೂ ||೩೨|| ಸಕಲವಂನೆರೆಬಿಟ್ಟುಪೋಗುತೆ । ವಿಕಲನಾಗಿಯೆಘೋರ
ವಿಪಿನಾಂ। ತಿಕದೊಳಿರುತಿಶವಕ್ಕಣಪ್ರಾದೇಶವಂಸೇರೀ || ಬುಕುತಿಗಿಲ್ಲ
ದೆವೇದಭಾಷಾ ಪ್ರಕಟಕಾಕುಸ್ವರನಿಯುತನಾ ।ಗಿಕಡೆಯೊಳುವರ್ತಿಸುತ
ಲಾಯುಘವಿಲ್ಲ್ಲದೆಯನುಭವಿಪಾ ||೩೩|| ಕಾರಣವನೀಜನರಕಣ್ಣಿಗೆ । ತೋ
ರುತಿಹನಿದುಸತ್ಯಮೆಂದೆನೆ । ಪಾರುವನದೇಹಕ್ಕೆಕುಷ್ಟವುಪ್ರಾಪ್ತವಾಗಿ
ರಲೂ || ಆರುನೋಡಲಸಹ್ಯಮಾನಶ । ರೀರನಂತಮ್ಮಯನಿಕಟವುಂ।
ಸೇರಲೀಯದಪೂತಿಗಂಧಾನಿಲವದಾಸ್ಥಾನ ||೩೪|| ವೆಲ್ಲತುಂಬಿರಲಡಿಯಿ
ಡಲುಬಲ । ವಿಲ್ಲದೀಷನ್ಮಾತ್ರಮುಂಪಿಡಿ । ದಲ್ಲಿಗಲ್ಲಿಗೆಕಡಿದುಬರುವೊ
ಲುಪಾರುವನದೇಹಂ || ಮೆಲ್ಲಮೆಲ್ಲನೆಹಶಿವತಾಳದೆ । ಭಿಲ್ಲಗ್ರಾಮಸ

ಪಾಪದಡವಿಯ । ಹುಲ್ಲಿನೊಳುತಿರುಗುತ್ತಲಿರ್ದನದಕ್ಕೆ ಪೂರ್ವದೊಳೂ
॥೩೫॥ ವನಹುತಾಶನದಲ್ಲಿಸುಟ್ಟ । ರ್ದನಲವಡಗಿದಗೋಮಯಶಕಲ ।
ವನುನಿರೀಕ್ಷಿಸಿತನ್ನಹೊಟ್ಟೆಯುಹಶಿದಕಾರಣದೆ ॥ ಮನವೆಳಸಿಭರದಿಂದ
ಕೈಕೊಂ । ಡನುನಯದೊಳಿನಿತಿನಿತುತಿನ್ನುತೆ । ಘನಭಸಿತರಾಶಿಯೊಳು
ಬಿದ್ದನುನಿಳಲಾರದಲೇ ॥೩೬॥ ಬಿದ್ದಿರಲುಘೋರಾಟವಿಯುಸುಡು । ತಿ
ದ್ದಭೂತಲದುಷ್ಣದಿಂದಡೆ । ದಿದ್ದಸಕಲಾಂಗವುಪಟಪಟನೆಸೀಳ್ದುಮತ್ತ
ಪನಂ ॥ ಹೊದ್ದಿದಸುವಂಬಿಡುವಸಮಯದೊ । ಳೆದ್ದುಬಂದರುಯಮನ
ದೂತರು । ಗದ್ದಲವಮಾಡುತ್ತೆಘೋರಗದಾದಿಪಾಣಿಗಳೂ ॥೩೭॥ ಅತಿ
ಭಯಂಕರಯಮನಕಿಂಕರ । ತತಿಯುಸೂಕ್ಷ್ಮಶರೀರವುಮನೂ ।
ರ್ಜಿತದಿಕೊಂಡೊಯ್ದಾತನಂ ಶಮನಾಂತಿಕಡೊಳಿಡಲೂ ॥ ಮೃತಪತಿ
ಯುನಡನಡುಗುತಂಶಂ । ಕಿತದಿನಿಜಕಿಂಕರರದೂರುತೆ । ಕ್ಷಿತಿಯೊಳೀ
ತಂದುಷ್ಕೃತಾನೇಕಗಳನೆಸಗಿದೊಡೇಂ ॥೩೮॥ ಕಾಲವಾಗುವಸಮಯ
ದೊಳುಭವ । ಮೂಲಘನಕುದ್ಧೂಲವೆನಿಪಮ । ಹಾಲಸಿತಭಸ್ಮವನುತಿಂ
ದನುಲೇಪಿಸಿಹನಾಗೀ ॥ ನೀಲಗಳತೇಜವನುಗೊಂಡಸು । ಸೀಲನಿಲ್ಲಿರ
ಲಾಪನೆಂತುವಿ । ಶಾಲಸುಕೃತನುವೆಂಬುದಂನೀವರಿಯದಿರ್ಪಿರಲಾ ॥೩೯॥
ಎನುತೆವೈವಸ್ವತನುಪ್ರಾತನ । ಘನತರದಪುಷ್ಪಕವಿಮಾನದೊ । ಳನುನ
ಯದಿಕುಳ್ಳಿರಿಸಿಮುದದಿಂದತುಲವೈಭವದೀ ॥ ಅನಿಮಿಷರುಮಚ್ಚರಿಯ
ಗೊಳುತಿರೆ । ಧನದಸಖಪಟ್ಟಣಕೆಕಳುಹಿದ । ನನುಪಮಸುಹಿತದಿಂದಲಾ
ಯನಘಾತ್ಮನಂಮುದದೀ ॥ ೪೦ ॥ ಈವಿಧದಮಹಿಮೆಯೊಳುತಿ ಜಗವ
ಪಾವನವಮಾಡುವಭಸಿತವಮ । ಸಾವಧಾನದಿಪಾರ್ಥಿವೋತ್ತಮಪರಮ
ಭಾಕ್ತಿಕಸ ॥ ದ್ಭಾವದಿಂಕೇಳಯ್ಯಪೇಳುವೆ । ಕೇವಲದರುದ್ರಾಕ್ಷಿಯ
ಧರಿಸೆ । ಲಾವವಿಧದುಷ್ಕೃತ್ಯವೂದೊಡೆನಿರ್ಹರಣವಹುದು॥೪೧॥

ರಾಕ್ಷಸಾನ್ವಯನಾಯಕರಪೊಳ । ಲೀಕ್ಷಿತಿಯತಲದಲ್ಲಿದಹಿಸೆನಿ ।
ರೀಕ್ಷಣೆಯಮಾಡುವಮಹೀರಥನಸ್ತಿಕಂಕಣವ್ರಾ ॥ ಆಕ್ಷಣವೆಭೂಪತನ
ವಾಗೆಸ । ಲಕ್ಷಣದಿಭೂಜನರುಗಳಭವ । ಮೋಕ್ಷರಂಮಾಡುವತನದಿರು
ದ್ರಾಕ್ಷಭೂಜಗಳು ॥೪೨॥ ನೇಮದಿಂಸಂಜನಿಸಿದವುಗಿರಿ । ಧಾಮಪ್ರಿ

ಯಕಾರಣಸುಭೂಷಣ । ಸೋಮವನ್ಹ್ಯರ್ಕಾಂಶರುಚಿರಶಿವಾಕ್ಷಮಣಿಗ ಳನು ॥ ಆಮಹೇಶೋಕ್ತಕ್ರಮದಿಮುಖ । ಸೀಮೆಯಾಕರ್ಣಯುಗಗಳ ಕ । ಷ್ಠಾಮಹಿತಬಾಹುಮಣಿಬಂಧಸುವತ್ಸಪ್ರಮುಖದೊಳು ॥೪೩॥ ಉ ನ್ನತದಮುಖಸಂಖ್ಯೆಬೇರ್ಪಡು । ವನ್ನಮವುಗಳಪೂಜಿಸುತೆನುತಿ । ಯಿ ನ್ನಮಿಸಿಧರಿಸಲುನೃಪಾಲಕಚಂದ್ರಧರನಹನು ॥ ಸನ್ನುತಾಮಳಸೌಖ್ಯ ನಿಕರವ । ನಿನ್ನುಕೃಪೆಮಾಡುವಸುಫಲದಜ । ಗನ್ನುತೈಕಪುನೀತಕಾರ ಣಮಂತುಮಲ್ಲದೆಯುಂ ॥ ೪೦ ॥ ಪೂರ್ವದೊಳುಶಬರನುವಿಪಿನದೊಳ ಗೋರ್ವನಾಮೃಗಯಾವಿಹಾರಣ । ಪೂರ್ವಕಂಬಂದಿರೆಸರೋವರತೀರ ಸದ್ದೇಶ ॥ ದೂರ್ವಿಯೊಳುಬಿದ್ದಿರ್ದ್ದಶೋಭಿತ । ಶರ್ವಲೋಚನಜನಿತಮ ಣಿಗಳ । ಸಾರ್ವದೇಹದಿಧರಿಸದೊಂದಂಶ್ವಾನಗಳದಲ್ಲಿ ॥೪೩॥ ಬಂಧಿಸು ತೆಬೇಂಟೆಯಕೃತಕಮಂ । ಹೊಂದಿರುವನಂವಿಪಿನಕ್ರೀಡವ । ಮಂದ ಗತಿಯಿಂಬಂದುಶುನಿಸಹವಾಗಿಕೊಲಲಾಗ ॥ ಇಂದುಧರಕಿಂಕರರುಶೀಘ್ರ ದೆ। ಬಂದುರುದ್ರಾಕ್ಷಿಯನುನಿಜಕರ । ದಿಂದೆಮುಟ್ಟಿದಫಲವುಹೊಂದಿ ತ್ತೆಂದುವನಚರನಂ ॥೪೪॥ ಜಾಗಿಲವನುಂಸೇರಿಸಿದರತಿ । ಬೇಗದಿಂಶಿವ ಪಟ್ಟಣಕ್ಕೆಯು । ದಾಗಿಶ್ರೀರುದ್ರಾಕ್ಷಿಯಂ ಧರಿಸಿದ ಫಲವದಿಂತೂ ॥ ಭೋಗದೊಳುಭೂತಲಪುರಂದರ । ನಾಗಿವರ್ಧಿಪಜನವರೇಣ್ಯಾಸು ! ಯೋ ಗಕಾರಣವೆನಿಪಪಂಚಾಕ್ಷರಿಯನುಸುರುವೆನೂ ॥೪೫॥

## ಪಂಚಾಕ್ಷರೀ ಮಹಿಮೆಯು

ಶ್ರೀತುಹಿನಗಿರಿಜಾತ್ಮಸರಸೀ। ಜಾತಷಟ್ಚರಣಂರವೀಂದುಸು।ವೀ ತಿಹೋತ್ರಾಕ್ಷನುಮಮರಸಂಯುಮಿವರಾನೀಕ ॥ ಪ್ರೀತಿಸಂಪೂಜಿತಪ ದಾಂಭೋ । ಜಾತನುದ್ಯೋತಿತಶರೀರನು । ಶೀತಕರಜಾಮಾತಗರ್ವೋ ದ್ಧೂತವಿಖ್ಯಾತ ॥೪೬॥ ನಾಗಿಹಶಿವಂಯೋಗಿಜನಕ । ಲ್ಲಾಗಮನಭವನೆ ನಿಸುತಿರಲಾ ! ನಾಗಮುಖಪಿತನಾಸ್ಯಪಂಚಕದಿಂದಲುತ್ಪನ್ನ ॥ ವಾಗಿರ ಲುಪಂಚಾಕ್ಷರೀಯೆನ । ಲಾಗಿಪೆಂಪೆನಿಸಿರ್ಪುದಂಚೆ । ನ್ನಾಗಿವಿವರದೆತಿಳಿ ಸುವೆನುನೀನಾಲಿಸೈಕ್ರಮದಿಂ ॥೪೭॥ ಭೂತಲೇಶನೆವೊದಲುಸದ್ಯೋ । ಜಾತಸದ್ವಾಮದೇವಾಘೋ । ರಾತಿಶಯುತತತ್ಪುರುಷಸ್ವೇಶಾನಾಖ್ಯವದನ

ಗಳಿಂ ‖ ಖ್ಯಾತಿಪಂಚಾಕ್ಷರಗಳಿಂತು | ದ್ಭೂತವಾಗಿಹವೆಲ್ಲಕಊಡ | ಲ್ಕಾತ
ತೆಂಶಿವತನುವೆನಿಪಪಂಚಾಕ್ಷರೀಮಂತ್ರ ‖೪೮‖ ರಾಜವಾಗಿರುತಂಜಗ
ದೆವಿ |ಭ್ರಾಜಮಾನವೆನಿಪ್ಪಮಂತ್ರಸ | ಮಾಜಮಾತೃವುಸುಪ್ರಣವಯು
ತಮೆನಿಸಿಜಪಿಸಲ್ಕೆ ‖ ತೇಜವಾದಷಡಕ್ಷರಿಯುನಿ | ರ್ವ್ಯಾಜದಿಂದಾಗುವು
ದುತನ್ಮಂ | ತ್ರಾಜಪೈಕಂಪ್ರಥಿತಪೃಥಿವೀರಥಿಕನಾಗುವನೂ ‖ ೯೪
ಅಲ್ಲದಾಕೇವಲನರನುಮೆನ | ಸಲ್ಲದಾಗಿಯುಮಿದಕೆಸಂಶಯ ! ವಿಲ್ಲವ |
ಯ್ಯರಸಾತಲೇಂದ್ರನಿಕಾಸಗುಣಸಾಂದ್ರ ‖ ಬಲ್ಲಿದನೆಪಂಚಾಕ್ಷರಿಯು
ಸುರ | ವಲ್ಲಭನಧೇನುವೆನಿಪುದುಮೇ | ಣ್ಸಲ್ಲಲಿತಪಂಚಾಕ್ಷರಿಯುಸುರ
ಕುಜವುಪರಿಕಿಸಲೂ ‖೫೦‖ ಸಾರಪಂಚಾಕ್ಷರಿಯುಚಿಂತಾ | ಪೂರಸನ್ಮ
ಣಿಯುಹುಡುಪಪರವೋ | ದಾರಪಂಚಾಕ್ಷರಿಯಫಲಕಿಂಮಿಗಿಲುಫಲಮಿಹು
ದೈ ‖ ಆರುಮಾದೊಡುಮರವೆಯಿಂದವಿ | ಚಾರಸದಲೆನಮಶ್ಶಿವಾಯಯೆ |
ನೇರಯದಿಬ್ರಹ್ಮಘ್ನದೋಷಾದಿಗಳತೊಲಗಿಪುದೂ ‖೫೧‖ ಎನಲವಿರತಂ
ಜಪವಮಾಡುವ | ಘನಫಲವನೆಣಿಸಲ್ಕೆವಶವೇ | ವನಜಸಂಭವಮುಖ್ಯ
ಪ್ರಾಜ್ಞರಿಗಿನ್ನುಪೇಳುವೆನೂ ‖ ವಿನಯದಿಂಕೇಳೊಂದುಕಥೆಯದು
ಅನುಪಮುಸುಪಂಚಾಕ್ಷರಿಯುಪಾ | ಪನವೆನಿಸುತಘರಾಶಿಯಂಹರಿಸಿದ|
ದನುಸುರುವೆನೂ ‖೫೨‖ ಸಲ್ಲಲಿತದಾಶಾರ್ಹಗೋತ್ರಾ | ವಲ್ಲಭಾಖಂಡ
ಲನುಕಾಶಿಯೊ | ಳುಳ್ಳರಾಜಕುಮಾರಿಯೆನಿಪಕಳಾವತೀಸತಿಯಂ ‖ ಎಲ್ಲ
ರರಿಯಲುಮದುವೆಯಾಗು | ತ್ತಲ್ಲಿಪ್ರಥಮಸಮಾಗಮನಮಂ | ಒಳ್ಳೆದಿನ
ದೊಳಗಖಿಳಮಂಗಳಭೂಷಣಗಳಿಂದೇ ‖ ೫೩ ‖ ಪ್ರಸವಸೌರಭಗಾತ್ರ
ನಾಗುತೆ | ಪೊಸತೆನಿಪಚಿತ್ರತರಕೇಲೀ | ವಸಥದೊಳುಸಾಮಿಪ್ಯದಲ್ಲಿ
ಹವಿದ್ರುಮೋಷ್ಠ್ಮಯನು ‖ ವಸುಮತೀವಲ್ಲಭನತುಲಮೋ | ಹಸರಸಿ
ಯೊಳುನಿಮಗ್ನನಾಗುತೆ ! ಕುಸುಮಬಾಣೋದ್ಧಾತಪೂರಶರೀರನಾಗು
ತಲೀ ‖೫೪‖ ಮುದದಿಕಂಡಾಕ್ಷಣವೆಮದನ | ಪ್ರದರವಿಗಳಿತಹೃದಯ
ದಿಂದಾ | ಮದನಮೋಹಿನಿಯೆನಿಪಸುಂದರಿಯುಳನುನೆರೆಪಿಡಿದೂ ‖ ಎಧೆ
ಯೊಳಪ್ಪಲುಪೋಗೆಮುನ್ನಾ | ಸುದತಿತನ್ನಯತೌರ್ಮನೆಯೊಳೊ | ಪ್ಪಿಪ
ಸುಬಾಲ್ಯಸಮಯದೊಳತಿಶ್ರದ್ಧಾನ್ವಿತೆಯುತಾನೂ ‖೫೫‖ಮಾಡಿದಾಶಿಸೂ

ಷಗಾತ್ಮದಿ | ಮೂಡಿರುವಕಾರುಣ್ಯದಿಂನೆರೆ | ನೋಡಿಮೆಚ್ಚುತಭರ್ಗಸಾ
ಮ್ಯನೆನಿಪ್ಪಗಾರ್ಗ್ಗೇಯಂ || ನಾಡೆವಿಧಿಯುತದಿಂದನುಗ್ರಹ | ನೀಡೆಪಂ
ಚಾಕ್ಷರಿಯಮಂತ್ರವ|ಕೂಡೆಜಪಿಸಿ ದಮಹಿಮೆಯಿಂದೆಪವಿತ್ರವೆನಿಸಿರ್ಪ
||೫|| ಗಾತ್ರವುಳ್ಳವಳೆಂದೆನಿಸಿತ | ನ್ಮಾತ್ರದಿಂದೆಪರಿಗ್ರಹೀತೆ | ಸುಮಾ
ತೃಮಾಂತ್ರಿಕಳಾದಕತದಿಂನೃಜನಾಥನನೂ || ಶಾತ್ರುವಿನತೆರದಿಂದೆಕಂ
ಡುಪ | ವಿತ್ರಶಿವಮಂತ್ರೋಪದೇಶವ | ದತ್ತಯಂನಿನಗಾದಬಳಿಕಮ
ದೀಯಸಂಭೋಗ ||೫೭|| ವನ್ನುಮಾಡಲ್ಬಹುದೆನುತಲ | ತ್ಯುನ್ನತ
ಸುನೀತಿಗಳುಬಹುವಿಧ | ವೆನ್ನಲವಳುನಿರೂಪಿಸಲುಕೇಳದೆಪೊಡವಿಯಾ
ಣ್ಮಂ || ಮುನ್ನವೇಕಾಮಾತುರದೊಳುಂ | ತನ್ನನರಿಯದೆಮೇಲೆಬೀಳ
ಲು | ಮಾನ್ಯೆಯುನಿಸಿದ್ದವಳದೇಹವುಕಾದಕಬ್ಬಿಣದಾ ||೫೮|| ಮುದ್ದೆ
ಗಿಂದತಿತೀವ್ರಜ್ವಾಲೆಯ | ಹೊದ್ದಿರಲುಬಹುಭೀತಹೃದಯದೊ | ಳಿದ್ದ
ನತಿದೂರದೊಳುಹರಮಂತ್ರಪ್ರಭಾವಾಬ್ಧಿ || ಯದ್ದಿತೇಲಿಸಿದಂತೆಯ್ದಧಿಕ
ಪ್ರ | ಮುದ್ದಯಾಭಯಪ್ರಿಯವಿನಯದಿಂ | ಮುದ್ದಿಸುತೆಸುಂದರಿಯ
ನಾತ್ಮಧಿಮೆಚ್ಚುತಂಗಾರ್ಗ್ಯ ||೫೯|| ವರಬುಹಿಯನೈಜಾಶ್ರಮಕೆ
ಬಂ | ದಿರದೆನಲುತತ್ಸಂಯಮೀಂದ್ರನ | ವರಕೃಪಾಪೂರ್ವಕದಿಶಿವಪಂ
ಚಾಕ್ಷರೀಮಂತ್ರ || ವರಮದೀಕ್ಷೆಯುಪಡೆದುಮೋದದೊ | ಳಿರಲನಿತ
ರೊಳುನೋಡುತಿರ್ಪ | ನರರುವಿಸ್ಮಯುವೈದೆಪೂರ್ವಿಕಜನ್ಮದೋಷಗ
ಳು ||೬೦|| ಕಾಕರೂಪಗಳಾಗಿಪಕ್ಷಗ | ಳಾಕತದಿಬೀವುತ್ತೆದೇಹದಿ |
ಭೀಕರಾರವದಿಂದೆಪೊರಟುಬರಲ್ಕೆಭೂವರನು || ಪ್ರಾಕಟಿತಸಾನಂದ
ಸಾಂದ್ರೋ | ದ್ರೇಕಹೃದಯಾಬ್ಜಾತನಾಗಿಯು | ನೇಕವಸ್ತುಪ್ರಕರ
ವಾಚಾರ್ಯರುಗಳಡಿಗಳ್ಗೆ ||೬೧|| ಪರಮಸಂಮುದದಿಂಸಮರ್ಪಿಸಿ | ತೆರ
ಳಿಗತಿಯಂದೋರಿಸಿದಸುಂ | ದರಿಯುಬಹುವಿಧದ್ರಾವಲಾಲನದಿಂದೆಸಂ
ತಣಿಸಿ ||ಸುರಪಸಮಭೋಗೇಷ್ಟಪೂರ್ಣೋ | ತ್ಕರಸುದಿವ್ಯಸುಖಾನುಭವ
ವದಿಂ | ನಿರತನಾಗಿವಿರಾಜಿಸುತ್ತಿರ್ದನದುಕಾರಣದಿಂ ||೬೨|| ಈಪರ
ಮಮಂತ್ರಾತಿಶಯವನಿ | ಜೋಪಕಾರಾರ್ಥದೊಳರುಹಿದೆನು | ಭೂಪಪು
ರುಹೂತನೆಯಿದಲ್ಲದೆಪೇಳ್ವೆನಿನಗಾಗೀ || ಚಾಪಲತೆಯಿಲ್ಲದೆಸುಭಕ್ತಿ

ಪ್ರಾಪಕಾತ್ಮವಿಚಾರಮಾನಸ | ಲೇಪಿತಶ್ರದ್ಧಾಸುಚಿತ್ತೈಕಾಗ್ರದಿಂಕೇ ಳ್ವೈ ||೬೩|| ಅಂತುಸಂಧಿ೧೧ಕ್ಕಂಪದ್ಯ೭೭೭ಕ್ಕಂಮಂಗಳಮಹ

ಹನ್ನೆರಡನೆಯ ಸಂಧಿ

## ಜಂಗಲಿಂಗಮ ಪ್ರಭಾವವು.

ಸೂಚನೆ|| ಲಿಂಗಜಂಗಮಶರಣಮಹಿಮೆಯ | ನಿಂಗಿತದೊಳರಿದಾ ಳ್ವದೇಶಜ | ನಂಗಳಿಗೆದೀಕ್ಷೆಯನೆಸಗಿಯುದ್ಧರಿಸಿದನುನೃಪತೀ ||

ಪದ|| ಅತಿಥಿಸದ್ಗುರುಭಾವಸಂಭವ | ವತಿಶಯಸುವೇದಾಂತಗ ವ್ಯೋ | ರ್ಜಿತವತುಲಿತೋತ್ತಮವಚ್ಯುತವಪ್ರಮೇಯಕವು || ಸ ತತಪರಮಾನಂದಕಂದಾ | ಕ್ಷತವುಮಾದ್ಯಂತಪ್ರಹೀನಾ | ತತವದಾಗಿ ಪ್ರಕಾಶಿಸುತ್ತಿಹಲಿಂಗಮಂಭಕ್ತಿ ||೧|| ಸಂಗತದಿಧರಿರ್ಪವೆಂಮೋ | ಕ್ಷಾಂಗನಾಮಣಿಕಾಮನಪ್ಪವ | ನಿಂಗಿತದೊಳಿಂತಹಪರಾತ್ಪರಶಿವಮ ಹೇಶ್ವರನ || ಮಂಗಳಾತ್ಮಕನನವ್ಯಯನಭಾ | ವಾಂಗದೊಳಗುತ್ಪನ್ನವೆನಿ ಸುತೆ | ಸಾಂಗವೆನೆಸಂತತಸಮರ್ಚಕಶಿಷ್ಯಹಸ್ತದೊಳೂ ||೨|| ಸಾದರ ದೆಕೊಟ್ಟಾಷಡಕ್ಷರ | ವಾದಸದ್ಘನಮಂತ್ರರಾಜವ | ನೇದಯದಿಬೋ ಧಿಸಿದಸದ್ಗುರುದೇವಗೆಣೆಯುಂಟೆ || ವೇದಸಮ್ಮತವೆನಲುಸದ್ಗುರು | ವಾದವಂಮೇಣ್ತಂದೆತಾಯ್ಗಳು | ಮಾದರಿಸುವವರುಂವಿಚಾರಿಸಿನೋಡ ಲೀಸಕಲ ||೩|| ವಾದವಂಗುರುದೇವನೇಯೆನು | ತಾದಿಯಿಂವೇದೋಕ್ತ ಕಿಂಚಿದ್ಭೇದವಿಲ್ಲದೆಸಾರೆಪಾರ್ಥಿವತಿಲಕಗುರುವರನ|| ವೋದಹೃದಯ ದೊಳಾವನಾದಡು | ಪಾದಪದ್ಮಂಗಳಿಗೆನಮಿಸಲು | ಭೇದವಿರಹಿತಭಾ ವನೆನಿಪಂಪೂರ್ವಗುರುವರನ ||೪|| ಪರಮಸತ್ಕರುಣಾವಲೋಕನ | ವರ ಶಿಸೇವಕರಜ್ಞತಿಮಿರವ | ಪರಿಹರಿಪಚಿಜ್ಜ್ಯೋತಿಯಾಗುರುಪಾಣಿಯಿಂ

ಧತ್ತ || ವಿರದೆಯಾಗಿಹಚಿದ್ಭಸಿತದಿಂ | ದುರುವಿರತಿರಾಜ್ಯಾಭಿಷೇಕವು |
ನಿರತಚರಣೋದಕವನೇವಿಪನಿಯಮಯುತಭಾತ್ರ ||೫|| ಪಾತಕದಬಡ
ಬಾಗ್ನಿನಿಕರಕೆ | ಭೂತಧಾರಾವೃಷ್ಟಿಯುಂಪ್ರ | ಖ್ಯಾತವರತರದೇಶಿ
ಕೇಂದ್ರಪ್ರಸಾದಘನಸುಧೆಯುೂ|| ಆತತಾಶ್ರಿತಜನ್ಮರೋಗೋ| ತ್ಪಾತ
ಪರಿಹಾರೌಷಧಂಭ|ವ್ಯಾತಿಶಯಧ್ಯಾನಕ್ಕೆಮೂಲಂಗುರುವರಾತ್ಪರನ||೬||
ಮೂರ್ತಿಮೂಲವುಪೂಜೆಗಳ್ಗನಿ | ವರ್ತಿಗುರುಪದಮುಖ್ಯಮಂತ್ರ | ಸ್ಫೂ
ರ್ತಿಮೂಲಂಗುರುವರೇಣ್ಯನಗೋಪ್ಯತರವಾಕ್ಯ || ಕೀರ್ತಿಮಂಡಿತನತು
ಳಸಂಸೃತಿ | ಜೂರ್ತಿತ್ರೈಭುವನೈಕಪಾವನ | ಸಾರ್ಥಿಯೆನಿಪಗುರೂತ್ತ
ಮನಕೃಪೆಮುಕ್ತಿಕಾರಣವೊ ||೭|| ಗುರುಚರಣಭಕ್ತಿವಿರಹಿತರಿಗೆ | ಪರಿ
ಕಿಸಲಸಾಧ್ಯತರವೆನಿಸುವ | ಸ್ಥಿರಪದಂಗಳೆವೆಲ್ಲಿಯವುಸಂಸಿದ್ಧದಿಂನೊಡ
ಡೆ || ನರವರನೆತತ್ಪ್ರತಿನಿಧಿಗಳಹ | ಶರಣರಿಗೆನಮಿಸುವುದುಮಲ್ಲದೆ |
ಪರತರೋಪಚರಣೆಯಗೈವುದುನಿರತತದ್ಗುಣದ ||೮|| ಪರಿಕರವಸನ್ನು
ತಿಯುಮಾಳ್ಪುದು | ವರಪದಾಂಭೋಜಂಗಳೆಂಸು | ಸ್ಥಿರತರಶ್ರದ್ಧೆಯೊ
ಳುಕಾಂಬುದುತಚ್ಚರಿತಸುಧೆಯಂ || ಭರದೊಳೀಂಟುವಪೇಕ್ಷೆಯುಳ್ಳನ|
ವರವಪುವೆಸುಪುನೀತವಾತನ | ಕರಶಿರೋಂಚಿತನಯನಜಿಂಹಾಶ್ರವಣ
ಮುಖನಿಕರಂ ||೯|| ಮನುಜವಲ್ಲಭಗುರುವಿಗೆರಗದ | ವನಶರೀರಾದಿಗಳೆ
ವೇಕೈ | ಘನತರಸುಚರವರನಕರುಣಾಶರಧಿಸಂಗತದೀ || ಮನಸಿಜಾಂ
ತಕನತುಲಕೃಪೆವಡೆ | ದನುಪಮಸುಚಾರಿತ್ರಮಂಕೇ | ಳೆನುತೆಪೇಳಿದ
ನಜ್ಞಜಂತುವಿಗಾದಸತ್ಫಲಮಂ ||೧೦|| ಆಗಮಾಂತೋದ್ವೇದಿಯಹಶ್ಯೆ |
ವಾಗಮಜ್ಞನುವೋರ್ವನತಿಶಯ | ರಾಗದಿಂನೋಡುವತವಕದಿಂಶ್ರೀಗಿ
ರೀಶ್ವರನ || ಭೋಗಿಕಟಕಾಭರಣನಕೃಪಾ | ಸಾಗರನಶಂಕರನಭಜಿ
ಪು|ದ್ಯೋಗವಮಾನಸಪೂರಿತನುಮಾಗಿರ್ದುಪೋಗುತಿರೆ ||೧೧|| ಅತಿಶಯೋ
ಷ್ಣದಿನಡೆಯಲಾರದೆ | ಜೊತೆಯವರುಮುಂಪೋಗಲೋರ್ವನೆ| ಕ್ಷಿತಿತ
ಲದಿನಿಂದಿರುತೆಜನರುಗಳೆಲ್ಲಪ್ರೋದರುಹಾ || ಸಿತಿಗಳನೆಶಿವದೇವಹರಶಾ |
ಶ್ವತನೆನಾನಿನ್ನೆಂತುಪ್ರೇಗಲೆ | ನುತೆವಿಶಂಕಟತಾಪಯುತನಾಗಿರುವ
ಮಯದೊಳೂ ||೧೨|| ಒಂದುಭೇರುಂಡವದುಶಾಲ್ಮಲಿ | ಯಂದದಸ್ತ

ಬಕಳಮುತಶಾಖವ | ಮುಂದಮಾರುತದಿಂದೆಖಂಡಿಸಿಬಿದ್ದಿರಲ್ಕದರ || ಚಂ
ದವಂನೋಡುತ್ತೆಪಿಶಿತವಿ | ದೆಂದುಮಾಗಸದಲ್ಲಿನಿಂಡುದು | ಮುಂದೆಗ
ಮಿಸದೆನಿಂತಪಕ್ಷಿಯಭಾಯಿಯೊಳ್ಸೇರೀ ||೧೩|| ಅತಿಶಯೋತ್ಸುಕದಿಂ
ಕುತುಕಸಂ | ಚಿತಹೃದಬ್ಜನುಮಾಗಿಕಂಡಾ | ವೃತಸುಸಮ್ಮದವಿಂದೆ
ಮಸ್ತಕದೂಗುತಂಶಿವನಾ || ಕೃತಿಯತಾಳ್ದಚರಂಪ್ರಸನ್ನಾ | ಯತಢೊ
ಳಹಹಾಈಪತಗರಾ | ಟ್ವ್ಯಸ್ತತನುವಿನನೆಳಲೊಳಗೆಮತ್ತನುತಾಪಮಂ
ಕಳೆದೂ ||೧೪|| ಪೊಂದಿಸಿತ್ತೆನ್ನಂತ್ರಿಲೋಕವು | ಪೊಂದೆಪಾವನಗೈವ
ಗಂಗೆಯ | ಮುಂದದಿವ್ಯಸುಸಲಿಲಲಹರಿಯೊಳೆಂದುವುಂಚರಿಪಾ || ನಂ
ದಲಕ್ಷ್ಮಿಯುರಾಜಸನ್ಮಣಿ | ಬಂಧುರೋನ್ನತಗೇಹಗರ್ಭವ | ಪೊಂದಿ
ಸಿದವ್ರೊಲೆನುತೆಕ್ರುಪಾಲೋಕನದೊಳಿಂತೆಂದಾ ||೧೫|| ಈಪತಗನೆನಗಿ
ನ್ನ ಮಿತ್ರನಿ | ದೇಪರಮಸಂಸಿದ್ಧವೆನ್ನುತೆ | ಆಪವಿತ್ರಾತ್ಮಕನನೋ
ಡಿಎಲೈಪತಗವರನೇ || ಪ್ರಾಪಕನುಮಾಗಿರ್ಪೆಮತ್ಕರು |ಣಾಪರಿಮಿತಕ್ಕ
ದುನಿಮಿತ್ತಂ | ಭೂಪತಿಯುನೀನಪ್ಪೆಮುಂದಣಜನ್ಮಕಿಡುನಿಜವ್ಹ್||೧೬||
ಧರಣಿತಲದೊಳುಸನ್ಮಹಿಮವಿ | ಸ್ತರಿತಚೇರಮಚಕ್ರವರ್ತಿ | ಸ್ಫುರಿತೆ
ನಾಮದಿರಾಜಸಂ ತತಿಯಲ್ಲಿಸಂಜನಿಸಿ || ಸ್ಥಿರದೊಳವನಿಯುಪಾಲಿಸುತನಿ|
ರ್ಭರಸಮರ್ಥನುಮಾಗಿಕಡೆಯೊಳು | ಪರಮನಂಪೊಂದಯ್ಯಪತಗವರೇ
ಣ್ಯಸತ್ಪುಣ್ಯ||೧೭|| ಇಂತೆನುತಲಪ್ಪಣಿಯನಿತ್ತಾ | ಕಂತುಹರಶರಣಾಗ್ರ
ಗಣ್ಯನ| ನಂತದೈವವಿರಾಟ್ಟನಿಪಶ್ರೀಮಲ್ಲಿಕಾರ್ಜುನನ||ಶ್ರಾಂತಮೃದುಪದ
ವಾರಿಜಗಳಂ | ಸ್ವಾಂತಪದ್ಮದೊಳಿರಿಸಿಬುಧಸೇ | ಮಂತ್ರಿನೀವ
ರಹಸ್ತಚಾಮರನಿಕರವೀಜನಸಂ ||೧೮|| ಜಾತಮಾರುತಲೋಲೆಯಾದಪು
ನೀತತ್ರಿಜಗನ್ಮಾತೆಶ್ರುತಿವಿ | ಖ್ಯಾತೆಯಾಭ್ರಮರಾಂಬಿಕೆಯಘನಸನ್ನಿ
ಧಾನದೊಳೂ || ಪೂತಚೇತಸ್ಸರಸಿಜದಿಮು | ದ್ವಾತ್ರವೆನೆಯಲ್
ಧ್ಯಾನಿಸುತ್ತತಿ|ಪ್ರೀತಿಯೀಭಕ್ತಿಯೊಳು ಸೇವಿಸುತಿರ್ದನನವರತಂ ||೧೯||
ಆಸಮಯಕಿತ್ತಲ್ಕೆಲದಿನಂ | ಮೋಸವಿಲ್ಲದೆಕಳೆಯುತಿಳೆಯೊಳು | ವಾಸಿ
ಸಿದಭೇರುಂಡಪಕ್ಷಿಯುಲೀಲೆಯಿಂದಿರ್ದೂ || ಭಾಸುರಾಭವಪೂಜೆಗಳೆ
ಸುವಿ | ಲಾಸದಿಂನೋಡುತ್ತೆಪುಣ್ಯದ | ಲೇಸಿನಿಂದೇಹವನುಬಿಡುತಂಮ

ತ್ತೆನರಜನ್ಮ ||೨೦|| ದಲ್ಲಿರಾಜಾಗ್ರೇಸರಾನ್ವಯ | ದಲ್ಲಿವೀರವಿಜೃಂಭಿ
ತನುವೆುಹ ! ಸಲ್ಲಲಿತಚೇರಮನೃಪತಿಯೆನೆಚತುರನಾಮವದೂ || ನಿಲ್ಲಿ
ಸುಖದಿಂಸಂಭವಿಸಿರಿಪು| ವಲ್ಲಭರಸಂಹರಿಸಿದುರ್ಮ್ಮತೆ | ವೆಲ್ಲವಂಖಂಡಿಸುತ
ಲಿಷ್ಟರಗೌರವದಿಸಲಹೀ ||೨೧|| ಸಿತಗಳನನ್ಯೈಜಾಂಗದೊಳುವಿ | ಶೃತದಿ
ಧಾರಣಮಾಡಿಪ್ರಜ್ಞಾ | ರತದಿವಿಧಿಯುತಲಿಂಗಜಂಗಮಭಕ್ತಿಯುತನಾ
ಗೀ || ಸತತದಿಕ್ಕೂಲದೊಳುಸಾಂದ್ರೋ | ರ್ಜಿತಮಹಾತ್ಮ್ಯೆಯುತುಂಬಿ
ವರಿತೋ | ಹಿತನಿಜಸ್ಥಿತಿಯಿಂದೆಪಾಲಿಸಿದನುಸುರಾಜ್ಯವನೂ ||೨೨|| ಈ
ವಿಧದೆವಿವಿಧೇಷ್ಟಭೋಗವ | ಭಾವದಿಂವರ್ಧಿಸುತೆಹಂಸಾ | ಭಾವದಿಂಡೇ
ಕಾತವತ್ರಾವನಿಯಭಾರವನೂ || ಭೂವಿಶಿಷ್ಟದೊಳಾಳುತಮಖಿಳ | ದೇ
ವತೆಗಳೋಲೈಸೆಕಡೆಯೊಳು | ಭಾವಜಾಂತಕಪಟ್ಟಣವಸೇರಿರ್ಪನದರಿಂ
ದೇ ||೨೩|| ಚೆನ್ನೆಸೆವಭಕ್ತಿಪ್ರಭಾವಸ | ಮುನ್ನ ತಾರೂಢತ್ವವಿಧಿಯಂ |
ಸನ್ನುತಿಸುವಡೆಸಾಧ್ಯಮುಪ್ಪುದೆಕ್ಷಿತಿವರನೆಕೇಳೂ|| ಎನ್ನುತರುಪಿದವರನು
ಕಾರಣ | ಚೆನ್ನಿಧಿಯುವರಪಾದಪದ್ಮಗ | ಳೆನ್ನುಮನದೊಳುನಿಲಿಸಿಸಾ
ಷ್ಟಾಂಗಪ್ರಣಾಮವನೂ ||೨೪|| ಎಸಗಿಮತ್ತಿಂತೆಂದಮುದದಿಂ | ವಸು
ಮತೀಶನುಸ್ವಾಮಿಸದ್ಗುರು | ಸಶಿವಭಕ್ತಿಪ್ರೇಮಭಾತ್ರಮನೋಜ್ಞನೆನಿ
ಸೆನ್ನಂ || ಒಸೆದುಮುಕ್ತನಮಾಡಿರೆಂಬಾ | ವಸರವರಿಯುತಲಿದ್ದುಕರು
ಣಾ | ರಸದಿದೀಕ್ಷೆಯನುಗ್ರಹಿಸುತೆನ್ನುದ್ಧರಿಸುದೇವಾ ||೨೫|| ಎನಲು
ಗುರುವರ್ಯಂತದೀಯನು | ವಿನಯಸದ್ಧೃತಿಮತಿಗಳಿಗೆಭಾ | ವನೆಯರಲಿ
ನಿನ್ನಭಿಮತಾರ್ಥವದೀಗಘಟಿಸುವದೆಂ || ದನುನಯದಿಸ್ನಾನವನೆಮಾಡಿಸಿ|
ಘನಭಸಿತರುದ್ರಾಕ್ಷೆಗಳುಮಂ|ತನುವಿಲೇಪನಧಾರಣವಮಾಡುತ್ತೆಶ್ರುತಿಮ
ತದೀ||೨೬|| ಪರವರಂಜ್ಯೋತಿಸ್ವರೂಪನು | ಪರಮಲಿಂಗವನಿತ್ತುಮತಿ
ಮು | ದ್ಭರದಿಪ್ರಣವಸಹಿತಷಡಕ್ಷರಮಂತ್ರರಾಜವನೂ || ಕರುಣದಿಂ
ದುಪದೇಶವಿತ್ತುರು | ತರದಭಕ್ತಿಮಯನೆನಿಸಿಶ್ರೀ | ಗುರುಚರಣತೀರ್ಥ
ಪ್ರಸಾದಗಳಂಕರುಣಿಸುತ್ತಂ ||೨೭|| ತನ್ನ ನಿಜಶಿಷ್ಯನುಮೆನಿಸುತಂ |
ಮನ್ನಿಸುತಲತಿಶಯದಪರಮಶಿ | ವೋನ್ನತರಹಸ್ಯಗಳನತಿವಿಸ್ತಾರದಿಂತಿ
ಳುಹೀ || ತನ್ನರಾಧಿಪನಿಂದುರುತರದ | ಮನ್ನಣೆಯಕೈಕೊಂಡುಘನತೆ

ಮಿಸಿದನುಸುಚರಾ | ಧೀಶನಿತ್ತಪ್ಪರಮಭಕ್ತ್ಯಾ | ದೇಶವಾದುದುನೃಪ
ನಹೃದಯಾಂಬರಕೆಮುದ್ರೆಯನೂ || ಲೇಸಿನಿಂದೊತ್ತಿರ್ದಗತಿಯಿಂ | ದಾ
ಶರಣಸದ್ಬೋಧೆಮತಿಯಪ್ರ | ಕಾಶಿಸುತ್ತಿರೆಮುದದೆಧರಣೀಪಾಲಕಂತ್ರಿ
ವಿಧ ||೨೯|| ಮೂರ್ತಿಗಳಪೂಜಿಸುತೆಭಕ್ತಿಯ|ವರ್ತನದೊಳಿರುತಿರಲುಚಿಂ
ತಾ|ಸ್ಫೂರ್ತಿಯಾಗಲ್ಕಿನ್ನರಾಷ್ಟ್ರದಿಸೋವುಜಾವಾತ||ಜಾರ್ತಿಶರಣವರೇ
ಣ್ಯಾಭಕ್ತಿಯ| ಪೂರ್ತಿಗಿಲ್ಲಕಟಕಟನಾನೀ|ಯಾರ್ತಿಯಂಮೋಣಾವವಿಧದಿನಿವ
ರ್ತಿಸಲಿಗುರುವೇ||೩೦||ಈಪೊಳಲಿನೊಳಗಿರ್ಪಜನರತಿ|ಪಾಪಸಂಗತರಾಗಿಹ
ಕ್ಕುಸುಬಹು | ಚಾಪಲದೆದುರ್ವೃತ್ತನೆಯೊಳಾರ್ಜಿಸಿದದೋಷವದೂ || ಪಾ
ಪಿತಂಎನಗದುನಿಮಿತ್ತಂ|ಲೋಪವುಪ್ಪದುಸುಕೃತವದುವೊದ! ಲಾಪರಿ|
ಯೊಳಾಂಸುಮ್ಮನಿರೆಫಲವಿಲ್ಲವೆಂದೆನುತೇ ||೩೧|| ಚಾರರಿಂಕರಸೆಲ್ಕೆಪುರ
ಜನ|ವಾರವಾನಿಜಸನ್ನಿಧಾನವ|ಸೇರಿರಲುಭೂಪತಿಯುಭಕ್ತಿವಿಶೇಷವಂಶೈ
ವಾ || ಚಾರಮಾರ್ಗ್ಗವದೆಲ್ಲವನುಮತಿ | ಗೌರವದಿತಿಳುಹುತ್ತಲಾಜ್ಞೆಯ್ರ
ವಿಾರದಂತೆಪರಿಮಿತವಸ್ತುವಿಶೇಷಗಳೆನಿತ್ತೂ ||೩೨|| ಭಾವವಂರಂಜಿಸು
ತೆದೃಷ್ಟಗ | ಳಾವಚನಗಳೊಳರುಪಿತೋರಿಸಿ | ಶ್ರೀಮಹಿತಲಿಂಗಾನ್ವಿ
ತರನತಿಚತುರತೆಯೊಳೆಸಗೀ || ಪಾವನಾತ್ಮಾಪೂರ್ಣರಾಗಿ | ರ್ದ್ದಾವಗಂ
ಸಸ್ವಾಂತಗಳೊಳುಷು |ಭಾವಹಾನಂದಪ್ರಯುಕ್ತರುಮಾಗಲಖಿಳರನೂ
||೩೩|| ಸಂತತಮುದಬ್ಧಿಯೊಳಗಾಲಿಸ | ಲಿಂತುವಚಿಸಿದರರರೆಳ್ಪೆನದವು|
ಹಂತನೀತನವೋಘಸೌಭಾಗ್ಯಗಳವೆಮಗಿತ್ತಂ ||ಅಂತುಮಿಂತೆನಬರ್ಪು
ದೇಮತಿ | ಪಂತನೆಂತಹನೆಮಗೆಲೇಸುಸ | ಮಂತುಜೀವನ್ಮುಕ್ತಸು
ಸ್ಥಿತಿಪಾರಗತ್ವವದೂ ||೩೪|| ಒಡನೆಸಂಭವಿಸಿತ್ತುಪಾಪದ |ಗಡಣವೆಲ್ಲ
ವುದೂರವಾದುದು | ಕಡುಮುದದೊಳಿೀಮಹಿಯೊಡೆಯಗಿಡನಾಮಧೇ
ಯವನೂ || ಖಿಡದೆಹುಟ್ಟದಶಿಶುಗಳಿಗೆಹೆಸ | ರಿಡಲುಬೇಕಿಂತಪ್ಪರಾಜ
ಗೆ | ಪಡಿಯುದೆಲ್ಲಿಹುದಾವಲೋಕದೊಳಿಲ್ಲವಿದುಸತ್ಯಂ ||೩೫|| ಹಾಲಕು
ಡಿಯಲ್ಬೇಕೆನುತೆತಾಯ್ | ಬಾಲಕನಗಲ್ಲವನುಬೊಡಿಯುವ|ಲೀಲೆಯಿಂ
ದೆಮ್ಮುವನುಬಹುವಿಧದಿಂದೆಸಿಕ್ಷಿಸುತೆ || ಮೇಲೆನಿಸುವಾಶ್ಚರ್ಯಕರವು |
ಕಾಲಯುದೊಳಿರಿಸಿ[illegible] | ಪಾಲನೆಮುತ್ತೋರ್ರೋರ್ವ್ಯರುಂಪ್ರಾ

ಠ್ಥಿಸುತೆನರಪತಿಯಾ ||೩೬|| ಪದಸರೋಜಾತಂಗಳಿಗೆಯತಿ | ಮುದ ದಿನಮಿಸುತಲವರುಗಳುನಿಜ | ಸದನಗಳನೇರುತ್ತೆಭರ್ಗ್ಗಸಮರ್ಚನಾರತಿ ಯಿಂ || ಪದುಳದಿಂದಿರುತಿರ್ದ್ದರತಿಶಯ | ಪದನಿರೂಢಾನಂದದಿಂದೀ | ಸ ದಮಳಶ್ರೀಸುಪ್ರಸಾದಮಹಾತ್ಮ್ಯೆಯಿಂತಿಹುದೂ ||೩೭|| ಎನುತೆಮಾ ಚರಸಾರ್ಯ್ಯಮೊದಲಾ | ದನಘಭಕ್ತೋತ್ತಮರಿಗರುಪಿದ | ನನುಪಮಿ ತಸಕಲೇಶಮಾದರಸಾರ್ಯ್ಯನಂಚಿತದಿ||ಜನಿತಭಕ್ತಿಹಿತಾರ್ಥವಾಗಲು | ಸನು ಮತದಿಪೇಳುತ್ತೆಮೆಣ್ಚಿ | ದ್ಘನಪ್ರಸಾದಮಹಾತ್ಮ್ಯೆಯರುಪುವೆನೆಂಡು ಪೇಳ್ದವನೂ ||೩೮||

ಅಂತುಸಂಧಿ೧೨ಕ್ಕಂಪದ ೬೧೫ಕ್ಕಂಮಂಗಳಮಹಾ

## ಹದಿಮೂರನೆಯ ಸಂಧಿ

### ವೇದಪಿತ್ರಾಮಹನಕಥೆ.

ಸೂಚನೆ||ಭಯದಿವೇದಪಿತಾಮಹಂಸಂ!ಶಯದೊಳಿರೆಮಾಮುನನು ಗೊಡಗ | ವ್ವೆಯಪ್ರಸಾದಂಬಡೆಯಲೀರ್ವರುಮೊಕ್ಷವೈದಿದರೂ ||ಪದ|| ರಾಜಿತಸ್ವರ್ಣ್ಣಾಳ್ಯರತ್ನಸು | ರಾಜಿವಿರಚಿತರುಚಿರಸೌಧೋ | ತ್ತೇಜದಿಂ ರಂಜಿಸುವಗೋಪುರದಾವರಣದೀಪ್ತಿ || ಭ್ರಾಜಮಾನಸುಕಮಲಿನೀಶುಕ ರಾಜಹಂಸಾನ್ವಿತಕುಮುದದಿಂ | ಸೋಜಿಗದೆಕಾಸಾರಕಲಿತವಿಕಾಸಪು ಷ್ಕರದಾ ||೧|| ಸುಂದರದಿಶೋಭಿಸುತಲುಂಸುರ | ಮಂಡಗಮನೆಯ ರುಗಳವಿಭ್ರಮ | ದಿಂದಲುಂಸುಷುಮಾಬ್ಜಮುಖಿಯರಬ್ಯಂದದಿಂಸತ ತಾ || ನಂದಸಮುಚಿತವರ್ಣಿಜನಚಯ | ದಿಂದೆನಿರುಪಮಭವ್ಯಬಲಯು ತೆ | ಸ್ಯಂದನಾಳ್ಯಪದಾತಿಗಜವಿಸ್ತೀರ್ಣಮಾನದಲೀ||೨||ನಿರುಪಮಾನೋ ದ್ಯಾನವಾಟೀ | ಸುರುಚಿರದಿದೇವಾಲಯಂಗಳ | ಪರಿಕರದಿಸಂಭಾವಿಸ ಲುಪುಣ್ಯೈಕನಿಲಯವೆನೇ || ಪುರವಿಪುದುಸಿಹ್ಮಾದ್ರಿಯಲ್ಲಿಹ | ನುರಗ ಹಾರಪದಾಬ್ಜಭಕ್ತ್ಯ! ತ್ತರನುನಿರ್ಮ್ಮಲಜ್ಞಾನಿತ್ರೈಲೋಕ್ಯೈಕಪೂಜಿತ ನು ||೩|| ಅನಘನರಿಷಡ್ವರ್ಗಹರಣಂ|ಘನತರಸುನಿಷ್ಠಾನುಗುಣಬೋ|

ಧನುವೆನಿಸುವಸಹಾಯವೇಡಪಿತಾಮಹನುಮೆಂಬಾ || ಚಿನುಮಯನ
ಸದ್ಭಕ್ತವರ್ಯ್ಯಂ | ಮನಸಿಜಾಂತಕವಿಗ್ರಹಂಪಾ | ವನನಖಂಡಿತಶೈವ
ಮತದಿಪ್ರಚಾರಕನುಮಾಗಿ ||೪|| ನಿವಸನಾಗಿರಲವ ನಶಿಷ್ಯಂ | ಶಿವಸುಭ
ಕ್ತಿರಹಿತಸ್ವಹಿತಬಾಂ | ಧವವಿದೂರಂಸತ್ಯವಾಕ್ಯಧುರೀಣನುತ್ತಮನೂ
ಭುವಿಯೊಳಗೆವಾಮನನುಮೆಂಬುವ | ನವಿಕಲಿತಪುಣ್ಯಾತ್ಮನಾಗುತೆ |
ಸವಿನಯದಿಸಂತತವುಗುರುವರಭುಕ್ತಶೇಷವನೂ ||೫|| ಮುದದೆಕೈಕೊ
ಳುತೊಂದುಸಂಶಯ | ವದುನೆಲಸಲಾಕತದೆಹೃದಯದೊ | ಳೊದಗೆಶ
ದ್ಧಾಭರದೆಬೆಸಗೊಂಡನುಸುದೇಶಿಕನಾ || ಪದಕೆರಗಿಸತ್ಪ್ರಭುವೆಪೇಳಸಿ
ಹದನದಿಂಮುಕ್ತಿಯುಜನಿಪುದಾ | ವುದುಮತಂಗಳೊಳಧಿಕವಿಂತೀಕ್ರಮವ
ತಿಳುಹೆನ್ನ||೬||ಮನದಸಂಶಯಮಂಹರಿಸಿರೆಂ|ದೆನಲುಸಿ ಷ್ಯನವಿನಯವಾತ
ನುಕಂ| ದನಘನಾತ್ಮಾನೋದದಿಂಸುಕೃತವದುನಿನ್ನೊಳುಸಂ || ಜನಿ
ತೈಸಂಶಯುವಪರಿಹರಿ | ಪೆನೆನುತಂಗುರುಲಿಂಗಜಂಗಮ | ದನುಪಮಿ
ಮಹಿಮಪ್ರಸಾದಸುಸೇವನೆಯಫಲವು ||೭|| ಮೆರೆಯೆಕರುಣಪೊಳುಸು
ರಿದನುವಿ | ಸ್ತರದಿಬ್ರಹ್ಮಾದ್ಯಮರಭರ್ತನು | ಸ್ಥಿರಜಗತ್ಕಾರಣನುಶ
ಬರವೈರಿಸಂಹರನು || ವರತಪೋಧನಪ್ರೀತನಂಚಿತ | ಪರಮಭಕ್ತಂ
ತ್ರಾತನನುಪಮ | ನುರುಬಲಾಂಚಿತತ್ರಿಪುರಜೀತನುಮುನ್ನತೋನ್ನತ
ನು ||೮|| ಫಾಲಸಂಗತಕೀಲಿದುರ್ಭವ | ಜಾಲಭಂಜನಶೀಲಿಭಾಸುರ|ಖೇ
ಲನಾನಂದೈಕವಿಭವವಿಲಾಸಗುಣಶಾಲಿ || ನೀಲಕೈರವಬಂಧುಧಾರಿಕ |
ಪಾಲಿಕಾಲಮದಾಪಹಾರಿಪಿ | ಶಾಲಪರ್ವತರಾಟ್ತನೂಜಾಮಾನಸವಿಹಾರಿ
||೯|| ಅವ್ಯಯನುಮಚ್ಯುತನಖಿಲಸಂ | ಸೇವ್ಯನುತ್ತಮಯೋಗಿಜನ
ಸಂ|ಭಾವ್ಯನಭವನೆನಿಸುವನಂಬಿಟ್ಟನ್ಯದೈವಗಳೂ || ಭಾವ್ಯರೆಂತಪರ್ರೈಭ
ಜಿಸಲುಂ | ನವ್ಯಕಾಂತಿಪ್ರಾಯನಗಣಿತ | ದಿವ್ಯಲಾವಣ್ಯೈಕವಿಗ್ರಹನಾ
ದಿವಿಭುವೆನಿಪಂ ||೧೦|| ಭೂವಿದಿತಮೆನೆಲೋಕಪೂಜಿತಭಾವಘಘೋ |
ರಾಟವೀಘನ | ದಾವವೀಶಾಗಮಸುಪ್ರತಿಪಾದಿತವದಲ್ಲದೆಯುಂ || ಆವ
ಲಿಪ್ತಪ್ರಪಾಶಹರಣವು|ಪಾವನತರವೆನಿಸುತೆಮೆರೆವೀ | ಶೈವಮತಕೆಣೆಯಾ
ದಮತವಿನ್ನುಂಟೆಚರ್ಚಿಸಲಾ| |೧೧|| ಇಂತಹಡುಶೈವವುಇದರೊಳ| ತ್ಯಂ

ತವಮಧಿಕಂವೀರಶೈವವ । ದಂತಿಳಿದುಕ್ಕೈಕೊಂಡವಂಮಿಗೆಕುಸುಮಸಾ
ಯಕನ ॥ ಹಂತನೆನಿಪಾಶಿವನಸದೃಶವ । ನಂತವಿಧದಿಂದಂವಿಚಾರಿಸ ।
ಲಂತಕಾಂತಕನೇಸುಭಕ್ತನುಭಕ್ತನೇನಿಜದಿಂ ॥೧೨॥ ಈಶನೆನಿಸುವಕಾ
ರಣಂನಭ । ಕೇಶಗುಂಭಕ್ತಂಗೆಭೇದವು । ಲೇಶಮಿಲ್ಲೀಕತದೆವಸುಧಾತಲ
ದೊಳಿರುತಿರ್ಪ ॥ ನಾಶವಿರಹಿತರೆನಿಸುವರನಿ। ರ್ದೇಶಚರಿತಂಗಳನುಬಣ್ಣಿ
ಸು । ವಾಶಕುತಿಯಿತರರಿಗಡೆಲ್ಲಿಯದವರಮಹಿಮೆಯನೂ ॥೧೩॥ ಪಾರ್ವ
ತೀಧವನರಿವನಾಗಿಯ । ಪೂರ್ವದಿಂತದಧೀನನಪ್ಪನು । ಪರ್ವಸಂಸೇವಿ
ತನುಮಾಣದವರೊಳಗಿರುತಿಹನೂ ॥ ಸಾರ್ವಕಾಲದಿಜಂಗಮಾರ್ಚ್ಚನ।ಪೂ
ರ್ವಕವ್ರತಮುತ್ತಮಂಶ್ರೀ । ಶರ್ವನರ್ಚನೆಮುನ್ನಮಾಡಲ್ಕೂಡದದರಿಂದೆ
॥೧೪॥ಗುರುವರೇಣ್ಯಂಗಿಂದಧಿಕರಾ।ಚರರೆನುತ್ತಂಸಕಲಶೃತಿಗಳೊ। ಳೊ
ರೆವುದದರವಿಧಿಯನುವಿಸ್ತರಿಸುವೆನುನೀಂಕೇಳೂ॥ಪರಮಭಕ್ತನೆಗುರುವು
ಗೌರೀ । ವರನೆಶಿಷ್ಯನುಮಾಡುದಕೆಪುರ । ಹರಗೆಲಿಂಗವಧರಿಸಿ ದಾಗಣ
ಪಾಲನೇಸಾಕ್ಷಿ ॥೧೫॥ ಈಶಭಕ್ತನೆತಂದೆಶ್ರೀಪತಿ । ಯಾಶುಗನೆತನುಜಾ
ತನೆನಲುಪ್ರ । ಕಾಶಿತಾತ್ಮಕನಪ್ಪಭಲ್ಲಾಳಾಧಿಪನೆಸಾಕ್ಷಿ ॥ ಕ್ಲೇಶವಿರಹಿ
ತಭಕ್ತನೇಧೊರೆ । ಯಿಾಶನೇಯಾಳೆಂಬುದಕೆದಿತಿ । ಜೇಶನೆಂದೆನಿಸಿಪ್ಪ
ಬಾಣಾಮರರಿಪುವೆಸಾಕ್ಷಿ ॥೧೬॥ ಭಕ್ತನೇಜಯಶಾಲಿಗಿರಿಜಾ । ಯುಕ್ತ
ವಾಮೊಂಗಾರ್ಧನೇನಿ । ಶ್ಶಕ್ತಿಯಿಂಸೋತಿರುವುದಕೆಧರ್ಮಾನುಜನೆಸಾಕ್ಷಿ ॥
ವ್ಯಕ್ತದಿಂಜೀಡಿದಸುವಸ್ತುವ ।ಭಕ್ತಿಯಿಂನೀಡುವರುಧರೆಯೊಳು ।ಭಕ್ತ
ರೀಯದಿರಲ್ಕೆಗತಿಯಿಲ್ಲವುಗಿರೀಶಂಗೆ ॥೧೭॥
ಶರಣವರ್ಯರಘನಕಟಾಕ್ಷವು । ಸುರವಿಟಪಿಚಿಂತಾಮಣಿಗಳುಂ। ಪರುಷಕಾ
ಮದುಘೆಂಗಳುಂಜನಿಸಿರುವಮಂದಿರವು ॥ಹರಗಣಂಗಳಪಾದಧೂಳಿಯು ।
ಶರಿರಮಂಸೋಂಕಿಡನರನಘವ । ಪರಿಹರಿಸುವುದುಧೂರ್ಜ್ಜಟಿಯಭಕ್ತೋ
ತ್ತಮರುತುಳಿದಾ ॥೧೮॥ ಧರೆಯಮೇಲುರುಳ್ದವನುದುಷ್ಕೃತ ।ಪರಿಕಡವ
ನೀಡಾಡನೇಕಂ । ಧರಗರಳಭೃಚ್ಚರತನುಭ್ಯಾಯಿಯನುಸೋಂಕಿರು
ವಾ ॥ ನರನುಕಲ್ಮಷಗಳನುನೆರೆಸಂ । ಹರಿಸದಿಹನೇಹರನಶರಣರ । ವರ
ಮುಮಂಗಳಸ್ನಾನಜಲಕುಂಡತಲಪಂಕವನೂ ॥೧೯॥ ಪೂಸಿದನರಂನಿರ್ಮ

ಳಂಪರ | ದೇಶಿಜಂಗಮನಿಚಯಕೆಣೆಯಹ | ರೇಶಕುನಿಸುರನಿಕರಕಿ
ನ್ನರಯಕ್ಷಸದ್ವಿದ್ಯಾ || ಧೀಶವನ್ನಗಸಾಧ್ಯರುಂಸುವಿ | ಲಾಸಗಾಯಕ
ರೆನಿಪಗಾಂಧ | ರ್ವೇಶರುಂಮುನಿಸಿದ್ಧರುಂರವಿಶಶಿಮುಖಗ್ರಹಗಳ್ ||೨೦
ಕುವಲಯದೊಳಗೆಶ್ವಪಚನಾದೊಡು | ಮವನುಸದ್ಗುರುಹಸ್ತದಿಂಶಾಂ
ಭವಸುಲಿಂಗವಧರಿಸಿಕೊಂಡಡೆಯುತ್ತಮೋತ್ತಮನು || ಶಿವನಶರಣರಪಾ
ವನಪ್ರಸಾ | ದವನುಪಡೆಯುದೆಮುಕ್ತಿಯೈದುವ | ವಿವರವಿನ್ನೆಲ್ಲಿಯದು||
ಸುಸ್ಥಿತಿಸಾಧ್ಯವೆಂತಹುದು ||೨೧|| ಆವವಿಧದಿಂದಾದೊಡಂಮೋ | ಕ್ಷಾವ
ಹಶಿವಶರಣಸುಶೇಷವ|ಪಾವನಾತ್ಮಕನಾಗಿಭಕ್ತಿಗುಣಾತಿಶಯದಿಂದೇ||ಸೇ
ವಿಸದಮನುಜಂಗೆಶಾಶ್ವಿತ | ಭಾವವಹನಿರ್ವಾಣಪದವದು | ಭೂವಲಯ
ದೊಳಗಿಲ್ಲಸಜ್ಜನಕೋವಿದನೆಕೇಳು ||೨೨|| ಅದುನಿಮಿತ್ತದಿಸತ್ಯಶರಣರ
ಉದವಸಿತಭಾಂಡಪ್ರಸಾದವ | ಮುದದಿಸಾಸುವೆಯಷ್ಟುಸ್ವೀಕರಿಸಿದವ
ನೇಮುಕ್ತಂ || ಇದುವಿಹಿತವೆನೆದೇಶಿಕೇಂದ್ರಂ | ಸದಯದಿಂತಿಳುಹಿಸ
ಲೊಡನೆತ | ತ್ಪದಕೆಸಾಷ್ಟಾಂಗಪ್ರಣಾಮವನೆಸಗಿವಾಮನನೂ ||೨೩||
ಶ್ರೀಪರಮದೇಶಿಕನಸುಕೃಪಾ | ಪ್ರಾಪಿತನುಮಾದೆನೆನುತಂಮುಃ ದೂ
ಪದಿಂಕೆಲವಾಸರಗಳಂಕಳೆದಿರುತ್ತಿರಲೂ || ಆಪುರಿಯೊಳಿರುತಿರ್ಪಗೊಡಗ
ಪ್ವಾಪರಮಸದ್ಭಕ್ತಿಯಂರು |ದ್ರಾಪರಾಂಚಿತಮೂರ್ತಿಯೆಂದೆನುತಿರಲುಶ
ರಣಗಣಂ ||೨೪|| ಮೇರುಸಮಪಾಪಾವನೀಧರ | ಸಾರಪಾಕನಿಷೂದ
ನಾಂಚಿತ | ಚಾರುಹಸ್ತದಿಮೆರೆವವಜ್ರವುಜ್ಞಾನವ್ಯಾಪಿತದಾ || ಪಾರಸ
ದ್ವಾಕ್ಸಂಚಯಾಮೃತ|ಪೂರವೆನಿಪಾಕೆಯಪ್ರಸಾದಂ | ಸೇರುವುದದೆಂ
ತೆಂಬಘನದವಿಚಾರದಿಂದಿರುತಂ||೨೫||ಅನಘವೇದಪಿತಾಮಹಂಪಾ | ವನ
ಸುಮಾಂಭಯುಮಾನಸದಿಸಂ |ಜನಿಸಿರಲ್ಕಾಮಹಿಮನಾಲೋಚಿಸಿದನಾನೀ
ಗ || ಘನತರದೆಸದ್ವಿಪ್ರಜನ್ಮದಿ | ಜನಿಸಿಜನವಂದನೆಯಪಡೆದಿಹೆ | ನ
ನುಪಮೆಯಸುಸ್ಥಾನಕಂಗಮಿಸಿದೊಡೆಪಾಮರರೂ ||೨೬|| ನಿಂದಿಸುವ
ರೆಂದೆಂಬಭೀತಿಯು | ಪೊಂದಿಹುದುಸಾಧ್ವಿಯಪ್ರಸಾದಾ | ನಂದಸೇ
ವನೆಯದುವೆಘಟಿಸಲ್ಕಿಜಗದೊಳೆನಗೇ || ಇಂದುಧರಶಾಶ್ವತಮಹಾಪದ
ವೆಂದುವುಂಲಭಿಸುವುದದಕೆಮ! ತ್ತೊಂದುಯುಕ್ತಿಯಮಾಡಬೇಕೆಂದೂ

ಹಿಸಿದನಾಗ ||೨೭|| ಈತನುವಮರೆಮಾಡಿಪೆನತಹ | ನೂತನಶರೀರಸ್ಥಿ ತಿಯನ ! ತ್ವಾತುರದಿಕೈಕೊಂಬೆನೆನುತಂಮನದೆನಿಶ್ಚ ಯಿಸೀ ||ಆತನನಿ ಶಂಶಿಷ್ಯನೊಡನತಿ | ಪ್ರೀತಿಯಿಂದೊಪ್ಪಿರ್ದ್ದಸಲೆಪ್ರ |ಖ್ಯಾತಭೂತಲಚಂ ದ್ರಸೇಖರನೆನಲುಮತಿಶಯದೀ ||೨೮|| ಗಂಗೆಯೋಳ್ಮಿಂಯುತ್ತೆನಿಜಮಠ ಕಂಗವಿಸುತಿರೆಮಧ್ಯಮಾರ್ಗ್ಗದ|ಪ್ರಾಂಗಣದೆಶುನಿಯೊಂದುತನ್ನಯಪ್ರಾ ಣವಳಿದಿರಲೂ || ಕಂಗೊಳಿಸುತಿರ್ಪದರದೇಹದಿ | ಹಿಂಗದೆಪುಗುತ್ತಂಭ ರದೊಳಾ|ಯಂಗಜಾಂತಕಶರಣೆಯುಹಗೊಡಗಾಯ್ಸ್ರಸೊದವನೂ ||೨೯|| ಕೊಂಬೆನೆನುತಂತೋಷಪೂರಿತ | ದಿಂಬುಧವರೇಣ್ಯಂಸ್ವಕೀಯಹೃ| ದಂಬುಜದೆನೆಲೆಗೊಳಿಸಿದನುತಾನೀಯುಪಾಯವನೂ || ಸಾಂಬಮೂರ್ತಿ ಸುಭಕ್ತಿಸಾರಸ | ಬಂಬರಂಸಾವಿಷ್ಪ್ರದೊಳುನೆಳ | ಲಿಂಬಿನಿಂದಿಹ ಮರದಡೆಗೆನಿಜಛಾತ್ರನೊಡಗೂಡೀ ||೩೦|| ಬಂದುನಾವುಮುಹೂರ್ತಮಾ ತ್ರಾ | ನಂದದಿಂದಿರಬೇಕುಪದಗಲಂ|ಪೊಂದಿದಾತಪವನ್ನಿವೋಚನವಪ್ಪ ಪರಿಯಂತಂ || ನಿಂದುವಿಶ್ರಾಂತಿಯನು ಪಡೆಯುವೆ | ವೆಂದುನಾತನು ತಾನುಶೀತಲ | ಮಂದಪವಮಾನದೊಳುತೋಷಿತಚಿತ್ತರಾಗುತ್ತೇ||೩೧|| ಉಲ್ಲಸಿತದಿಂಕುಳಿತುಮೌನಸ|ದಲ್ಲಿನೆಲಸಿದಕೃತಕಮಾರ್ಗ್ಗವ | ನೆಲ್ಲವುಂತಿಳಿ ಯದೊಲುವಾಶಿಷ್ಯನನುನೆರೆಕರೆದೂ || ಮೆಲ್ಲನೇಪೇಳಿದನುನಿದ್ರ್ರಪೆ | ನಿ ಲ್ಲಿಜಾಗ್ರತೆಯಿಂದೆಕುಳಿತಿ | ನ್ನೆಲ್ಲಿಗುಂಪ್ರೋಗದಿರೆನುತ್ತಂಶಿಷ್ಯನೊಡು ವೆದೂ ||೩೨|| ಉತ್ತಮಾಂಗಕ್ಕಿಂಬುವಾಗಿರ | ಲತ್ತಕಾಪಟನಿದ್ರೆಯಂ ಮೊ | ಡುತ್ತೆದೇಶಿಕಸಾರ್ವಭೌಮನಿಸುತ್ತೆಯನಿತರೊಳು ||ಮತ್ತೆಪರಕಾ ಯಪ್ರವೇಶಾ|ಯತ್ತಸನ್ಮಹಿಮಾಢ್ಯನಾಗಿಯಿ | ರುತ್ತಿರುವಕಾರಣದೆನೈಜ ಶರೀರಮಂಬಿಟ್ಟೂ ||೩೩|| ತನಗೆಸಾವಿಷ್ಪ್ರಸ್ಥವಾಗಿಹ | ಶುನಕದೇ ಹಂಬೊಕ್ಕುಬೇಗನೆ | ಜನುಮದನುವರ್ತನದಿನಾಲಿಗೆಯಿನಿತಹೊರದೆಗ ಡುಂ || ಗುನುಗುನನೆಯೋಡುತ್ತಬೀಳುತ | ಲನುನಯದೊಳೋದರು ತ್ತದಿಗುಲ್ಗೊಂ | ಡನಿತರೊಳೆಯೂಕಳಿಸಿನೆಲ | ಮಂಮೂಸುತಂಗವನೂ ||೩೪|| ಮುರಿಯುತವನೀತಲದೆಪೊರಳುತೆ| ಭರದೊಳೇಳುತೆಬಾಯಲೋ ಳೆಯ | ಸುರಿಸುತಂಬಾಲವನಲುಗಿಸುತೆಸಿರವನೆಲಕೊಡ್ಡಿ || ಕರಕುಕಿನಿಗ

ಳಕೊಡುಪುತಂಮೇ | ಣರಿದೆನಲುಮೂಬುಗುತೆನೋರೆಯು | ನುಡುವಣಿ
ಸಿನಡೆವುತ್ತಮೇಲ್ಗಡೆಮುರಿಪುನೋಡುತ್ತೇ ||೩೫|| ಘನತರಮೊಳಾವ
ಟ್ಟಣಪತಟ | ವನುಸರಿಸಿತುಂಬುರುವಚಾಂಪಾ | ಲನಿಲಯಾವಳಿವುಧ್ಯ
ಗೇಹದಿರಾಜಿಸುತಲಿರ್ಪ || ಮನಸಿಜಹರಸುಶರಣೆಗೊಡನ | ವ್ವನವಿನ
ಯಸದ್ಭಕ್ತಿಸಹಿತಂ | ಶುನಿಯನುಸರಿಸಿಬರುತಲಾಸೀಮಂತಿನೀಮಣಿ
ಯಾ ||೩೬|| ಮೆಲ್ಲಡಿಗೆನವಿುಸುತ್ತೆಸದ್ಭ | ಕ್ತ್ಯೆಲ್ಲಸಮೊಳೌತ್ಸುಕ್ಯ
ಮುಂತನು | ವೆಲ್ಲತುಂಬಿರಲವಳಿಮುಂಭಾಗದೊಳುನಿಂದಿರಲೂ || ಸಲ್ಲಲಿ
ತಸರ್ವಜ್ಞಶಕ್ತಿಯು | ಪಲ್ಲವಿಸಿದಿವ್ಯೇಕ್ಷಣಾಸಂ | ಗೋಲ್ಲಲಿತೆಯೆಲೆ
ಜಾತಿಭ್ರಾಂತಿಯುನಳಿಯಡಲೆನೀನೂ || ೩೭ || ಲೇಸೆನಿಪನಿಜಜಂಗಮುದ
ಶವ | ವೋಸವೆನಲುಪರಿತ್ಯಜಿಸುತಂ | ಹೇಸದೋಲ್ಪುನಿಯಾಪೆಯೊಳ
ತ್ಯೆಭಾವಿಸಲುಜೀವ || ರಾಸಿಗೆಲ್ಲಿರುತಿಹುದುಕುಲವೊಂ | ದ್ಯೆಸಲೇಸನುಜ
ದಿವಿಚಾರಿಸೆ | ಭಾಸಿಸುವಸದ್ಬುದ್ಧಿಯಿಲ್ಲಾಶ್ಚರ್ಯಕರವ್ಯೆಸೆ ||೩೮|| ಪರ
ಮಭಕ್ತರುನಗದಿರುವರೇ | ಅರಿಯಬಾರದೆಶರಣಮಾರ್ಗವ | ಪರಿಪರಿಯ
ಯೋನಿಯೊಳುಪುಟ್ಟುತೆಪಲವುನೊಲೆಕಾಲಂ || ಸರಿರವಂಬೆಳಸಲ್ಕೆಕುಡಿ
ವುತೆ | ತಿರುಗುತೇಸೋಕುಲಗಳೊಳುನೀ | ನಿರದೆನಿಂದಿರುತಿರ್ಪೆಈಗ
ಳ್ಸದ್ವಿಜಶ್ರೇಷ್ಠ ||೩೯|| ನೆಂಡುದುರ್ಮದದಿಂದೆಹಮ್ಮಂ | ದ್ಪೊಂದಿರುವು
ದಿಡುವಿಹಿತವೇಶಿವ | ನೆಂದುಪ್ರೊಜಿಪಲಿಂಗಮಂಮೇಣ್ಶಿಲೆಯೆನಲ್ಬಪು
ದೇ || ಮಂದಮತಿಯೇಕೇಳುಘನದಿ | ವ್ಯೇಂದುಧರಲಿಂಗಾಂಗಿಯಾಗು
ತೆ | ಮುಂದನಂದದಿಜಾತಿಭೇದವಮಾಡುವುದದೆಂತೂ ||೪೦|| ಕಾಶಿಯೊ
ಳಗಿಹಗಂಗೆಯಾಗಿರಿ | ಜೇಶನಂಪೊಂದಿರ್ಪಕತದಿಂ | ದಾಶನಿುತದುರ್ದೋ
ಷಿತಾನೆನಿಸಿರುವತೆರದಿಂದೇ || ಈಶರೀರದೊಳಗಿರುವಸ್ಥಿಮು | ಖಾಶರಿತ
ಧಾತುಗಳಸೂತಕ | ಪಾಶಪರಿಹರವಾಗಿಶಿವಲಿಂಗಸ್ವರೂಪಹನು ||೪೧||
ಎನುತೆನುಡಿದೆಲೆನಾಯಿಬಾರೆಂ | ದನುನಯದಿಕರೆಪೊಂಡುಹೆಂಚಿನೊ |
ಳಿನಿತುಬೋನವಹಾಯ್ಕಲೆನ್ನಸುಭಾಗ್ಯವಿದೆಯೆಂದೂ || ಮನದೊಳಗೆ
ನಿಶ್ಚಯಿಸಿಕೊಂಡತಿ | [illegible] | ಪ್ರನಜಯು
ಗಳಕ್ಕೆರಗಿಶುನಿಯಲ್ಲಿಂದೆತೆರಳುತ್ತಂ || ೪೨ || ಪೋಗುತೊಂಪೆಡೆಯಲ್ಲಿ

ತನುವಂ | ಬೇಗದಿಂದೀಡಾಡಿಯುಚ್ಚ | ತ್ತಾಗಲೇಳುತೆಕಣ್ಗಳಂಕರದಿಂ
ದೊಡೆಸುತ್ತಂ || ಬಾಗಿಮೈಮುರಿಯುತ್ತೆಛಾತ್ರನು | ಮಾಗಿರುವನೊಡ
ಗೊಂಡುಸದನಕೆ | ಪೋಗಬೇಕೆಂದೆನ್ನಲಾಮಾಮನನುಗುರುವರನಾ||೪೩||
ಮಾಯೆಯುಂತಿಳಿಯುತ್ತೆಭಕ್ತಿವಿ | ಧೇಯನಾಗುಸುರಿದನುಶ್ರೀಗುರು |
ರಾಯಎನ್ನಂಬಿಟ್ಟುಕುಹಸಾವರ್ತನದಿತಾವು || ತಾಯಿರನ್ನವೆನಿಪ್ಪಮಾ
ಗೊಡ | ಗಾಯಿಮನೆಯೊಳ್ಸುಪ್ರಸಾದವ | ನ್ಯಾಯವೇಕೈಕೊಳಲುದೇ
ಶಿಕತಾವಕೀಯಸುಭಾ ||೪೪|| ಜನಗತಶ್ರೀಸುಪ್ರಸಾದವ | ನನಿಶಮುಂ
ಸುವಿಧಾನಪೂರ್ವಕ | ಮೆನಲುಸದ್ಭಕ್ತಿಯೊಳುಗ್ರಹಿಸುವುದಾತ್ಮವ್ರತಮೈ
ಸೆ || ಅನಘಕರುಣಾಶರಧಿಯೇಈ | ದಿನದೊಳಾನಿನ್ನೆಂತುಕೈಕೊಂ |
ಬೆನುಕೊಳದೆಯಿರಲಾರೆನಿನ್ನುಭವತ್ಪ್ರಸಾದವನೂ ||೪೫|| ಈಸಮಯ
ದೊಳಗಾದರದಿಕರು | ಣಾಸಮುದ್ರನೆಯುಪ್ಪಣೆಯಕುಡು | ದೇಶಿಕೋ
ತ್ತಮಎನಗೆಬೇಗನೆನಾಂಶರಣೆಯಿರುವಾ || ವಾಸಕಂಪೋಗಿಯೆಬರುವೆ
ನೆಂ | ಬಾಸಮಯದೊಳ್ಗುರುವರಂಸುವಿ | ಲಾಸದಿಂದಾಮಾಮನಂಗಿಂ
ತೆಂದನೀಜನರೂ ||೪೬|| ಅರಿಯುವೋಲ್ನೀಂಪೋಗಬಾರದು | ಪರ
ಮಸಾಧ್ವಿಯುಮೆನ್ನನುರೆಕಂ | ಡರಿದಪರಿಯಂಗೈಯದಾರುಂ ಅರಿಯ
ದೋಲ್ಪೋಗೀ || ಭರದಿಕೊಂಡುಪ್ರಸಾದಮಂಮಿಗೆ | ಬರುವುದೆನ
ಲಾಗುರುವರನಶ್ರೀ | ಚರಣಪದ್ಮಂಗಳಿಗೆಸಾಷ್ಟಾಂಗಪ್ರಣಾಮವನೂ
||೪೭|| ಆಚರಿಸಿಶಿವರೂಪಜಂಗಮ | ದಾಚರಣೆಕುಲವೆಣಿಸಬಾರದು |
ಮಾಚದುರರಾದವರೆನುತ್ತಂಬೋಧೆಯಂಮಾಡಿ || ನೀಚಜನವದುನಿಂ
ದಿಪುದೆನುತೆ | ಯೋಚಿಸುತೆಭೀತಿಸಲುಜನ್ಮವಿ | ಮೋಚಕರೆನಿಪಶಿವಶ
ಣರವರಪ್ರಸಾದಫಲ ||೪೮|| ಸಾರಸೌಖ್ಯವುಲಭ್ಯವಹುದೆಂ | ತಾರಯಿ
ದುನೋಡಲ್ಕೆಬೇರೆವಿ | ಚಾರವೇಕೆನಿಜಾಕೃತಿಯೊಳಾಶಿವಶರಣೆಯಿರ್ಪಾ||
ಗಾರಕಂಗಮಿಸುವೆನೆನುತೆಸ | ದ್ವೀರಭಾವದಿಗುರುವರನಪದ | ವಾರಿಜಂ
ಗಳನಾಗಬಲಗೊಂಡವರಸಮ್ಮತದೀ ||೪೯|| ಭೂವಿದಿತವಪ್ಪಂದದಿಂಸ
ದ್ಭಾವದಿಂಪೋಗಲುಗುರುವರಂ | ಸೇವಕನಗೌರವಸುಬುದ್ಧಿಯದೆನ್ನೊ
ಳಿಲ್ಲವಲಾ || ಕೇವಲಶ್ರುತಿಸ್ಮೃತಿಗಳುಮಹಾ | ದೇವವಕ್ತ್ರೋತ್ಥಿತರಥ

ಸ್ಯವ | ಸಾವಧಾನದಿತಿಳಿದೆನಿತಿಹಾಸಗಳನೇಕಳಂ ||೫೦|| ಹಾಗುಸದ್ವಿ
ದ್ಯೆಗಳನೇಬಹು | ವಾಗಿಸಂಗ್ರಹಿಸಿರ್ಪೆಭಕ್ತ್ಯಸು | ಯೋಗಮಾರ್ಗ್ಗವಿಧೇ
ಯರನುಕಂಡರಿಯದುದರಿಂದೇ || ತಾಗಿರುವಮುಂದಮತಿಯಿಂಜನ ||
ವೀಗದೂಷ್ಯನಮಾಡುತಿಹುದೆಂ | ಬೀಗುಣದಿಸಂಚರಿಸಿದೆನುನ್ಮಾಂಮುಂ
ದುಗುಣದಲೇ ||೫೧|| ಎನುತೆವಶ್ಚಾತ್ತಾಪಯುತಹೃ | ದ್ವನಜನಾಗಿಪು
ಥಕ್ಕೆಪೋದನು ! ವಿನಯನಿಧಿಯಾಶಿಷ್ಯನಾಗಳ್ಪ್ರಾಕ್ತನಸುಕೃತದಾ ||
ಘನಮಹಿಮೆಯಿಂಪೋಗಿಗೊಡಗ |ವ್ವನಸುರುಚಿರಭವನನವಕಾಣುತ | ಲ
ನಘನೊಳಪೊಗುತಂಮಹಾದೇವಿಯರವದಕೆರಗೀ ||೨|| ಸನ್ನಿಧಿಯೊಳಿ
ರುತಿರ್ದ್ದಮೆಲಿತಾ | ಯ್ನಿನ್ನದಿವ್ಯಮಹಾಪ್ರಸಾದವ | ನೆನ್ನಸದ್ಗುರುದೇ
ವನಾರೋಗಣೆಯಮಾಡಿರ್ಪಾ || ಉನ್ನತದಚಷಕವನುಕೊಟ್ಟುಕ್ರ |
ಪೋನ್ನತದೆನಿಜಶೇಷವೀಯೆನೆ | ಧನ್ಯಳೆನಿಸಿದಶಿವಶರಣೆತನ್ನಾತ್ಮದೊಳ್ಳ
ಭಲರೇ ||೫೩|| ಎಂತುತಿಳಿಯಲ್ಬಹುದಿವನಹೃದ | ಯಾಂತರಾಳದ
ನಿಷ್ಠೆಯವನುಮ | ಹಂತನೀತನಡೆಂತುದಾಸೋಹವರನೋಧೈರ್ಯ ||
ವಂತನೋಗುರುಭಕ್ತಿನಿಷ್ಠಾ | ಸ್ವಾಂತನೆಂತಹಧನ್ಯನಸದೃಶ | ಶಾಂತ
ನೆಂದೆಣಿಸುತ್ತಲಾಶಿವಶರಣೆಯಾತನನೂ ||೫೪|| ಆದರದೆಬೇಡಿದವೊಲುಘನ
ಪ್ರ | ಸಾದವಂಕರುಣಿಸಲುಚಿದಮೃತ | ವಾದುದೆಂದಾವಾಮುನಂಭುಂಜಿ
ಸುತೆಸಂಭ್ರಮದೀ || ಮೋದದಿಂದಾಕೆಯಚರಣಕಭಿ | ವಾದನವನೆಸ
ಗಿದಕ್ಷಣವೆಕರು | ಣೋದಯದಿಸುರಮುನಿಯುಕ್ಷರುಸುರನರೋರಗರೂ
||೫೫|| ತನ್ನನೋಲಗಿಸುತ್ತಿರಲುಮಹಿ ! ಮೋನ್ನತಂಪ್ರತ್ಯಕ್ಷನಾದಂ |
ಚಿನ್ನಿಧಿಯುವೃಷಭೇಂದ್ರವಾಹನನಗಸುತಾಸಹಿತಂ || ಪನ್ನಗಾಭರಣಂ
ಗಜಾಜಿನ | ವಿನ್ನುಮೆರೆಯಲುಪಂಚವದನಂ | ಸನ್ನುತಂನಿಗಮಾಗ
ಮಸ್ತುತನಭವನನುಪಮನೂ ||೫೬|| ಕಡಲೊಳಗೆಪುಟ್ಟಿದವಿಷಂಗಳ |
ದೆಡೆಯಶೋಭಿಸೆಮುನಿಗಳಂನೆಲೆ | ಗೆಡಿವಕಾಮನಸುಟ್ಟಬೂದಿಯಧರಿ
ಸಿಮೈಯೊಳಗೇ || ನಡುಹಣೆಯಚೊಟ್ಟೆನಿಸಲಗ್ನಿಯು | ಮಿಡಿತಿಸುಳಿ
ಬಾಂಬೊಚ್ಚದಲೆಯುಂ | ಜಡೆಮುಡಿಯಸೊಬಗಿಂದೆದಶಕರಗಳುವಿರಾಜಿ
ಸ್ಸಲೂ ||೫೭|| ಸಿತಕರಾಂಚಿತಮಸ್ತಕಂಶ್ರೀ | ವತಿನಯನಕಮಲಮು

ತಚರಣಂ | ಶೃತಿಪಯಂಕರುಣಾಸಮುದ್ರಂಶೋಭಿಸುತ್ತಿರಲೂ || ಸಿತಿ
ಗಳಗೆಸರ್ವೇಶ್ವರಗೆವಿ | ಕೃತಸುಭಕ್ತಿಯೊಳೆರಗಿವಾಮನ | ನತಿಮುದನ್ವಿ
ತನಾಗಿನಿಂದಘನತರನಿಜಹೃದಯ ||೫೮||ಸರಸಿಜವುವಿಕಸಿಸೆನುತಿಸಿದನು|
ಭರದಿಶರನಿಧಿಶಯನಶರಖರ | ಕರಧವಳಕರನಯನಗಿರಿಶಕರಟವಿತಿಜಹ
ರಣ || ಗರಗಳಸಕಲಯತಿತತಿವಿನುತ | ಕರಕಮಲಕಲಿತಸುರುಚಿರಸು
ರ | ಗಿರಿಘನದಸಖಕ್ಷಿತಿರಥರಜಿತನಗಶರಣಶರಣಾ ||೫೯|| ಎನುತೆಸನ್ನು
ತಿಗೈಯುತಿಹವಾ|ಮನನೆನಿಪಭಕ್ತನನುಕರುಣಾ | ವನನಿಧಿಯುಕಂಡೆಲೆ
ಕುಮಾರನೆನಿನ್ನ ಸುಸ್ಥಿತಿಯಂ || ಅನಘತರಸದ್ಭಕ್ತಿಭಾವಸು | ವಿನಯ
ವನುಕಂಡದ್ಭುತವನಾ|ಳ್ದೆನುಶರಣನಮ್ಮಯನಿಕೇತನವೆನಿಪಕೈಲಾಸ||೬೦
ಮೇದಿನೀಧರದೊಳಿರುಬಾರೆಂ | ದಾದರಿಸಿನುಡಿದಾಕ್ಷಣದೊಳೆಸು |ಮೋ
ದದಿಂದಾವಾಮನಂಬಿನ್ನವಿಸಿದಂಭಕ್ತಿ || ಮೇದುರಂನಮಿಸುತ್ತೆವರವು |
ಣ್ಯೋದಯನುಮಿಂತೆಂದುಭಕ್ತವಿ| ನೋದಿಯೇಪರಮೇಶನೇವರದಾಯ
ಕಮಹೇಶಾ ||೬೧|| ಹೇವಿಬುಧಸನ್ನುತನೆಪೇಳ್ನೀ | ನೀವಿಧದಿವಚಿಯಿಸ
ಲುಬಹುದೆಕು | ಭಾವಹಾಂಚಿತನೆನಿಪಸದ್ಗುರುದೇವನಂಪಾಪ || ದಾವ
ದಾವಾನಲನನೆನ್ನಂ | ಪಾವನಂಗೈದವನವೊದಲೇ |ಕೇವಲದೆನಿರಪಾಯ
ನಿತ್ಯಭವತ್ಪುರಾಂತರದೀ ||೬೨|| ಸೇರಿಸುವುದೆನ್ನನುಮನಂತರ | ವಾರ
ದೀಭವದತ್ತಣಿಂದಂ | ಪಾರವೈದಿಸೆಲೇಸಹುದುಪರಮಾತ್ಮನೇಯೆನಲು||
ಸೂರಭಕ್ತ್ಯುಕ್ತಿಯನುಕೇಳುತೆ | ಮಾರಹರನುಸುರಿದನುಶಾಸ್ತ್ರವಿ |
ಚಾರಿವೇದಪಿತಾಮಹಂಸದ್ಭಕ್ತಶೇಷವನೂ ||೬೩|| ದಾಸಭಾವದಿಭುಂ
ಜಿಸಿದವಂ | ಭಾಸಮಾನವೆನಿಪ್ಪನಿಜಪದ | ವಾಸಮಂಸೂರ್ದ್ದಪನೆನುತ್ತ
ರಿಡುಂಶರಣಕುಲದಾ ||ವಾಸವೋಳ್‌ಕುಲಜಾತಿಭೇದವ ! ನಾಸಮಯ
ಧೊಳಗೆಣಿಸೆಜನ್ಮವ | ದೇಸಹಜವೆಂಬುದನುಲೋಕದಿಸಿದ್ಧಮಾಡಲ್ಕೆ
||೬೪|| ಪರಮಶಿಷ್ಯನಮನದನಿಶ್ಚಯ | ವರಿಯಲುಂವಾಮನನೆನೀಂಕಂ |
ಡರಿವೆಯಾಗುರುಭಕ್ತಿಸತ್ಕುಲವರ್ಧನನೆನಿಸ್ನಾ || ಹರಣನೆನಿಪಾಚಾರ್ಯವ|
ರ್ಯಂ|ಶರಣಪಾವನಭಕ್ತಿಸತ್ಪಥ | ದಿರವರಿದವನುಮಾಗಿಜನಸಂದೋಹವ
ಣಕಿಪುದೂ ||೬೫|| ಎನುತೆಚಿತ್ತದೊಳಗಣಭಯದಿಂ | ಶುನಕದೇಹವನ್ನೈ

ದೆಬಯಸಿ | ರ್ದನುವಿನಿಂಮೇಲಣಭವದಿಶುನಿಯಪ್ಪುದೇವಿಧಿಯೂ|| ಎನ
ಲೊಡನೆದಿಗುಲ್ಗೊಂಡುವಾಮನ | ನೆನಘೆಸ್ವಾಮಿಯೆಹೀನಶ್ವಾನನ |
ಜನುಮವೆನ್ನಗುರೂತ್ತಮಂಗೆಂತಾಗುವುದುನೀನೂ ||೬೬|| ಜಗದಖಿಳ
ದುದ್ಭವಸ್ಥಿತಿಲಯ | ಸುಗುಣಶಕ್ತಿನಿಯುಕ್ತನಾಗಿಹೆ | ಯಗಣಿತಸುಮ
ಹಾತ್ಮ್ಯಯಿಂದೀಸಮಯದೊಳಗೆನ್ನಾ||ಸುಗುರುವೇದಪಿತಾಮಹನಕೊ
ರ | ತೆಗಳನೆಣಿಸದೆನಿಮ್ಮಪೊಳಲಂ | ಮಿಗೆಪೊಗಿಸಬೇಕೈಯದಾವಶರೀರ
ವಾಳಿದೊಡಂ ||೬೭|| ಶೈವಶರಣರಭುಕ್ತಶೇಷವ | ಭಾವದಿಂಪಡೆದಿರ್ದಥ
ನ್ಯನ | ಕೇವಲದೆಬಿಟ್ಟಾನುಬರ್ಪುದಿದಾವಹಿತವಿಧಿಯೂ || ಪಾವನಾತ್ಮಕ
ನಪ್ಪಶ್ರೀಗುರು | ದೇವನನುಮೆನ್ನುವನುಘನತರ | ಶ್ರೀವಿಭವದಿಂದೊ
ಯ್ವುದೆನ್ನಲ್ಕಾಮಹೋಕ್ಷಗನೂ ||೬೮|| ತನ್ನಸ್ವಾಂತಾವೋದಪೂರ್ಣಾ
ಭ್ಯುನ್ನತದೆವಾಮನನನುಡಿಯಂ | ಮನ್ನಿಸುತೆಸುಕುಮಾರನಿನ್ನಯ
ಸುಗುಣಸದ್ಭಕ್ತಿ || ಎನ್ನನೊಳಕೊಂಡಿತ್ತುಘನಸಂ | ಪನ್ನನೀನೀಜೀ
ಡಿದಿಪ್ಪುವ | ನಿನ್ನುತೀರಿಸಿಕೊಡುವೆನತಿಸಂಭ್ರಮವಿಭವದಿಂದೇ ||೬೯||
ಗುರುವರನನೊಡಗೊಂಡುಶಾಶ್ವತ | ನಿರತಿಶಯದಾತ್ಮಾಲಯಕೆಸಾ ! ದ
ರದೆಬಾರೈವಿನಯಗುಣಗಣನೇಯೆನ್ನುತ್ತವರಂ || ಪರಮಸೌಖ್ಯದಿಸ
ಹಜದೇಶಕೆ | ಸುರಸಮೂಹವೃಭೀಯೆನುತ್ತಿರೆ | ಸುರಕುಜಕುಸುಮ
ವೃಷ್ಟಿಗರೆಯುತ್ತಿರಲುಘನವ್ಯೋಮ ||೭೦||ಯಾನದೊಳ್ಕುಳ್ಳಿರಿಸಿಕೊಂ
ಡಸ | ಮಾನದಿಂಪೋದನುಕುಧರಜಾ | ಜಾನಿಯೂಸದ್ಭಕ್ತಕಾರುಣ್ಯಾ
ನ್ವಿತೇಕ್ಷಣನೂ || ಈನಿಮಿತ್ತದೆಸುಪ್ರಸಾದದ | ನೂನಮಹಿಮೆಯ
ದೀಪರಿಯುಮೆನು | ತಾನಿಜಸ್ಥಿತಿಯಿಂದಲರುಹಿಮಹಾಮಹಿಮರೆನಿಪಾ |
||೭೧|| ಮಾಚಿದೇವಪ್ರಮುಖಸತ್ಪ್ರಮ |ಥಾಚಲಿತರಿಗೆಮಾದರಸತ್ರೈ |
ಲೋಚನಾಭಂಮುಗುಳೆಪೇಳಲ್ತೊಡಗಿದಂಮುದದೀ || ವಾಚಿಸಿದವಿಷ
ಯವುಭುವನದೋಳ್|ಪ್ರಾಚುರಿತವೇದಾಂತಚರ್ಯಾ |ವಾಚಕಸುಗರಿಮೆ
ಯೆಸುಭಕ್ತರುಲಾಲಿಪಂತಿಹುದು ||೭೨||

ಅಂತು ಸಂಧಿ ೧೩ಕ್ಕಂ ಪದ ೬೯೪ಕ್ಕ ಮಂಗಳಮಹಾ.

## ಹದಿನಾಲ್ಕನೆಯ ಸಂಧಿ

### ಭಿಲ್ಲಮರಾಜನ ಕಥೆ.

ಸೂಚನೆ || ಗುರುಪ್ರಸಾದದಿಬಿಲ್ಲಮನುಡೊಂ | ಬರಕುಲದಚ
ನ್ನಾಯಿಯೊಡನೈ | ದಿರುವಪ್ರಾಣಿಗಳೊಡನೆಸಾರ್ದಂಹರನಪಟ್ಟಣವಾ||

ಪದ || ರಾಜಬುಧಗುರುಕವಿಗಳಿಂದತಿ | ತೇಜದೆಸುಧರ್ಮಾಧಿವಾಸ
ವಿ |ರಾಜಿತಪ್ರಾಬಲ್ಯಜಿಷ್ಣುಪ್ರಭೂತ್ತಮೋಂಚಿತದಿಂ || ನೈಜದಿಂಪರಿಪಾ
ಲಿತವದಾ | ಗೀಜಗದೊಳಧಿಕೈಕಪುಣ್ಯಸ | ಮೂಜಕರಢಿಗೆಯೆಂಬಪುರವ
ದುನಾಕದಂತಿಹುದೂ ||೧||ಎನಲುವಿಶ್ರುತವೈಭವದಿಪಾ| ವನವೆನಿಸುವಾಪ್ಪೊ
ಳಲನಾಳುವ |ನನುಪಮಸುನವರತ್ನಮಂಜೀರಾನ್ವಿತನುಘೋರ || ಜನಕ
ಖಡ್ಗೋದ್ದೀಪಿತನುಶಾಂ | ತನುಪ್ರಗಂಡಸ್ಥಲನುನಿರ್ಮಲ | ದನುಪಮಿತ
ಘನವಜ್ರಶ್ರುತಿಕುಂಡಲವಿರಾಜಿತನು ||೨|| ನಿರತವಿಬುಧಸಮಾಜಸಂಸ್ಥಿ
ತ ! ನುರುಸದನುರಾಗನುವಿಶಂಕಟ | ನಿರತಿಶಯವರ್ತಿಕನುಸೇನಾನಿಕರ
ಸಂಯುತನು || ಪರಮಗೌರವಯುಕ್ತನಗಣಿತ | ನರಪತಿನಮಿತಚರಣ
ತಲಭಾ | ಸುರನೆನಲುಬಿಲ್ಲಮಸಮಾಭಿದನತುಲವೈಭವದಿಂ ||೩|| ಎಸೆವ
ಶಿವತತ್ವಪ್ರವೇದ್ಯನು | ಅಸಮನುದ್ಯದ್ದೇಶಿಕಚರಣ | ಬಿಸಜಹೃದಂಘ
ಸದನನುಸತತಾರ್ಥಿಜನಚಯಶರಣಂ || ವ್ಯಸನವಿಷಯವಿದೂರನಂಚಿತ|
ರಸಿಕವಲ್ಲಭನಧಿಕಧೈರ್ಯಂ | ವಸುಧೆಯಂಪಾಲಿಸಿದನಖಿಳಪ್ರಜೆಗಳುಂಸು
ಖಿಸೇ ||೪|| ಜಾತಿಗುರುಗಳೆನಲುಧರಣಿಪ್ರ | ಖ್ಯಾತಿಯಾಳ್ವಾದೇಶಿಕರಸು
ಕೃ ! ಪಾತಿಶಯಪೂರ್ವಕದಿಶಿವಲಿಂಗವನುಧರಿಸುತ್ತೀ || ಪ್ರೂತಭಕ್ತಿಯ
ಪೆಂಪೆಸೆದುಭ | ಕ್ತಾತುಲಿತಲೇಪನವಸನವಿ | ದ್ಯೋತಭೂಷಣತಾಂಡ
ವನಟನವಾದ್ಯಸಂಗೀತ ||೫|| ವಾರಣಾಶ್ವಾರೋಹಭವ್ಯವಿ | ಚಾರಸ
ತ್ಕೃತಿಮುಖದೆನಿಜಹೃ| ತ್ಸಾರಸದಿನಿರ್ಧರಿಸಿದಾಗುರುಶೇಷವನೆಕ್ಕೊಳಲೂ
ಆರಸೇಂದ್ರನುಮಹಿತನಿಯಮೋ | ದಾರನಿಷ್ಠೆಯಗರಿಮೆಯಿಂಸ | ತ್ಕಾ
ರ್ಯನಿರತನುವಶಾಗಿಪ್ರಾತಃಕಾಲಸಮಯದೊಳೂ ||೬|| ಗುರುಚರಣದರ್ಶ

ನವಮಾಡುವ | ವರಮುಭಕ್ತಿಯೊಳಿರಕಗೊಂಡಾ | ಸ್ಥಿರತರವ್ರತವೆಸಗು
ತ್ತಂಕೆಲಕಾಲವಮಂಕಳೆದಂ || ಅರಿದಿದೆನುತಿರಲನಿತರೊಳೆಡೊಂ | ಬರರನಾ
ಯಕಚಾಮಯಂತ ! ನ್ನುರುತರದಬೀಡಿಕೆಸಹಿತಬಂದನುತೊವಲಚೀ
ಲಂ ||೭|| ಜೀಕುಹುಲ್ಲಿನಚಾಪೆಬಲೆಗಳ | ಹಾಕಿಬಿಗಿಸುವಕೋಲುನಾರಿ
ನ | ವೋಕುಗಳುವಟಚಿಕ್ಕಗೂಟವುಕೌದಿಚಿಂದಿಗಳೂ || ಜೋಕೆಗೊಳಿ
ಸಿದಹೊರೆಯಹಗ್ಗವ | ನೇಕವುಕೊಡತಿಕೊದಲಿನಜಡೆ | ಬೇಕೆನಿಪಹಣಿ
ಗೆಗಳುಎರಳೆಯಕೊಂಬುಹಳೆಗಡಿಗಿ ||೮|| ಸಣ್ಣಸೀರಣಿಗೆಗಳುಬಾಚಿನಿ
ಷ್ಣಣ್ಣಸುಕುಟೀರಾಳಿಯುಂಪೊಸ | ಬಣ್ಣವಿಟ್ಟಹಗುಜ್ಜೊನಕೆಗಳುಚಿ
ಕ್ಕಒರಳುಗಳೂ || ವೊಣ್ಣಹದದಿಂಗೈದಒಲೆಗಳ | ಗಣ್ಯವಾಗಿಹವಸ್ತು
ಜಾತವ | ಹೆಣ್ಣುಗಂಡ್ಗತ್ತೆಗಳುಹೊತ್ತುಬರುತಿರೆಚೆನ್ನಂಟಿ ||೯|| ಬರು
ವಹಂದಿಯಹಿಂಡುಸಹತ | ತ್ವರದಪರಿಸರದಲ್ಲಿಬೀಡಿಕೆ | ಭರದೊಳಿಳಿ
ಸುತೆಮೋದದಿಂಥರಣೀತಲೇಶ್ವರನ || ದರಿಶನದಕಾರಣದೊಳುಚಿತ | ಜ್ಞಾ
ರುಕೆಲಬರನುಕೂಲಮಾರ್ಗ್ಗವ | ಚರಿಸಲಾಜ್ಞಾಪಿಸಿದಚಾತುರರುಗಳಜೊ
ತೆಗೂಡೀ ||೧೦|| ಜಗ್ಗಿಬಿದ್ದಿಹದೊಡ್ಡಮುರುವುಗ | ಳಗ್ಗಳದಕಾಶಿಗಳು
ಚೆಲ್ಲಣ | ನಿಗ್ಗನಿವಗೆಜ್ಜೆಗಳಪೋಣಿಸಿಕೆಸರಗಳಂತೊಟ್ಟು || ಮಗ್ಗುಲೊ
ಳುಮಿಂಚುತಿಹಗುಂಡುಗ | ಳೊಗ್ಗಿನಿಂಹವಳಸರಕಿವಿಗಳ | ನಿಗ್ಗಿಭುಜ
ಗಳನೊರಸುತಿರ್ಪಮುರುವುಗಳುಂಗುರಗಳ್ ||೧೧|| ಚಕಣಕೆತ್ತಿದಒಲೆ
ಗಳುಚಕ | ಚಕನೆಮಿಂಚುವಕತ್ತಿಬುಟ್ಟಿಯೊ | ಳುಕಡುದೊಡ್ಡಿತ್ತಾದ
ಮುಂಡಾಸಗಳುಶೋಭಿಸಲೂ || ಪ್ರಕಟಗರಿಮುಸುವೇಷದಿಂಸೆ | ದ್ವಿಕ
ಸಿತಾಸ್ಯದಿಕಂಗೊಳಿಸಿದರು | ಸಕಲರೆನಿಪಾಬೀಡೊಡೆಯರುಂಸುದತಿಯು
ರುವಿಸುನಿ ||೧೨|| ಕುಪ್ಪೆಗೊಂಡೆಗಳುಂಜಡೆಗೆಏಣೆ | ದಿಪ್ಪರನ್ನದಮಿಂ
ಚಿನಿಂಸೂ ! ಡಿಪ್ಪರೇಗಟಿಸೂರಿಯೋಲೆಯುತಿಂಗಳೂಸರಿಗೇ || ಒಪ್ಪಿ
ರುವಕಿವಿಬಾಳೆಮುತ್ತುಗಳಿಪ್ಪಓಲೆಯುನತ್ತುಬೇಸರಿ | ತಪ್ಪಧಿಡುತಿಹಪ
ಲೆಕೆಂಪುಗಳೋಲೆಮುತ್ತುಸರಾ ||೧೩|| ಕುಂದಣಡಕೇಯೂರಕಟಕಗ|
ಳಿಂದಕಾಂಚೀದಾಮುಪಾದದೊ | ಳಂಮುಗೆಗಳುಂ ಮೊದಲುಗೊಂಡಿಹ
ಭೂಷಣಸುವಿಸರ್ರಂ || ಸಂದಿರುವಚೀನಾಂಬರಗಳತಿ | ಸುಂದರಥವ್ಮೋ

ಲ್ಮುಸುಗುಹೊಳೆಯಲು | ಚೆಂದಿರನಬಣ್ಣದಕುಪ್ಪುಸಹೊಂಬೆಟ್ಟುಜರಿಶಿ
ಗು ||೧೪|| ಮೊದಲುಗೊಂಡಾವಸ್ತ್ರಭೂಷಣ | ಪ್ರೌಢವಿರುವಶರೀರ
ದೀಧಿತಿ | ಮುದಕೆಕಾರಣವೆನಿಸಿರೂಪಾತಿಶಯದಿಂತೋರೆ || ಮದನಪ್ಪ
ಶಪಬಡೆಯೊಳಗೆಸಿ | ಕ್ಕಿದಮೃಗಗಳೆಂಬಂತೆವಿಟರಸ | ಮುದಯಪ್ರೌಬ್ಬ
ಳಿಗೂಡಿಕರೆವರುಒರೆನೋಟದೊಳೂ ||೧೫|| ತಲಿರಬಾಣನದಂತಿಗಳುಮೆ
ನ | ಉಳಿದಡೊಂಬರನಾಯಿಕಿಯರೀ | ಬಳಕೆಯಿಂನಿಜವರ್ಣವೇಷೋ
ಚಿತವಿಭವರಾಗೀ || ನಳಿನದಳನಯನೆಯರಜೊತೆಗೂ | ಡಿಳೆಯೊಡೆಯನ
ಡೆಗೈತರಲುಪ್ರೂ | ರೊಳಗಣಖಿಳಜನರುಸವಿಸ್ಮಯರಾಗಿನೋಡುತಿರೆ||೧೬
ಮೊಲೆಯುಕೂಸುಗಳೆಸಿಯುಯಂತ್ರವು | ಚಲಿಪಮುರಗಾಲ್ ಡೋಲುಗಳ್ಳ
ಸಂ | ಕಲಿತಶೃಂಖಲವಲಯುಗಳುಮಿಂಚುತಿಹತಲಿಗೆಗಳೂ || ಭಲಭಲರೆ
ಯೆಂಬಂತೆಯುಭ್ರ | ಸ್ಥಲಘನೋನ್ನತಗಣೆಗಳುಂಗುಡಿ | ನೆಲೆಗಳುಂಹ
ಗ್ಗಗಳುಕತ್ತಿಗಳಿಪ್ಪಚೀಲಗಳೂ ||೧೭|| ಹಾರೆಗಳುಸಹವಾಗಿಡೊಂಬರ |
ವಾರವೆಲ್ಲವುಬಂಡುಘನತರ | ಭೂರಮಣನೆನಿಸಿರ್ಪಬಿಲ್ಲಮರಾಯನರಮ
ನೆಯಾ || ದ್ವಾರಪಾಗ್ರ್ಯಾಗಾಂಗಣದೊಳಾ | ವಾರಿದಂಗಳನಿನದವೆನಿಸ
ರಿ | ವಾರದವರಧ್ವನಿಗಳುಂಕೂಡಲ್ಕೆಡೋಲ್ಗಳನೂ ||೧೮|| ಒಪ್ಮ್ರಬಾಳಿ
ಸಲಾರವಂಗಳು | ದಿಪ್ಮ್ರನೆಮಹೀಶನಸಭಾಂತರ | ಮುಪ್ಮ್ರಸುಕಿಜನರಿಂ
ಗೆದಿಮ್ಮಿಡಿದಂದವಾಗಿರಲೂ || ಗಮ್ಮನಾನೃಪವರನಿದೇನೆನೆ | ಸಮ್ಮುಖ
ದೊಳಾರೈಪುಚರನೆಂ | ದಪ್ಮ್ರಹೀಪಾಲಾಗ್ರಣಿಯೆಕರುಣಾಮೃತಾಂಬುಧಿ
ಯೆ ||೧೯|| ಬಿನ್ನಪವಿದವದಾರುಭೂವರ | ಚೆನ್ನೆಸೆವವೇಷಂಗಳಿಂಬಂ |
ದುನ್ನತದೊಳಿರುತಿಹಡುಡೊಂಬರರುಗಳೆನಲುಮತಿಸಂ || ಪನ್ನನಹಭೂ
ಶಮಣನತಿಹಸಿ | ತನ್ನೆಗಳ್ದುಸಚಿವನನುನೋಡಲ | ಭಿನ್ನಭಾವನುಮಖಿ
ಳಸದ್ವಿದ್ಯಾಧುರೀಣನುಮಾ ||೨೦|| ಗಿರುವನವನುಸುರಿದನುಕೇಳ್ಭೂ |
ವರನೆಯುವರುತ್ವದೀಯಕರುಣಾ | ಶರಧಿಯೋಳ್ವಿಹರಿಸಲುಯೋಗ್ಯರು
ಮಾಗಿರುವರೆನಲೂ || ಅರಿದುನೃಪನಾತನ್ನಮಂತ್ರೀ | ಶ್ವರನೊಡನೆನುಡಿ
ದಂಭುವನದೋಳ್ | ವರವಿಳಾಸವದಾವುದಾದೊಡುಮೆನ್ನಗುರುವರನೂ
||೨೧|| ಕಂಡಬಳಿಕಾಂಕಾಂಬೆನೆಂಬುವ | ಖಂಡಸದ್ವ್ರತವಾಳ್ದಿಹೆನದಂ

ಕಂಡುನೀನರಿದಿರ್ಪಕಾರಣದಿಂದೆಯವರುಗಳಂ || ಅಂಡಲಿಸದಾಸ್ಥಳಕೆ
ಕಳುಹುವು | ಚಂಡಧೀಯುತನೆನೆತದಾಜ್ಞೆಯು | ಮಂಡೆಯೊಳ್ಧರಿಸು
ತ್ತೆಚಾರನನೋರ್ವನಂಕರೆದೂ ||೨೨|| ಅವನೊಡನೆತತ್ಸ್ಥಿತಿಯನೆಲ್ಲವ |
ವಿವರದಿಂತಿಳುಹಲ್ಕವನುಬಲು | ತವಕದಿಂನಡೆತಂದುಸಂಡಣೆಯಂ
ತೊಲಗಿಸುತ್ತಂ || ರವಮುಮಂನಿಲ್ಲಿಸಿಮಹಾತಿಶ | ಯವಿದೆನಿಪರಾಜಾ
ಜ್ಞೆಯಂಪಿರಿ | ಯವನೆನಿಪಚಾಮಯ್ಯನೆಂಬುವನಂಕರೆದುವಸುಧಾ||೨೩
ಪತಿನಿಯೋಗವತಿಳುಹೆವಿಶ್ರುತ | ಮತಿಯೆನಿಪಡೊಂಬರಪಡೆಯೊಡೆಯ |
ನತಿಶಯದಹರ್ಷದೊಳವನುತನ್ನವರನೊಡಗೂಡೀ || ಹುತವಹಾಂಬಕ
ವಿಗ್ರಹನುಮೂ | ರ್ಜಿತಸುನಿಷ್ಠಾಗರಿಮಮಹಿಮಾ | ವೃತನೆನಿಪಜಾತೀ
ಶನಿರುತಿಹರಾಜನುಪವನಮಂ ||೨೪|| ಸಾರಿಕಂಡಂಡೊಂಬರಾಪರಿ | ಮಾ
ರಧೀರನು ಮಾರಶರಗಳ | ಸಾರಕೆಜನಿಸ್ಥಾನವೆನಿ ಪಾವನದೊಳುಸ್ಮರನ
ಗೂ || ತಾರವೆನಿಸುವಚೂತವೃಕ್ಷದ | ಸಾರಫಲರಸಮುಂಸವಿದುವರ! ಶಾ
ರಿಕಾಘನಕೀರಭಟಕಲಕಲರವಗಳುಸದಾ ||೨೫|| ಗದಿಸಲತಿಚಕಿತಾತ್ಮ
ರಾಗುತೆ | ಮದನಪೀಡಿತರೆನಿಪಪಾಂಥರ ! ಹೃದಯದುಷ್ಣವಪರಿಹರವ
ಮಾಡುವಸುಸಾಮರ್ಥ್ಯಂ || ಒದವಿರುವವಿಸ್ತಾರತರಸ | ತ್ಕದಳಿಕೊ | ಉ
ದ್ಯಾನಂವಿಳಾಸಾ | ಸ್ಪದವೆನಿಸಲದರೊಳಗೆನಿಂದವರುಗಳುಪೋಗುತಿರೆ
||೨೬|| ವನವನೊಪ್ಪಿತುಘನವೆನಿಸಿಪಾ | ವನಸ್ವಕೀಯಾಸಿತಸುಛಾಯ
ದಿ | ಕನಕಸ್ವಚ್ಛತಮಾಲತಿಲಕಾಶೋಕಮುಖಸುಮದಾ || ಮಿನುಪಕಾಂ
ತಿಯುಸುರಪತಿಯಧನು | ವಿನವಿಲಾಸವಪೊಂದಿರುತೆಸಂ | ಜನಿತಸ
ಮ್ಮೋದದಿಲತಾಂತಸುವಿಶ್ರುತದಗಂಧ ||೨೭|| ಸಾರದಿಂಶುಕಕೇಕಿಪರ
ಭೃ | ಛ್ಛಾರಿಕಾಕುಲನೀಡಜಾರವ | ಪೂರಿತಾಂಚದ್ಗರ್ಜನೆಯುಪೆಂಪೆಸೆ
ವುತಿರೆಬಳಿಕಾ || ಪಾರರುಚಿರದ್ಯುತಿಯತನುವೊಳು | ಬೀರುತಂಪಾಡು
ತ್ತೆಡೊಂಬರು | ಸಾರವಚನದೊಳರಗಿಳಿಗಳಂಚರ್ಚಿಸುತೆನಡೆದು ||೨೮||
ವಿಳಸಿತಸುಕಮಲಾಕರದನೆಲೆ | ಗಳನುನೆರೆಕಾಣುತ್ತೆರಮಣೀ | ಯಳಲಿ
ತಾಮೋದಸುಲತಾಂತಗಳನುರೆಕೊಯ್ವುತಿಹ || ನಳಿನದಳನೇತ್ರೆಯರು
ಲೋಚನ | ಗಳಿಗೆಪರ್ವವೆನಿಸುತಲಮಿತೋ | ಜ್ವಳಿತಜಾತೀಶ್ವರನಭಾ

ತ್ರರುವಾಸಿಸುವಮಠವು ||೨೯|| ಹೀರಸನ್ಮಣಿಮಯಪ್ರಬಂಧುರ | ಸಾರಸಾ
ಹಿತಕಾಂತಕುಡ್ಯಬ | ಲಾರಿನೀಲಸುರುಚಿರಕುಟ್ಟಿಮ | ಮೌಕ್ತಿಕಾಂ
ಚಿತರು || ಕ್ಷ್ವಾರವೈತಾನಾಳ್ಪವಿದ್ರುಮ | ಭೂರಿಚಾರುಸ್ತಂಭಮಣಿಮ
ಯ | ತೋರಣಗಳಿಂಶೋಭಿಸುವಭಾಸ್ವಚ್ಛತುರ್ದ್ವಾರ ||೩೦|| ಭವನವ
ನುಕಂಡಾಕ್ಷಣದೆಮ | ತ್ತವರುಮತುಲಪ್ರಮೋದಚೇತೋ | ವಿವಶರಾಗಿ
ರುತಿರೆತದೀಯಶಾಂತರಪ್ರದೇಶದೊಳೂ || ಭವವಿದೂರನೆನಿಪ್ಪವಂದಿ |
ವ್ಯವಸಥಾಂತರದೊಳಗೆಕೇವಲ | ದವಿರಳಾನಂದದೊಳುಕೃಷ್ಣಾ ಜಿನದ
ಪದ್ಮಾಕ್ರೈ ||೩೧|| ಯಾಸನದಿಕುಳ್ಳಿರ್ದವಂಮ | ತ್ತಾಸಮಸ್ತಾಂಗದೊ
ಳುಭಸಿತವಿ | ಕಾಸದಿಂರುದ್ರಾಕ್ಷಧಾರಣನಾಗಿರುತೆಕುಟಿಲ || ಮೋಸವಂ
ಟದಶಮೆದಮೆಗಳಾ | ಲೇಸಿನಿಂಡಲನೂನನಿಶ್ಚಯ | ಭಾಸಮಾನಸು
ಚಿತ್ತವೃತ್ತಿಯುಶಿವನೊಳಗೆನೆಲಸೇ || ೩೨ || ಸಾರಸೌಖ್ಯೋದಧಿನಿಮ
ಗ್ನಂ | ಧೀರನವನಂಕಂಡೆರಗಿಯುವ | ದಾರುಭೂಮಿಾವಲ್ಲಭಂಕಳುಹಿ
ದನುತಮ್ಮಡೆಗೇ || ಆರಯಿಪುಬಂದಿಹೆವುತಾವಕ | ಚಾರುಗೌರವಯು
ಕ್ತಚರಣವ | ಸಾರಿನಾವುಗಳರಿತನಿತುವಿಜ್ಞಗಳತೋರುವೆವು ||೩೩|| ಚಿ
ತ್ತವಿಸುಗುರುವರ್ಯನಮ್ಮಯ | ಬಿತ್ತರವನೆನುತಾಗಲವರುಮ|ಹತ್ತ ರದರ
ವವೆಸೆಯುವಂಡದೊಳೊಮ್ಮೆಡೋಲುಗಳಂ || ಒತ್ತಿಬಾರಿಸೆವನದಘನ
ಧ್ವಾ | ನಾತ್ತವಾಗಿರಲೋರ್ಮೆಭೋರ್ಗರೆ | ವುತ್ತೆಬೊಬ್ಬೆಗಳಿಡುತೆಭುಜ
ದಾಸ್ಫಾಲನವಮಾಡೀ ||೩೪|| ಗಣೆಗಳಂನಿಲ್ಲಿಸುತೆತೋರದ | ಮಿಣಿಗಳಿಂ
ನಾಳ್ಪೆನೆಗಳಲಿಬಿಗಿ | ದೆಣಿಕೆಯಿಲ್ಲದೆಮೇಲವುಗಳಂನಿಲಿಸಿನಮಿಸುತ್ತ ||
ಮಣಿದುಮತ್ತಾಥರೆಯುಮೊಣ್ಣಂ | ಹಣೆಗಲ್ಲಿಂಗೊರಸಿಕೊಳುತಂಸಂ |
ದಣಿಪಜನರಂತೊಲಗಿಸುತೆಮೇಲ್ಚೆಲ್ಲಿಕೊಳ್ಳುತ್ತೆ ||೩೫|| ತೋರಿದರುತ
ಮ್ಮಾಟಗಳಮಿತಿ | ಮಿಾರಿಕಿರಿಮರವೇರಿಕೆಲಬರು | ನಾರಿಯುರುಮಂತರ
ದೊಳಗೆಸಂಚಾರವೆಸಗಿದರೂ || ಭಾರದಿಂಖರಪೃಷ್ಟದೋಳ್ಮೋ |
ಕೋರಣದೊಳೆಲ್ಲರುಮಿರದೆಯೋ | ರೇರಿನಿಲುವುದುನೋಳ್ಪಜನರಿಂಗುತ್ಸು
ಕವದಾಗೆ ||೩೬|| ಕತ್ತೆಗಳಸಂದಿಯುಹೊಗುತೆಜನ | ಮೆತ್ತಲೊಬ್ಬುಳಿ
ಯೊಗಲವರಂ | ಪೊತ್ತುನಡೆಯುವನೋರ್ವನೆಲ್ಲೈನಕಾಳದೆಂದೆನಿಸೀ ||

ಎತ್ತಲಾರದದೂಲಮಂಟಪ | ಲ್ಲೊತ್ತಿ ಎತ್ತು ತಲೊಬ್ಬನಾಡಿದ | ನತ್ತಲಿಹಜ್ಜ ನರೆಲ್ಲರಾಶ್ಚರ್ಯಾತ್ಮರಾಗುವರೊಲೂ ||೩೩|| ಬೆನ್ನಿನೊಳುರಾಸಭಗಳೆಂಬ ಹು | ಕೋನ್ನತದಭರವೆನಿಸಿರಲವಿ | ಚ್ಛಿನ್ನದತೊವಲೆಡೊಳೆಸೆದವೋಕಿನ ಮೇಲೆಬೀಸರದೇ || ಮುನ್ನಮೇಯಿದಿರಾಗಿದೇಹಗ | ಳಿನ್ನು ಹತ್ತಲ್ಕೊಡ ಪಕಾಲ್ಗಳ | ತಿನ್ನನೇಚಾಚುತ್ತೆಸೋಂಕಿಲ್ಲದಲೆಜಾಗರದಿಂ ||೩೪|| ಈಚೆ ಯುವನಾಚೆಗೆಬರುತೆಮುಗು | ಳ್ವಾಚೆಯುವನೀಕಡೆಗೆಬರಲುಮ | ಹಾಚ ಮತ್ಕೃತವೆನಿಸಿನೋಡುವರಾತ್ಮವದುಸುಖಿಸೇ || ಪ್ರಾಚುರದಿನಟಸಿದ ರುಕೆಲಬರು| ಯೋಚಿಸುತೆವಾಯುವನುಕುಂಭಿಸಿ|ಖೇಚರರೊಲಸಿಯುಂ ತ್ರದಂತರದೊಳಗೆಕಾಯುವನೂ ||೩೯|| ನಿಲ್ಲಿಸಿದರತಿಘ್ರಾಣೆಯನಿಸುವ ಪಲ್ಲವಾಧರೆಯಿಾಸ್ಪೆಸುವವರು | ಮೆಲ್ಲರಾಹಾಎನಲುಬಹುಧೈರ್ಯೊಲ್ಲಸಿತ ಛಾಗೀ || ಮೆಲ್ಲನೆಪೊರುತೆಗಡಿಗೆಯಡಕಿಲ | ಪಲ್ಲಟಸನೋಲ್ಗಣೆಯನೇ ರುತೆ | ಭಲ್ಲಿಯುದವೊನೆಯೊಳಗೆನಾಭಿಯುನಿಟ್ಟುಚಕ್ರದೊಲೂ ||೪೦|| ತಿರುಗುತಿರೆಮತ್ತೋರ್ವಳತಿಸ | ತ್ವರದಿಕತ್ತಿಯವೊನೆಯಬೆನ್ನಿನೊ | ಳುರವಣಿಸಿವೊಗ್ಗೆಯುವರಿಯುಮುಣಿದಿರ್ದಳೊರ್ವಸತಿ || ಚರಣದಗ್ರವುಗ ಣೆಯುಮೇಲ್ಗಡೆ | ಯಿರುತೆದೇಹವಧೋಮುಖದೆನಿಂ | ದಿರಲುತೂಗ್ಯಾಡಿದಳುಮೃಗಶಾಬಕಸುಲೋಚನೆಯೂ ||೪೧|| ಪದದಿಪಾದುಕೆಗಳನು ಮೆಟ್ಟುತೆ | ಮುದದಿಹಗ್ಗದಮೇಲೆನಪದಳು | ಹೆದರದೋರ್ವಳುಮುರದ ನಿಡುಗಾಲ್ಗಳನುನೆರೆಮೆಟ್ಟಿ || ಚದುರತನದಿಂಬಂದುಭೂಮಿಾ| ಪದದೆನಿಂದಿರಲೀವಿಧದಸಾಂ | ಪ್ರದವಶೇಷಮನುಷ್ಯಲೋಚನಪರ್ವವಾಗಿರಲೂ ||೪೩|| ಖೇಲನವಮಾಡುತ್ತೆಸದ್ಗುಣ| ಶೀಲನೆಂದೆನೆಪೆಸರುವಡೆದದ | ಯೂಲುವೆನಿಪಾಗುರುವರನಸನ್ನಿಧಿಯೊಳಗೆನಿಂದೂ|| ಫಾಲವದುಭೂತಲವನೊರಸಲು | ಮೇಲೆಮೇಲೆನಮಸ್ಕರಿಸಿದೇ | ವಾಲಸತ್ಕಾರುಣ್ಯಪೂರನಿರೀಕ್ಷಣೆಗೆಪಾತ್ರ ||೪೩|| ರಾಗಿರುವೆವಿಂತಲ್ಲದೀವಿ | ದ್ಯಾಗರಿಮಪರಶೀಲನಾರ್ಥವ | ದಾಗಲೆಲ್ಲರುಕೂಡಿದೇವರುಮೆಚ್ಚಬೇಕೆಂದೂ || ಹೀಗೆಬಂದಿಹೆವೆಂದುಮುವರುಗ | ಳಾಗಸರ್ವರುಮೋರ್ಕ್ಮೆಯಾನತ| ರಾಗಿನುತಿಯಂಮಾಳ್ಪನುಡಿಗಳನಾಲಿಸವೆನೋಡ ||೪೪|| ದಿರಲುಪರಶಿವಲಿಂಗಲಕ್ಷ್ಯದ | ಪರವ

ಶೇಕ್ಷಣಪೂರಿತಾನಂ | ದರಸಶರಧಿನಿಮಗ್ನನಂಚಾಮಯನುನೆರೆನೋ
ಡೀ || ಪರಿಪರಿಯಯೋಚನೆಯಮಾಡು | ತ್ತುರರೆಈಡುಶ್ಯ್ರಮವಚನ
ಮಂ | ಪರಮನೆಂತಾಲಿಸುವನೋಡುವನೆನುತೆಚಿಂತಿಸಲೂ||೪೫|| ಇಂತು
ಚಿಂತಿಪುದೇಕೆನಿಮ್ಮುಮ್ಮದ | ರಾಂತರದಿಜನಿಸಿರುವನಾನುದಿ | ಗಂತರದೊಳಿ
ರಡನೆಱುಸ್ವರ್ಗದವೇಶ್ಯೆಯಂದೆನಿಸೀ ||ಇಂತಹಳಿರುತ್ತಿರಲುಯೋಚನೆ |
ಯೆಂತುಮಾಡುವೆತಂದೆನೀಂನಿ | ಶ್ಚಿಂತನಾಗಿರುಯೆನ್ನಶಪಥವಕೇಳ್ವುದಿ
ನ್ನೊಂದರ ||೪೬|| ಉಲ್ಲಸದಹೃದಯಾಂತರಾಳದಿ | ಸಲ್ಲಲಿತಕುಳಿಸ್ವ
ಟ್ಟಳಿಯನಂ | ನಿಲ್ಲಿಸಿದನೋಟದೊಳುಕಾಂಬಮಹಾಂತಗುರುವರನ ||
ಬಲ್ಲತನದಿಂನಾಳೆನಾಂರತಿ | ವಲ್ಲಭನಕಟೂರಲಗನಾಟಿಸಿ | ತಲ್ಲಣಿಸೆಮುಮು
ಳಾಗುವ್ರೊಲುನಿಮ್ಮಳಿಯನಂಮಾಡೀ ||೪೭|| ತಡೆಯದೇನಾವಿಪಬಿಡಾರ
ಕೆ | ನಡೆದುಬರ್ಪಂದದೊಳುಮೋಹದ | ಕಡಲೊಳದ್ದುತೆವಿರಹಬಲೆಯಂ
ಹಾಯ್ಕಿಕಳೆಯುವೆನೂ || ನಡೆನಡೆಎನುತಲಾವಿಳಾಸಿನಿ | ನುಡಿದುತಾತನ
ನೊಪ್ಪಗೊಳಿಸುತೆ | ಕಡುರಯದೊಳವಳಾಯತೀಂದ್ರಾಸ್ಥಾನಕಾಗಮಿ
ಪಾ ||೪೮|| ನೆನಹಿನಿಂತನ್ನವರನೊಡಗೊಂ | ಡನಿತರೊಳುತಾವಿಳಿದನೆಗಿ
ಗತಿ | ವಿನಯಸೀಮೆಯಿದೆನಿಸುವಾಭಾಮಾಮಣಿಯುಬಂದೂ || ಅನುಪ
ಮಿತಚಿತ್ರಸುದುಕೂಲವ | ನನುವಿನಿಂತಾನುಟ್ಟುಬಲುವಿಂ | ಚಿನಜರೆ
ಯಪೊಗ್ಗಗಳರವಿಕೆಯಚೆಲುವೆಸೆಯೆತೊಟ್ಟು ||೪೯|| ಸೊಗಸೆನಿಪಕ
ಸ್ತೂರಿರೇಖೆಯ | ಮಿಗಿಲೆನಲ್ತಿಡುತ್ತಲರಳ್ಗಳ | ಬಗೆಬಗೆಯದಂಡೆಗಳ
ಸೋರ್ಮುಡಿಯೊಳಗೆಮಿಗೆಧರಿಸೀ || ಮೃಗದೃಗಿಯುನಿಜನಯನಯುಗಳ
ಕೆ | ಜಿಗಿಮಿಗಿಲಕಜ್ಜಲವತೀಡುತೆ | ಯಗಣಿತವಿಲಾಸಾಬ್ಜಮಂಕರತಲ
ದೊಳುರೆಪಿಡಿದೂ ||೫೦|| ನಲ್ಲೆಸೌರಭಿತಾಷ್ಟಗಂಧವ| ಗಲ್ಲದೊಳ್ಚಿನ್ನಾಗಿ
ಧರಿಸಿಸ | ಮುಲ್ಲಸಿತಶಿವಲಿಂಗಪೇಟಿಕೆಯುರದೊಳಿರೆನವ್ಯ || ಪಲ್ಲವಾಧರೆ
ವೀಟಭರಣೆಯ | ಬಲ್ಲತನದಿಂಪಿಡಿದುವೀಣೆಯ | ನಿಲ್ಲದೇಕೈಕೊಂಡು
ಸಖಿಯರುನಡೆತರುತ್ತಿರಲೂ ||೫೧|| ವೀರವೋಹಿನಿಯಿವಳುನಿಜವೆನೆ |
ಸಾರಲಲ್ಲಿಂಬೀಡಪ್ರೊರಮುಡು | ತಾರಮಣಿಯುರುವೆರಸಿಗವಿುಸಲುಸಿಂಗರ
ದಸಿರಿಯೂ || ವಾರಿಸೊಗಸಿನಬೆಳಸುಬೆಳೆದುದೊ | ಮಾರವೋಹನ

ಜೋತ್ಸ್ನೆಯೋವೈ । ಯಾರಿಜನ್ನಾಯ್ನಾಯಕಿಯುಯಿಂತೆನಲುವೈಭ
ವದೀ ||೩೦|| ಎಳೆಯಜವ್ವನೆಹೂವಬಿಲ್ಲನ । ಬಳಿವಿಡಿದಪಂತಾವಳಗತಿಯ।
ವಳಿವನಡೆಯಿಂವೊಗಡಮುಗುಳ್ನಗೆಯಂಕುರಾಂಕಿತದೀ || ಪೊಳವುತಂ
ತ್ರಿಭುವನಸುಂದರಿ । ಯಳುಗುರೂತ್ತಮನಿರ್ಪಉಪವನ । ದೊಳುಮೆ
ರಾಭವನಾಂತರದಿದೇಶಿಕನಸಾಮೀಪ್ಯಾ ||೩೩|| ವಾಸದೋಳ್ಕುಳ್ಳಿರ್ದ್ದವಾ
ಸುವಿ । ಲಾಸಿನಿಯುಸಖಿಯೊಡನೆತಂದಿ । ರ್ದ್ದಾಸಮಂಚಿತವೀಣೆಯಕರು
ಕುಶೇಶಯದಿಪಿಡಿಪೂ || ಲೇಸೆನೆಗವಸಣಿಗೆಯಸಡಲಿಸು । ತಾಸರೋ
ಜಸುಗಂಧಿಬಿಸಡೆಗ । ಳಾಸಮಸ್ತವನೊತ್ತಿಮೆಟ್ಟಲುಗಳೊಳುಸರಭಸ
ದೀ ||೩೪|| ಕೊರೆನಿಪಕರತುಪಗಳಿಂತಂ । ತ್ರೀರವವದೊಗೆಯಲ್ಕೆವಿಶಾಂ
ಟು । ತ್ತಾರಯಿವೃತೊಂಪೊಂದಜೊತೆಮೇಳವಿಸಿಶೃತಿಗಟ್ಟಿ || ಸಾರತರರ
ಚಿತಾತ್ರಕೆಂಥರ । ದಾರವಕೆಕರವಲ್ಲಕಿಯುದನಿ । ಮೇರೆಯಿಂರಮಣೀಯ
ವೃತಮಧ್ಯಮವಿಳಂಬಗಳಂ ||೩೫|| ತಾಳಿಮಂದರಮಧ್ಯತಾರರ। ವಾಳಿವ
ರೆಯುಲುಕಂಠತಂತ್ರೀ । ತಾಳಮಾನಕ್ರಮದಿಹಸ್ತಚಲನಚತುರತೆಯೊ
ಳೂ || ಗೌಳಭೈರವಿನಾಟಿತೋಡಿಯು । ಭೌಳಿಯುವಸಂತಂಸುಧೇಶಿ
ಯು । ಮಾಳವಂಕಲ್ಯಾಣಿಬಿಲಹರಿಲಲಿತೆಕನ್ನಡಗೌ ||೩೬|| ಳೀವರಾಳಿಧ
ನಾಸರಿಯುಪೂ । ರ್ವೀವರಸುಗುರ್ಜರಿಯುಬೇಗಡೆ । ದೇವಗಾಂಧಾರಿಯು
ಮುಖಾರಿಯುಆರಭಿಯುಮಧ್ಯ || ಮಾವತಿಯುರಾಮಕ್ರಿಯಾಮುಖ ।
ವಾವಿವಿಧರಾಗಂಗಳಿಂಪೆಸೆ । ವಾವಿಶೇಷದೆಕೊರಡುಗಳುಚಿಗುರುವ್ರೊ
ಲುಕಲ್ಲುಗಳು ||೩೭|| ಕರಗಿಹರಿಯಲುಚಿತ್ರಬೊಂಬೆಗ । ಳರಿದೆನುತೆತಲೆ
ದೂಗೆಮಾನಿನಿ । ಯರಶಿರೋಮಾಣಿಕ್ಯೆಯಾವೀಣೆಯನುನುಡಿಸುತಿರೇ ||
ವರಮನೊಳುಲಯುವಾದಮನವೆ । ಚ್ಚರಗೊಳಲುನಮಿಸುತ್ತೆಪೂಜಾ । ಪ
ರಿಕರವನಿಳುಹುತಲಿಶಾಂತೇಶ್ವರನಸಜ್ಜೆಯೊಳು ||೩೮|| ಪ್ರಮುದದಿಂದಿಡು
ವಾವಸರದೊಳು । ಪ್ರಮುದಷಟ್ಪದನಿಸ್ವನದೆತ । ತ್ಪ್ರಮದೆಯಪಮಣಿಪಾ
ಡುತಂಪ್ರೀತಿಯನುಪೆರ್ಚಿಸಲು || ಪ್ರಮದನಾಂತಕಮೂರ್ತಿಚಲನೋ ।
ದ್ಗಮನಭಾವದಿಕಂಡನಿದಿರಿನೊ । ಳಮಿತಸುಮನೋಜ್ಞತರಪೂರ್ಣಶ
ಶಾಂಕಕಾಂತಿಯುಳಾ ||೩೯|| ಮಿನುಪಮೋಘಭ್ರಮರಕರ್ಬುರೆವನುವಿಡಂ

ಭಿಪನೀಲಮಣಿಕಚೆ । ಕನುಗೊಳಿಸಿದಾಕುಸುಮದುದ್ಯನ್ಮಾಲಿಕೆಯುಗಂ
ಧ ॥ ವನಘನಾಘ್ರಾಣಿಸೆಮನದೊಳೆ । ಳ್ಳನಿತುಧೈರ್ಯವದಿಲ್ಲದಿರೆಕಾ । ಮನ
ಘಹೋದ್ರೇಕಾಬ್ಧಿಯೊಳುನೂಂಕುತಭಿಮಾನವನೂ ॥ ೬೦ ॥ ಸೆಳೆವ
ವಳಸರಸಿಜಶರನಕರ । ನಳಿನಕೀಲಿತಸನ್ಮಣಿಯಪು । ತ್ತಳಿಯೆನಿಸುವೆಳ್ಳ
ಜವ್ವನದಬಾಲೆಯುಳನೋಡಲ್ಕೆ ॥ ಅಳಿಗುಣಂನಿಜವೈರಿಯಂಪ್ಪ । ನ್ನಳಿ
ನವೊಳುನೆನೆಯುವನನೀಯೆಡೆ । ಯೊಳಗೆವೋಹದಬಲೆಯುಬೀಸುತೆಸೆಳ
ವೆನೆಂತೆಂದೂ ॥೬೧॥ ಅಸಮಕೌತೂಹಲನಿಬಿಡವೊ ! ನಸವಶಾತ್ಮಕ
ನಾಗಿಸವಿಯಿಂ । ದೆಸೆವಬಿಲ್ಲಿಗೆತಾವರೆಯಕೋಲೆಸಕದಿಂದಿಡುತೇ ॥ ಉ
ಸುರಿಡಲುಗೊಡದಂತೆನೀಟಾ । ಗಿಸಮವಲ್ಲದಿಷುವಪ್ರಾಕರವ । ಧಿಸಮ
ಧಿಗತದೆಶೆಳೆದುಬಿಡಲುಸಮುತ್ಕಟದವೋಹಂ ॥ ೬೨ ॥ ನಿಲ್ಲಿಸಲ್ವಶವಿಲ್ಲ
ದಿರೆಮುಹಿ । ತೋಲ್ಲಸದೆಸುಪುರಾತನರೊಳತಿ ।ಬಲ್ಲಿದರೆನಿಪಶರಣರಾಸಚ್ಚ
ರಿತೆಯಂಕೇಳಾ ॥ ಬಲ್ಲಕಿವಿಯೊಳುವಾರಿಜಾಕ್ಷಿಯ।ಸೊಲ್ಲನಾಲಿಸತೊಡಗಿ
ದಂಗುರು।ವಲ್ಲಭನುಚರವರ್ಯರಂವಿಶ್ವಾಸದಿಂಬಲಿಪೂ॥೬೩॥ ಸಂತತಾರ್ಚ
ನೆಗೈವಕರದಿಂ । ದಂತಿಗಮನೆಯಕುಚಗಳಂಪಿಡಿ । ವಂತುಭ್ರಾಂತಿಯ
ದುಳ್ಳವನುಮಾಗಿರ್ದ್ದಸರ್ಗ್ಗಿಬೊಳು ॥ ಅಂತುಮಲ್ಲದೆನೈಜಪಾಣಿತ । ಲಾಂ
ತರದೊಳಿಹಲಿಂಗವುಂಕಾಂ । ಬಂತೆಕಂಗಳನವಳಸೌಂದರ್ಯವನಿರೀಕ್ಷಿ
ಸಿದಂ ॥೬೪॥ ತ್ರಿವಿಧವೆನಿಸುವಸುಪ್ರಸಾದದ । ಸವಿಯುಗೊಂಬುವಜಿಂಹೆ
ಯಿಂದಾ । ಯುವತಿಯಧರಾಮೃತರಸವನಿಂಟಲ್ಕಪೇಕ್ಷಿಸಿದಂ ॥ ಶಿವನನಿ
ರ್ಮ್ಮಲ್ಯದಸುವಾಸನೆ । ಯೆವಿರತದಿಕೈಕೊಂಬುವಾಘ್ರಾ । ಣವುಚೆಲುವೆ
ಯುಸುರ್ಗಂಪನಾಘ್ರಾಣಿಸಲುಬಯಸಿತ್ತೂ ॥೬೫॥ ಇಂತುಪಂಚೇಂದ್ರಿ
ಯದವ್ಯವಹಾ । ರಂತನೂದರಿಯುಂಗಸಂಗದೊ । ಳಂತವಿಲ್ಲದಸುಂದರಕೆ
ಮ್ಮನವೆಳಸಿಕಳವಳದೀ ॥ ನಿಂತಿರುತೆಜಾತೀಶ್ವರಂಸವು । ಯಾಂತರದೆಕು
ಟ್ಲಾಲಕಿಯಮುಘು । ರಂತಳೆದಭೂಷಣವಕೇಳಲ್ಕಾಶೆಯಿಂವೋಹ ॥೬೬॥
ಪರವಶಾತ್ಮಕನಾಗಿನುಡಿದಂ । ತರುಣಿನೀನಾರೀಬನಕೆಬಂ। ದಿರುವೆಯೊ
ರ್ವಳುಕಾರಣವದೇನೆಂದುನುಡಿಯಲ್ಕೆ ॥ ಕರಿಗಮನೆಯಿಂತೆಂದುನುಡಿದ
ಳು । ಪರಮಧೇಸಿಕಸಾರ್ವಭೌವೋ । ದ್ಧರಣಶಕ್ತಿನಿಯುಕ್ತದೇವರಚೆ

ರಣಸನ್ನಿಧಿಗೇ ||೬೭|| ಧಾರುಣೀವರಮೌಳಿಕಳಪಲು | ಸಾರಿದೆನುಗು ರುಪಾದಕಮಲದು | ದಾಠನೇವೆಗೆಡೊಂಬರಪಡೆಗೊಡೆಯನೆನಿಸಿವುಹಿತ|| ಧೀರನಹಚಾಮುಯನವುಗಳವಿ | ಚಾರಿಸಲುಚನ್ನಾಯಿಪೆಸರದು | ಕಾ ರಣವೆವಿದ್ಯಾವಿಭವವೀಕ್ಷಿಸಿಕೃಪಾಮೃತದಾ ||೬೮|| ದೃಷ್ಟಿಯಿಂನೋಡು ತೆಕೃತಾರ್ಥವ | ರಿಷ್ಮಳಂವಾಡೆನಲುಕೇಳಿಯಥೇಷ್ಟವುಮತೆತನೂವಿ ಳಾಸಕೆಯವ್ವನದಘನತೆ || ದೃಷ್ಟಿಯಂಸೋಂಕಿದಕ್ಷಣದೆಘನ | ನಿ ಷ್ಟೆವಂತನೆನಿಪ್ಪಸನ್ಮುನಿ | ಶ್ರೇಷ್ಮನಾಗಳ್ಮದನರಾಗಾಂಕುರದೊಳಿಂತೆಂ ದಂ ||೬೯|| ತಳೆದಭವದೀಯನವಯವ್ವನ | ಲಲಿತಸೌಂದರ್ಯವುಮನಕಿ ಮಂ | ಗಳಸುಖವನಿತ್ತುದುಕುಸುಮಬಾಣನಬೆಡಗಿದೆನಲೂ || ತಳತಳನೆ ಪೊಳೆಯುತ್ತಲಿಹಕರ | ಗಳಕುಡಿಯಕೂರ್ಗೋಲಜಾಲಂ | ಗಳಿಗೆನೀನೆ ನ್ನದೆಯುಗುರಿಯಂಗೈದೆವೋಹಿನಿಯೇ ||೭೦|| ಕೀರವಾಣಿಯೆಎನ್ನವಾ ನಸ | ಸಾರಸವುಸಂಚಲಿಸತೊಡಗಿತ | ಪೂರವಾಗಿರುವೀಸ್ಥಿತಿಯುಬಚ್ಚಿ ಡುವದೇನಿನ್ನೊ || ವಾರಿಜಾಂಬಕಿನಿನ್ನೊಡನೆನಾಂ|ಶೇರಿಕಾಮಕ್ರೀಡೆಯ ಸಗುವ|ಕಾರಣಕೆಮದನಾಗ್ನಿಗೆನ್ನೆಂನೂಂಕದೋಲ್ಪ್ರೀತಿ||೭೧|| ಯಿಂದೆ ಚಂದಿರನಳಿಯನಾಟದ|ದಂದುಗದಿಗಾರವಿಸುಕಡುಮುದ ! ದಿಂಕರುಣವ ಪಡೆದುನೀಂಪ್ರಿಯಶಿಷ್ಯಶೀರ್ಷಮಣೀ || ಯಂದೆನಲ್ಸತ್ಕೀರ್ತಿಯಂಪಡೆ | ಯಿಂದುಮುಖಿಯತಿಶಯಮಹಾತ್ಮನು | ಮೆಂದುಸಂತೋಷದೊಳಂ ಮತ್ಕಾಂಕ್ಷೆಯನುತೀರಿಸಲೂ ||೭೨||ಭೂರಮಣಿಯೊಡಯರಶಿರೋವಣಿ ಯಾರಯಿದುಕಳುಹಿಪ್ಪನೆಲೆವೈ ! ಯ್ಯಾರಿವಾರಿಜಗಂಧಿನಿನ್ನಧರಾಮೃತ| ವನಿತ್ತೂ || ವೊರಸಂತಾಪಜ್ವರವಪರಿ | ಹಾರಿಸಲುನಾಂಬೇಡುವೆನೆನಲು| ನಾರಿಯಾಗಳ್ಬಂದಕಾರಿಯುವಾಯ್ತೆನುತೆವದನ ||೭೩|| ದೊಳುಮುಗು ಳ್ನಗೆದೋರುತಿರೆಹೃ ! ನ್ನಳಿನದೊಳುತಾನೂಹಿಸುತ್ತೆಂ| ದಳುನಿರಾಭಾ ರೈಕಶಿವಯೋಗೀಂದ್ರನೀನೆಂದೂ || ತಿಳಿದಿಹರುಧೀವರರುಗಳುಮಿ | ಬ ಳಕೆನುಡಿಗಳನಾಡುತಿರ್ಪುದು | ಒಳಿತೆನಿಮ್ಮಸಮಾನಮಾಹಾತ್ಮರುಗಳೀವಿ ಷಯ ||೭೪|| ದಾತುರಕೆಮನಸೋತುಸುಮಶರ | ಜಾತದುರ್ವೇದನೆಗೊ ಳಗಹುದು | ರೀತಿಯೋದುಷ್ಕಾಮಕಾಮನ್ಮುಖಾದಿಶತೃಗಳಾ || ಕಾತುರ

ಪಗಂಡಳಿವೃಕಮನೋ | ಜಾತಹಾನಾವಾಮೃತವನತಿ | ಪ್ರೀತಿಯಿಂಪೀ
ಋತ್ತತೃಪ್ತಿಯಪೆಂಪಿನಿಂದೆಸೆದೂ ||೭೫|| ಕರತಲಸ್ಥಿತಲಿಂಗಭಾವಾಂ |
ತರಸುದೀಕ್ಷಾಯುತರುಮಾರನೊ | ಳೆರಕಸೊಗವೆದೆಯಲ್ಲಿಬಯಸದೆರಾ
ಜಯೋಗಮುಪ || ತ್ತರಸುನಿಷ್ಠಾಯುಕ್ತರಾಗಿ | ರ್ವರಿಗೆಯೆಕಟಾಸಲ್ಲು
ವುದೆದು | ಸ್ವರದದುರ್ಮ್ಮೋಹಾತುರವಿದಿಂತೆಂದುನುಡಿಯಲ್ಕೆ ||೭೬||
ಖಿನ್ನನಾಗಿಮುಖಾರವಿಂದದ | ಚಿನ್ನನೀಗಿದಚಿನ್ನೆಯಿಂದೆಲೆ | ಚನ್ನನಾ
ಯಕಿಯೆನ್ನನೀವಿಧದಿಂವಿಡಂಬಿಸುವಾ || ದಿನ್ನುಒಳಿತೇಬಹುಪ್ರಕಾರದ|
ಭಿನ್ನವಚನಗಳಾಡುತೆನ್ನನು | ಮನ್ನಿಸದೆಪೋಗುವುದಿದುವೆಸದ್ಧರ್ಮ್ಮವೆನಿ
ಸುವುದೇ ||೭೭|| ಸೊಗಸೆನಿಪನಿನ್ನಯಕುಚಾಗ್ರದ | ಬಿಗುಪನೆನ್ನೆದೆ
ಗೊತ್ತಿತಕ್ಕೆಯೊ|ಳಗೆಮುದದೊಳಪ್ಪುತ್ತೆಯಾದರಿಸಲ್ಕಿಡುವೆಸಮಯಂ||
ಜಗದೊಳಗೆನಂಬೆಣ್ಣವೊದಲಾ | ದಗಣಿತರವೋಹಪ್ರವೃತ್ತಿಯು |
ಮಿಗಿಲೆನಿಸಲಂತವರಪೂಜ್ಯತೆಕೊರತೆಯಾಯಿತ್ತೆ ||೭೮|| ಅವರಿಗಿಂದಲ
ಧಿಕನೆಚಾತು | ರ್ಯವನೆಪ್ರಕಟಿಪೆಮಾತುಗಳವೇ | ಕವೆಗಡದಿಪ್ರೂಬಿಲ್ಲನಾ
ಟದೊಳಾದರಿಸುಬಾಲೇ || ಯವಿರತದೊಳೆಂದೆನಲುಹಸ್ತಯು | ಗವನೆ
ಜೋಡಿಸಿವಿನಯವಿಂದಾ | ಯುವತಿಯಂದಳುಗುರುವೆತಾವಕದೇಹಸ್ಪ
ರ್ಶನದಿಂ ||೭೯|| ಧನ್ಯಳಾಗುವೆನಿಮ್ಮತುಳಸೌ | ಜನ್ಯವಪ್ಪತಪೋಗರಿ
ಷ್ಟದ | ಮಾನ್ಯವಿಷಯದೊಳಿಂದುಸಾಧ್ವಸಯುಕ್ತಳಾಗಿಹೆನೂ || ಅನ್ಯ
ಳೇನಾಂನಿಮ್ಮಡಿಯಡಿಯು | ಮನ್ಯುನಾಶಂಗೈವನಿಜಚೈ | ತನ್ಯವೈಸೆಭ
ವೆನ್ಮನೋರಥವೆನ್ನಸೌಭಾಗ್ಯಂ ||೮೦|| ಎನಲುಕರ್ಣರಸಾಯನದವೋ
ಳ್ಪನಮಹಾತ್ಮರಶೃತಿಯುಗಕೆಮಿಗಿ | ಲಿನಿದೆನಿಸೆದೇಶಿಕವರೇಣ್ಯಂತಾನು
ಬಯಸಿರ್ಪ || ಮನದಪೇಕ್ಷೆಯುಕಯ್ಯಸಾರಿ | ತ್ತೆನುತೆವನಿತಾಮಣಿ
ಯೆಭೋಗ | ಕ್ಕನುವಿನಿಂಸಂಭ್ರಮಿಪಸಮಯವನೀಕ್ಷಿಪನಿತರೊಳೂ
||೮೧|| ವಾರಿಜಾಪ್ತಮೃಗೇಂದ್ರನಾಗಬ | ಲಾರಿದಿಗ್ಗಿರಿಯಿಂಗವಿಸಿದೈ |
ತ್ಯಾರಿಪದವಿಪಿನಸ್ಥದಿನನಾಮಕವಮದೇಭವಸಂ || ಹಾರಿಸಲುಬೆನ್ನಂಟಿಬ
ರಲಸು | ಸಾರಮುದಯುತಸತ್ವದಿಂದಂ | ವಾರುಣಾಚಲತಟವಸೇರಿರಲಾ
ಸಮಯಸಂಧ್ಯಾ ||೮೨|| ವ್ಯಕ್ತರಾಗವಿಶೇಷವೆಂತೆನೆ | ರಕ್ತಸಕ್ತಾರು

ಣಶರೀರನಿ । ಯುಕ್ತಮಪ್ಪಂಗೈದಂತೆತೋರ್ದುದುಗಿರಿಯುಮರೆಗೊಂಡೂ॥ ಪ್ರಾಕ್ತನುಳ್ಳುವಿಯೆಡಗುತಲವರ । ದಿಕ್ತಟಾಬ್ಧಿಯೊಳಾಳಿತವನಂ । ಯುಕ್ತವಾಗಿಹಚಕ್ರವಾಕಗಳಗಲಿದುಃಖವನೂ ॥ ೪೩ ॥

ಪೊಂದಿದವುಮೇಣ್ವರುಣರಾಜನ । ಸುಂದರಿಯುಕಂಡಾತ್ಮವಲ್ಲಭ । ನಂದಕಾಲದೆತನ್ನಕೂಡಲ್ಕೆಳಸೆಸೈರಿಸದೇ ॥ ದಂದುಗವಿದೇನೆಂದುರಕ್ತಾ । ಮಂದನೇತ್ರದಿನೋಡುವಳೊಯಂ । ಬಂದಮೆನಲೂಹಿಪ್ಪುದುಸಂಜೆಯ ಗೆಂಪನೋಡಿಜನಂ ॥೪೪॥ ಆಸಕಾಲದವಾಂತ್ರಿಕಂಸುವಿ । ಲಾಸಪಾಂಥರವಾರಣಕೆರಾ । ತ್ರೀಸಮುದ್ಗಮಶಕ್ತಿಯುಂನಿರ್ಮಿಸಿಚರಮಗಿರಿಯಂ ॥ ಬಾಸಮುಂಚಿತಕುಂಡದೊಳುಸಂ । ಧ್ಯಾಸಮುಖುವನ್ಹಿಯನಿಡುತೆತ । ದ್ವಾಸರಾಧಿಪನಂಶುನಿಕರದೆಹೋಮದದ್ರವ್ಯಗಳಂ ॥೪೫॥ ಹಾಕೆಸಿತಿಭೂಮನವದುದಿಸೆಗಳೊ । ಳೇಕವಾಗಿಯೆತುಂಬಲತಿಸು । ಶ್ರೀಕರಾರವವೆಲೆಡೆಯೊಳೊಪ್ಪಿದವದೇಂಪೊಗಳ್ವೇಂ ॥ ಪ್ರಾಕಟತತನುವೆಂಬಗಜಕಸ ॥ ವಾಕಲಿತನಭನೀಲಪಟ್ಟಮು । ಪೈಕೆತರಪಟಭೋಗಚಿತ್ರತವಿವಿಧತರ ಕುಸುಮಾ ॥೪೬॥ ನೀಕವ್ರೋಎಂಬಂತೆದಿಕ್ತತಿ । ಲೋಕದೊಳುಮಿಗೆ ಕಾಂತಿಪಸರಿಸೆ । ನಾಕಿಪಥದೊಳುತಾರೆಗಳುನೆರೆತೋರಲಾಕ್ಷಣದೀ॥ಭೀಕರದೆಸತ್ವಾವಳಿಯನು । ದ್ರೇಕವಿವಶರಮಾಡಿಬ್ರಂಹಾಂ । ಡಾಕಟಾಹದೆಮಬ್ಬುಎಡವಿಡದಂತೆವ್ಯಾಪಿಸಲೂ ॥೪೭॥ ಖ್ಯಾತಶಿಖರಿಯಸಂಗತದಿದವ । ವೀತಿಹೋತ್ರಾರತಿಗಳಚಕೋ । ರೀತತಿಸುವಾಸಿನಿಯುರುಗಳು ಸ್ವಪತ್ರಪಾತ್ರದೊಳಾ ॥ ನೀತಬುಭುಕ್ಷದಶಾಸೆಯಿಡಲತಿ । ಪ್ರೀತಿಯಿಂರಾತ್ರೀವಧುವಜಲ । ಜಾತಕರಮಂಪಿಡಿಡುಕರಿಯಾರೋಹಣನುಮೆನಿಸಿ ॥೪೮॥ ಯಿರ್ಪವ್ರೋಲುದಯಾದ್ರಿಯಿಂದಂ । ಬರ್ಪಶಶಿಕಂಗಳಿಗೆಕಾಣಿಸಲಾರ್ಪಲಾಕ್ಷಣದಲ್ಲಿಕುವಲಯುವರಳಿಕಲನಾದಂ ॥ ದೋರ್ಪಳಿಕುಳಂಕಮಲಗೇಹದೊ ! ಳಿರ್ಪವಿರೆಪತ್ರರಥತತಿನಡೆ । ತರ್ಪುದದುನಿಜನೀಡದೊಳುಸುಖನಿದ್ರೆಯಂಗೈಯ್ಯೆ ॥೪೯॥ ಇಂದುಜನನದೊಳುದಧಿಘೋಷವ । ಮುಂದದಿಂಭೋರ್ಗರೆವುತಿರಲುಮು । ಕುಂದತನಯಂಮುತ್ಸಹಿತನಾಗಿರಲುಚಕ್ರಗಳೂ ॥ ಹೊಂದಿದಾಜೊತೆಯಗಲಿಚರಿಸಿದ । ವೆಂದುವಿಧುಕಾಂ

ತೆಗಳುಬಹುಸಿತ ! ಬೃಂದವಾಗಿಯೆ ಕರಗಿಹರಿದವುಸ್ಮರನದೋರ್ಗ್ಗಲದಿ ||೯೦|| ಓಸುಬಾಣಗಳಬ್ಜಪದವಿ | ನ್ಯಾಸದಿಂಕಡುವೇದನೆಯುವಾ | ಳ್ವಾಸಮಯಕಾತುರದಿವಾಸವರತ್ನವೇಣಿಯನು.|| ಲ್ಲಾಸದಿಂಕರಕಮಲವಿಡಿದುವಿ | ಲಾಸಘನಸಮಯುಕ್ತಕಲ್ಪಾ | ವಾಸದೇಶಕಕೆಸೆಳೆದನಾಗುರುವರನುಮುದದಿಂದೇ ||೯೧|| ಸರಸಸಲ್ಲಾಪದಿನಖಕ್ಷತ | ವೆರಸುತನುರಾಗಾಳ್ಪತಾಂಬೂ | ಲರಸಲಿಪ್ತೋಷ್ಠಾಮೃತವಪೀರುತ್ತೆಗಾಢಸುದೋ || ರ್ಭರಿತದಾಲಿಂಗನದೆಚುಂಬನ |. ಪರಿಕರಗಳಿಂರಂಜಿಸುವರತಿ | ವರನಸಂಗರಕೇಳಿರಸವಾರ್ಧಿಯೊಳುನುಳುಗಾಡೀ || ೯೨ || ಮಲಯುಶೈಲಸ್ಪರ್ಶನಾಂಕುರ | ಕುಲಸುಖದಿತನುವೆಂಮರೆವುತಿರೆ | ಕೆಲವುಕಾಲಂಸುಪ್ತಿಯಂ ಪೊಂದಿರಲುಬೆಳಗಾಗೇ || ಲಲನೆಯಾಗುರುವರನನೆಬ್ಬಿಸಿ | ಯಲಘುಸನ್ಮಹಿಮಾಢ್ಯಭವದೀ | ಯಲಲಿತಸುಕಾರುಣ್ಯವೀಕ್ಷಣಸಂಗತದಿಧನ್ಯ| ||೯೩|| ಳಾಗಿಹೆನುಸಂದೇಹವಿಲ್ಲವು | ಪೋಗುವೆನುನಮ್ಮವರಬಳಿಗೆಯ | ದಾಗ್ಗಿಯಪ್ಪಣೆಗುಡಲುಬೆಳಗಾಗುವುದಕಾಂಮುನ್ನಂ ! ಸಾಗುವೆನುನೋಡಿದೊಡೆಕೋಪಿತ | ನಾಗುವಂಕ್ಷಿತಿಪತಿಯುಲಾಘವ | ವಾಗುವುದುನಿಮಗೆನಲುಗುರುವರನೆಂದನವಳೊಡನೇ || ೯೪ || ಘನನಿಭವ್ರಭವೇಣಿತ್ರುಟಿಯಂ | ಬನಿತುಕಾಲವಗಲ್ದುನಿನ್ನಂ | ಮನವುನಿಲ್ಲುವುದೆಂತುವಿರಹಾನಲನತಾಪದೊಳೂ || ಇನಿತುದಯರಹಿತೆಯೊಲುನೂಂಕಲು | ನಿನಗೆಧರ್ಮವೆಎನ್ನನೀಂಬಿ ! ಟ್ಟನುನಯುದಿಪೋಗಲ್ಕೆಚರಣಗಳೆಂತುಬರುತಿಹವು ||೯೫|| ನೆವವಿಡಿದುಈಗೆನ್ನಸದ್ಭಾ | ಗ್ಯವದುನಿನ್ನಂಶೆಳೆದುತಂದಿತು | ಕುವಲಯಾಧಿಪನೋಡಿದೊಡದೆಂತೆಂಬಸಾಧ್ವಸವು || ಯುವತಿಯೇನಿನಗೇತಕಾನರು | ಹುವೆನೆನಲುಸದ್ಗುರುವೆನಿಮ್ಮಯ | ಸುವಚನಂನಿಜವೈಸೆರವಿಯುಧಯಿಸದಮುನ್ನಮಿಳಾ ||೯೬|| ರಮಣನಂಕಾಣಲ್ಕೆಪೋಗುವ | ಪ್ರಮುದದಿಂದೆಮ್ಮವರಿಹರುಈ | ಸಮಯದೊಳುಕಳುಹಿದೊಡೆಪೋಗಿನೃಪಾಲನಿಂದಧಿಕ || ಸಮುಚಿತದಸಂಭಾವನೆಳಗಂ | ಕ್ರಮದಿಪೊಂದುತಲೊಡನೆಬರುವೆನು | ವಿಮತಿಯಿಂಪೋಗದಿರೆತಂಡೆಯುಭಾವದೊಳುಬೀರೆ ||೯೭|| ಪದ್ಧತಿಯನೂಹಿಸುವನಾಜ್ಞಾ | ಬದ್ಧಳಾಗಿಹೆವೆ

ಥಕ್ಕೆಯುವರ್ಗ್ಗವಿ । ಶುದ್ಧವಾಗದತೆರದೊಳಪ್ಪಣೆಯಿತ್ತುಕಳುಹುವುದು || ಸಿ
ದ್ಧವಿಪುಎನಲೊಡನೆದೇಶಿಕ । ಸುದ್ಧತದಿಕಮುಲಾಕ್ಷಿಯೇನಿಂ । ತದ್ಧರಾ
ಧಿಪನೆಡೆಗೆಪ್ರೋಪುದುದ್ರವ್ಯದಾಶೆಗಲಾ ||೯೮|| ಬೇಕನಿತುಭೇಡಿವಿಕೆೞ
ಳುಕಡು । ಜ್ಞೋಕೆಯಿಂಜ್ಯೆತಿರ್ದನೆನುತಅ । ನೇಕಕಾಂಚನಮಣಿವಿಭೂ
ಷಣವಸ್ತ್ರಸಂತತಿಯುಂ || ಸಾಕೆನುವತೆರದಿಂಪಸಂಖ್ಯೆವ । ನಾಕಮುಲಪ
ಳನೇತ್ರಗೀಯೆಮು । ಹೈಕಸಂಭ್ರಮದಿಂದೆಕೊಂಡುವಿನಯದಿನಮಿಸು
ತ್ತಂ ||೯೯|| ಎನ್ನತಾಯಿಯ್ಯುಹಡೆದವೊಲಿಂ । ದುನ್ನತಪ್ರೀತಿಯೊಳು
ಕಾಂಬಳು । ಮನ್ನಿಸುವನೆನ್ನಯ್ಯನೆನ್ನಂನಿಮುಷವೆಡೆಬಿಡದೇ || ಅನ್ನ
ವುಣುವುದದೊಂವೆತಳಿಗೆಯೊ । ಳೆನ್ನಕೈಯಿಂತೋರತುತ್ತುಗ । ಳನ್ನು
ನಾಡಿಸಿಕೊಂಡುದಿನದಿನಮುಂಬನಂತಾಗೀ ||೧೦೦|| ಹೊತ್ತರೆಯುಸಮು
ಯುದೊಳುತಂಗಳ । ಬುತ್ತಿಯರೆಯುಂಡಿರ್ಪಬರುವಳೆ । ನುತ್ತಿದಿಸನೋ
ಡುತ್ತಿಹನುಹೆತ್ತಯ್ಯನಲ್ಲದಲೇ || ನಿತ್ಯಮುಂಬುವಹೊತ್ತುಮಿಾರಿತು । ಮ
ತ್ತಶೀಘ್ರದೆಬರುವೆನಾಣತಿ । ಯಿತ್ತುಕಳುಹೆನಲಾಪವರಿಯಿಂಪ್ರೇಲಗಭೀ
ಕೆಂಬ್ಜಾ ||೧೦೧|| ಕಾಮುವಮುಸಂಜನಿಸಿಸುದುಕೇಳ್ । ಕಾಮಿನೀಮಣಿ
ಕೇಳುಬೇಗದೊ । ಳೇಮುಣಿಬಾನೀನುಬರ್ಪನ್ನೆಗನುಪೇನುಮುನಂ ||
ಕಾಮಿಸಮುನ್ಹೈರ್ಯದಿನಿಲಗೊಡದು । ಕೋಮಲಾಂಗಿಯೆಎನುತಲೋಚ
ನ । ಸೀಮೆಯಿಂಬಾಷ್ಪಗಳಬಿಂದುಸಮೂಹಮುಂಉರಿದೂ ||೧೦೨|| ಘ
ಟಕುಚಂಗಳವುರದೊಳಾನಲು । ಜಟಿಲನಾಲಿಂಗನೆಯುನೆನೆಗುತೆ । ಕುಟಿ
ಲಕುಂತಳೆಗಪ್ಪಣೆಯಡುಡಲತಿಕಾತುಕದಿಂದೇ || ಸ್ಫುಟಸುಖಿಪ್ರುಮುಸಂ
ಭಿಭೋಷ್ಟ್ಯೆಯು । ತ್ರುಟಿಯೊಳಲ್ಲಿಂತೆರಳಿಮುನದೊಳು । ಪಟುಮುದನ್ವಿತ
ಳಾಗಿಶೀಘ್ರದೆವಡೆದವರಸೇರಿ ||೧೦೩|| ಪ್ರೋಡುಬಾದ್ಯಂತಪನುಕ್ರಮು
ಥಿಂ । ದಾದುಪಂತಮ್ಮವರ್ಗ್ಗತಿಳುಹಿಮು । ಕಾಡುಯುವಿಸಮ್ಗಿರ್ವಮಲೋಕ್ಷಿ
ಸುಮಿತ್ತವಸ್ತ್ರಗಳೆಂ || ಸಾಧಿಸಿಯಿತಂದಬರುವಭೂಷಣ । ಪಾಡಿನಾಗ
ಹವಸ್ತುಗಳಸಂ। ವೋಡದಿಂಚಾಮುಗ್ಗಸೆಂಬಸೆತಂದೆಗೀಯಲ್ಕೆ ||೧೦೪||
ಅಚ್ಚರಿಯುಗೊಂಡಪಮುಮುವಳಂ । ಮೆಚ್ಚಿಕೊಂಡಾಡುತ್ತೆಮಾತೆಯು ।
ಹೆಚ್ಚಿಲುಸ್ತೊತ್ತುಪ್ಪ ಮಾನಸಸಾಗರಮುಮುದಿರೊಳು || ಮೆಚ್ಚಿ ಸದಮಾ

ಪೇಳಹದಿತ್ರಿಜಸ | ಮುಚ್ಚಯಂಬರುತಿರ್ಪುದೆನೆಮಿಗ | ವಚ್ಚಸತಿಭಯ
ದಿಂದೆಪೊಕ್ಕಪಂಪಕ್ಷಮಾಚಲದಾ ||೧೦೫|| ದುರ್ಗಸೀಮೆಗೆಜಲಜಸಖನನ್ನಿ
ರರ್ಗಳಾಜ್ಞಾಕಾರ್ಯದೋಳ್ಸಂ | ಸರ್ಗನಾಗಿಹಸೂತನುರೆನವಸೈನ್ಯಪಗೆ
ಜೆಳಗಂ || ಪೇರ್ಗರೆಯುವಂತುಸುರಲಾಗಳ್ | ಭಾರ್ಗವಿಯಸಹಜಾತನ
ದ್ಯುತಿ | ನಿರ್ಗಮಿಸೆಜಗಜಗಿಸಿಬೆಳಗುತಲಾಪ್ರಭಾತದೊಳೂ || ೧೦೬ ||
ಬೇಗಜಾಮದಚುಕ್ಕಿಮೂಡಿತು | ಸಾಗರಾತ್ಮಜಗೆಣೆಯನಲಾಸೆ | ದ್ವಾ
ಸದಿಂಕರ್ಮೈಕಸಾಕ್ಷಿಯುಬಂದಕರ್ಮಗಳಂ || ಈಗನಿಷ್ಠೆಯೊಳೆಸಗಿರಿವಿ
ಮುಖ | ರಾಗನಿರಿಸಂಧ್ಯೆಯದುನಿದ್ರೆಯೊ | ಳಾಗುವುದುವಿಧಿಯಲ್ಲು
ಭೂಸುರವರರುಗಳೆನಿಳೀ ||೧೦೭|| ಎನುತೆಬೋಧಿಪತೆರದಿಕೋಕೋ
ಎನಲುವೇಣ್ಚರಣಾಯುಧಂಗಳು | ಅನುನಯದಿಕೂಗಿದವುಕಾಲವನ
ರಿದಕಾರಣದೀ || ಇನಿತಿನಿತುಬೆಳಗಾಯ್ತುದಿಶೆಯೊಳು | ಘನತಮವುಬಿ
ಚ್ಚಿತ್ತುಅಂಡಜ| ನಿನದವಡುಪೆಚ್ಚಿತ್ತುಪನ್ನಗಚಯವುಪುತ್ತಗಳಂ||೧೦೮||
ಪೊಕ್ಕಿರಲುಕೈರವಪ್ರಕಾಶವು | ಸುಕ್ಕಿರಲುಕೋಕಂಗಳುಂಮನ | ದಕ್ಕ
ರದಿಮಿಕ್ಕಿರಲುಮದನಂಕುಸುಮಚಾಪವನು || ಇಕ್ಕಿರತಿಹಸ್ತದೊಳುಹ
ರ್ಷವ | ದುಕ್ಕಲಾಯರವಿಂದಸುಮಗಳು | ಚಕ್ಕನೇಬಿಚ್ಚಿದವುಸೂ
ರ್ಯೋದಯದಕಾಲದೊಳೂ || ೧೦೯ || ಕುಂದದಂಧಕರಿಪುವಹುಪರಿಂ
ಸಂದಿರುವಕವುಲಾಪ್ತತೆಯೊಳುವು | ಮಂದಜನವಿನುತತ್ರಯಿಾತನುಸಂ
ಗತನುಘಾಗೀ || ಎಂದುದಿವಿಯೊಳ್ಸಂಚರಿಸುವುದ | ರಿಂದೆಕುವಲಯ
ಪ್ರೀತಿಕಾರಣ | ದಿಂದೆಸಹಜದಿಚಿತ್ರಭಾನುಖ್ಯಾತಿನಾಮದೊಳೂ ||೧೧೦||
ಬಲುಪಲಾಶಿಗಳೂರ್ಜಿತವಶ್ಯ | ಥಿಲತೆಯಂಗೊಳಿಸುವುದರಿಂಮೇಣ್
ಸಲಲಿತದೆತಾರಕಸುತೇಜೋಹರಣನೆನಿಪುದರಿಂ || ಮಲಹರನುಮಾಧವ
ನುವಿಧಿನೀ | ನಲಘುವಜ್ರಿಯುನೀನೆಚಂದ್ರಾ | ನಲನುವಾಯುವುನೀನೆ
ಗುಹನುಂನೀನೆನುತೆಸಕಲ ||೧೧೧|| ಜನರುಭಕ್ತಿನಿಯುಕ್ತರಾಗುತೆ
ವಿನಮಿಸಲ್ಪ್ರಾಗ್ದಿಶೆಯಶೈಲದೊ | ಳಿನನುದಯಿಸಲ್ಮಿಚ್ಚುಮುಂಚೆನ್ನಾ
ಥಿತಾಂವಾಳ್ಪ || ಅನುವಿನಿಂಕಾರ್ಯಗಳತೀರಿಸಿ | ಜನಪನೆಡೆಗಾಗಮಿಸೆ
ಲೋಸುಗ|ಜನಕನಾಣತಿಗೊಂಡುಕಡುಸಡಗರದೊಳ್ಹಾಯುಪತೀ||೧೧೨||

ಘಾದಕಟಿಹಸ್ತಗಳಘಾಲಶಿ | ರೋದರದೊಳಾಪನ್ನಗಕಟಕ |ಮೇಪುರೇ
ಭಾಜಿನತ್ರಿಶೂಲವಿಷಾನಲಜಟಾಳೀ || ಯಾದವುಗಳನದೊಂದೆಸೆಯೊಳ್ತೋ
ವಿ | ನೋಡದಿಂದೊಪ್ಪಿರಲುಸಹಜಗ | ಳಾಧನಸಕಲಾಲಂಕರಣಗಳನೂ
ರ್ಜಿತದೊಳೊಂದೂ ||೧೧೩|| ಭಾಗದೊಳುಪೊಸತೆನಿಸುವೊಲುಸುಷ್ಮು |
ಮಾಗರಿಷ್ಠವಿಳಾಸದಿಂವಿ | ದ್ಯಾಗುರುತ್ವದೊಳರ್ಧನಾರೀಶ್ವರಸುವೇಷ
ವನೂ || ಬೇಗದಿಂತಳೆದಾಪ್ತಜನಸಂ | ಯೋಗದಿಂವಿಭವದಬುಧಾಶ್ಚ |
ರ್ಯಾಗತವಿಶೇಷದೊಳುಧರಣೀಶ್ವರಸಭಾಂಗಣವಂ ||೧೧೪|| ಸೇರುತಿಶ್ರೋ
ಡನೆಯಿಪ್ಪಕಳಮುರಜಕ | ನಾರವಿತತಾಳಂಗಳೆನೆಯುಲು | ವಾರಿಜಾಕ್ಷಿ
ಬಕಿನಿಂದಿರಲ್ಕಾಮೊದಲೆಗುರುವರನಾ || ಚಾರುಪದದರ್ಶನಕ್ಕೃತವ್ರತ |
ಧೀರನನುಪಮಸಿಹ್ಮಪೀಠವ | ಸಾರತರವೈಭವಪೊಳೇರಿರಲಾಸಮಯ್ಯ
ದೊಳಗೇ ||೧೧೫|| ತ್ವರಿತದಿಂನೋಡುತ್ತೆನಿಜಕರ | ಸರಸಿಜಗಳಂಮು
ಗಿದುಗಾರೀ | ಶ್ವರನೆನುವಸದ್ಭಾವವಪುಮನದೊಳಗೆವರ್ಧಿಸಲೂ || ಪರ
ಮಭಕ್ತಿಯೊಳಾಮಹೀಶ್ವರ | ವರನುಸಾಂಬಾಕೃತಿಯತಾಳ್ದದ | ಸರಸಿ
ಜಾಕ್ಷಿಯಚತುರತೆಗೆಮುದವಾಂತುಬಲುಮೆಚ್ಚಿ ||೧೧೬|| ಅಸಮವಸ್ತು
ವಿಭೂಷಣಾಂಬರ | ವಿಸರವಾಹನವೀಯ್ಯೆಕೈಕೊಂ | ಡೆಸಕದಿಂಮಹಿ
ಬೊಡೆಯನನುಮತಿಗೊಂಡುಬರುತಾಗ || ವಸುಧೆಯೊಳಗಾರೀವಿಧದಿ
ಮ | ನ್ನಿಸುತಲೀಪ್ಸಿತವೀವರೆನುತಂ ! ಹಸಿತಮುಖದಿಂದಾತ್ಮದೊಳಗಾ
ಶ್ಚರ್ಯದಿಂತಿಪುಗೀ ||೧೧೭||ಎಲ್ಲರೊಡಗೂಡುತ್ತೆತಾಯಿಳಿ | ದಲ್ಲಿಗಾಗಳೆ
ಬಂದುಮೋಹದೋ | ತ್ಫುಲ್ಲಮಾನಸಪುಂಡರೀಕಪುಮಾಗಿರಲ್ಕತ್ತಂ || ಬಲ್ಲಿ
ದನುಮೆನಿಸಿಪ್ಪಯತಿಗಳ | ವಲ್ಲಭಂತನ್ನಂಸುಮೋಹದ | ವಲ್ಲಿಯಿಂಬಂ
ಧಿಸಿಸತಿಯುಪ್ರೋದಾಮೊದಲುಗೊಂಡೂ ||೧೧೮|| ಅತುಲಮೋಹಿತನಾ
ಗಿಬೇಗನೆ | ಸತಿಯುಬರುವೆನೆನುತ್ತಪ್ರೋದಳು | ಮತಿಯೊಳೆನ್ನಂನೆನೆ
ಯದಿರ್ದಳೇನೊದೌರ್ಭಾಗ್ಯ || ಯುತನುನಾನಿನ್ನೇವೆಕಾಮನ | ಹತಿ
ಯುಸೈರಿಸಲೆಂತುಹಾವ | ಸ್ಸ್ರತೆಸಮಾಕ್ರಮಿಸಿಪ್ಪಮೋಹಮಶಾಂಧಕಾರ
ದೊಳೂ ||೧೧೯|| ಕೊಂಬೆಮೇಲ್ತಳಿರುಗಳಕಚ್ಚು | ತ್ತುಂಬಮುದದಿಂ
ಕೂಗೆಕೋಗಿಲೆ | ಯಂಬುಜಾಕ್ಷಿಯ ... ಂತಿಯೆ

ಳೂ || ಅಂಬುಜಾಕರದೆಡೆಯೊಳಂಸಕ | ದಂಬವನುಬರೆನೋಡಿಪುಳಿನಸ್ಥ
ತಂಜೆಯುರಮಣಿಬಂಡಳೆಂದಾಲಿಂಗಿಸಲ್ಪೋಪಂ ||೧೨೦|| ಸುಮಸುಗು
ಚ್ಛಗಳಲ್ಲಿಮುಪದಯೊ | ಗ್ಭ್ರಮರಗಳುರೋಂಕರಿಸಲತಿಶಯ | ಪಮಳಪ
ಲ್ಲಕಿಯಂನುಡಿಪಳೆನುತುಬ್ಬಿಕೇಳುವನು || ಸಮಧುಮಲಯಜಮಾರುತಂ
ದೇ | ಹಮನೆಸೋಂಕಲುಸತಿಯತನುವಿನ | ಘನಪರಿಮಳವಿದೆಂದುಸಂತ
ಸವಡುವನಾತ್ಮದೊಳೂ ||೧೨೧|| ಮೀನಕೇತನಹಸ್ತವಿನ್ಯ | ಸ್ತಾನುಪ
ಮಸುಮನಃಕಲಂಬವಿ | ತಾನಮಾಪತಮಿತ್ರಕೀಲಸ್ತೋಮಹತಿಕೃಳ್ಳ||
ದೀನತಾತ್ಮೀಯಾಂತರಹೃದಯ | ನೀನಿಮಿತ್ತದೆಕಳಳವಳಿಸಿಮ | ತ್ತೇನ
ತೋರದೆಕುಂದಿಕಡೆಗಣ್ಣುಗಳೊಳಶ್ರುಗಳಂ ||೧೨೨|| ಅತಿಶಯದಿತಪರ್ವಿ
ಸಹಿಸದಿಹ-| ಗತಿಗೆತಹತಹವೈದುತಂರತಿ | ಪತಿಯಿನಿಪನಂದೂರುವಂ
ಸಖಿಬಾರೆನುತೆನಿಂತೂ || ಸತಿಯುಳೀಎನ್ನುತ್ತಮೇಣ್ವಿ | ಸ್ಮೃತಿಯೊಡ
ನೆಮಿಗೆಪ್ಪಥೆಯೊಳುಂಸಿ | ಕ್ಕಿತನುವೆಲ್ಲಂಸುಕ್ಕಿಕೈಯಿಂಹಣೆಯುಜೊತು
ಕೊಳುವಂ ||೧೨೩|| ಈಪರಿಯುವೇದನೆಯೊಡನೆಸಂ-| ತಾಪಿಸುತೆಸರಿ
ದೀನಭೂಪನೊ | ಳಾಪರಪುಗುರುವರನುನಿಂದಿಪನತಿಶಯವ್ಯಥೆಯಿಂ|| ಪಾ
ಪಿಮದನನೆಪರಭೃತನೆರಾ | ತ್ರೀಪತಿಯೆಮಲಯಾನಿಲನೆಕ್ಷೀ | ರಾಪಗಳ
ಜೇರ್ವಡಿಪಹಂಸನೆನೋಯಿಸಲ್ಬಹುದೇ ||೧೨೪|| ಹೊಸಮುದ್ಧತಫಾಲ
ಲೋಚನ | ಹಾಸವುಜ್ವಲಶಶಿವಿಭೂಷಣ | ಹಾಸುವೈದೇಹೀರಮಣ
ಸಂಸೇವಿತಪದಾಬ್ಜ || ಹಾಶಿವಾನ್ವಿತದೇಹಶರಪ | ನಿಭಾಸಮಂಚಿತನೀಲ
ಘುಚಿಗ್ರೀ | ವಾಸದಾಮಾಂಪಾಹಿಎನುತಂಹರನಪೆಸಗೊಳುವಂ ||೧೨೫
ತಾಪಸಂಸ್ಮರತಾಪಬಾಧಾ | ರೂಪಸಂತತಿಗಳ್ಗಸೈರಿಸ | ದೇಪಯೋಜಾ
ತಾಕ್ಷಿಯೊಳುಮಿಗೆನಟ್ಟಿರುವಮತಿಯಾ || ಚಾಪಲತೆಯಿಂದನ್ನಪಾನಂ |
ತೋಪವಾಗಿಯೆಕಷ್ಟದಿಂಪಗ | ಲೀಪರಿಯುಕಳೆಯಲ್ಕೆರವಿಯುಸ್ತಾಚಲ
ವಸಾದರ್ಪಂ ||೧೨೬|| ಘೋರತಮವಡುನಾಲ್ದಿಶೆಗಳಂ | ಸಾರೆಪೆರ್ಚಿತುನೀ
ಡಜರವಂ | ಜಾರಚೋರಸಮೂಹಸಂಚಾರವದ್ಯುಸಲೆಮೀರೆ || ಮಾರನು
ರೆವಿರಹಿಗಳನೊಯ್ಸಲು | ಘೋರಪರಿವಾರಾನ್ವಿತಂಪ | ಧೀರತನದಿಂಕೆರ
ಳ್ದುಗುರುಹೃದಯಕೆನಿಜಾಸ್ತ್ರಗಳಂ ||೧೨೭|| ಮುತ್ತಲೆತ್ತಲುತತ್ತರದಿ

ನಡೆ। ಗುತ್ತೆಹತ್ತಿದವುತ್ತಿನಿಂದಾ। ಬಿತ್ತರಿಯನೋಡುವತಪಕವದುಚಿತ್ತದೊಳಗೊತ್ತಿ ॥ ಮಿತ್ತನೆತ್ತಿಯನೊತ್ತಿದನೆಯಜಿ। ಪುತ್ತೆವೋಲ್ತ್ರಮ ದುಪಕರಣಮಂ।ಗೊತ್ತಿನೊಳಗೆತ್ತಿಡುತಶಿಷ್ಯರವೊತ್ತವತ್ತಲಿರೇ ॥೧೦೯॥ ಶಿವನನೆತ್ತಿದವರವರಿಯುನಿಜ। ಭವನಮಂಪೊರಮಟ್ಟುಜನಪತಿ। ಯುವಿನಯುದವಾರ್ತೆಯನುಕೇಳ್ದೊಡದೆಂತೆನುತರಿಯದೇ॥ ಶಿವಶರಣಮಾಹೇಶ್ವರರುಕಂ। ಡವರೊಡನೆಧಿಃಕರಿಸುವರುಯಿಂ। ಬುವಭಯವನೀಡಾಡಿಪಾಶರನೋಡಲೆನ್ನುವನೂ ॥೧೧೦॥ ಹಿಂದೆನಿಂದಿಪರೆಂಬುದಿಲ್ಲದೆ। ಹಿಂದಿರುವಲಜ್ಜೆಯನುತೊರೆದುತ। ಮಂದದೊಳಗಾಕ್ರಮಿಸಿದುದ್ರೇಕದಿನಡೆದುತನಗೇ ॥ ಮುಂದೆಯೊದಗುವರುದ್ರಪದವಂ। ನಿಂದಿರುವಗೌರವವನೆಣಿಸದೆ। ಒಂದೆಡೆಯೊಳುಂನಿಲ್ಲದತಿಜವದಿಂದೆಬೀಡಿಲಿದಾ ॥೧೧೧॥ ಸಂಗತಿಯಸಾರ್ವೆವುತಂತ। ನ್ನಿಂಗಿತದಿಪೋಗುತ್ತಲಿಹವಿಧ। ವಂಗಣೆಸುವೊಡೆಕಾಮುಕಸ್ವಕುತೋತ್ರಪಾಎನುವಾ ॥ ಡಂಗುರದನುಡಿನಿಶ್ಚಯವದೆನ। ಲಂಗನಾಮಣಿಯಿರವನರಸು। ತ್ತುಂಗವಿಃಸುತಿರುತಿರ್ದನಾಗಾಢಾಂಧಕಾರದೊಳೂ ॥೧೧೨॥ ದಾವಣಿಯಹಗ್ಗಗಳುಹತ್ತಿದ। ಠಾವಿನೊಳುಜೋಲಿಸುತೆಗಣೆಗಳ। ನಾವರಿಸಿರುವರಜ್ಜುಗಳಕಾಣುತ್ತೆನಿಲ್ಲುವನೂ॥ ಆವಗಂತಾಂನೋಡದಿಹಪ್ರೊಸ। ರೇವಕಂಡೊದರುತ್ತೆಹರಿಬೀ। ಳ್ವಾವಿಧಿಶುನಿತತಿಯಭೀತಿಯೊಳೋಡಿದೂರದೊಳೂ ॥೧೧೩॥ ನಿಂದುವುರಚಿಳಿಕಿಂದೆಕಾಣಿಸೆ। ಮುಂದಕಂಗವಿಸುವನನುಡುಗುತೆ। ಬಂದುದಿಕ್ಕುಗಳರಿಯದುವೋಣೊಂದುಕೊಳುತಿಹನೂ ॥ ಮುಂದಗಮನೆಯುರೀರ್ವರೊಂದೆಶೆ। ಯೊಂದಿವಾತಾಡುತ್ತಿರಲ್ಕಾ। ಸುಂದರೀಮಣಿಚನ್ನೆನುಡಿಗಳಿವೆಂದುಕೇಳುವನೂ ॥೧೧೪॥ ಅಂಧಕಾರವುಗಾಢತರವೋ। ಹಾಂಧಕಾರವುಬಳಿಹೊರಗೆಬೀರ। ಸಂದಿನಿತುಮಿಲ್ಲದೊಲುತುಂಬಿರೆಸಾಗರಾಂತರದೀ ॥ ನಿಂಡನಾವೆಯುದಾರಿತಪ್ಪಿಡು। ವಂದದಿಂಬೀಡೆಲ್ಲಶಿರುಗುತೆ। ಮುಂದುಗಾಣದೆಬೇಸರದಿಮನನೊಂದುಕುಂದುತಿರೇ ॥೧೧೫॥ ಇಂತಹಮಹಾತ್ಮರಿಗೆಹಾಹೀ। ಗೆಂತುಪುಟ್ಟತುದುಷ್ಟವ್ಯಥೆಯಾ। ಕಾಂತೆಯುಂತಾಂಕಾಂಬಹೇತುವನಾಳ್ಪನೆಂದೆನುತೇ ॥ ಸ್ವಾಂತದೊಳ್ದಯೆಗೂಡಿ

ಪೂರ್ವದಿ | ಗಂತರಧಿಯಾಮಿನಿಯುಪತಿಯು | ತ್ಯಂತತೇಜದೊಳುದಯಿ
ಸಿದಸಮುಖಾಂತರದೆಪೂರ್ಣ ||೧೩೫|| ದಿವವಿದೆಂಬಂಧದೊಳುಸ್ವೇಚ್ಛ |
ತ್ಯವದುಪೆರ್ಚಿರಲಲ್ಲಿರುವಜನ | ನಿವಹವಾತನಕಂಡುಜಾತೀಶ್ವರನೆನಿಜವೆಂ
ದೂ || ಅವರವರುನಗೆವೊಗದೊಡನೆಕಂ | ಡವರುಹೀಯಾಳಿಸಿದರೋ
ಹೋ | ಬುವಿಯುಜನರಂತಿರಡವೋಹವಿಕಾರದೂರನಿವಂ || ೧೩೬ ||
ಮುನಿಚರಿತ್ರನುವಿಬುಧವೈತ್ರಾ | ರ್ಜನರತನುಯುವತಿಯರಿಗಳುಪ
ದೊ| ಲಮನಯದಿಭಾವಕರಮನಗಳವಿಮುಖಗೊಳಿಹನೂ || ಘನತರೋ
ರ್ಜಿತಸ್ಥೈರ್ಯಚಿತ್ತನು | ಅನಘನುತ್ತಮಚರಿತನತಿಶಾಂ | ತನುಸದಾಶಿವ
ಬೋಗಸುಖಸಾಮ್ರಾಜ್ಯವರ್ಧಿತನೂ ||೧೩೭|| ಅತನುಧರ್ಮ್ಮಗುಣಪ್ರಸಾಂ
ಡಸು | ರತಿಯೊಳಿರ್ಪುಡಮರೆದಿರದೆಬಳಿ | ಕತನುಧರ್ಮ್ಮಗುಣಪ್ರಕಾಂಥ
ನಿಹತಿಗೆಗುರಿಯಾಗಿ || ಅತುಳರಾಜಮುಖದುಗಳಾಸೇ | ವಿತರೆನಿಸುತಿ
ರೆಮಠದೊಳಿರದೀ| ಕತದೆರಾಜಮುಖಿಯುಳಹುಡುಕುತಲಿಹನುಬೀಡಿನೊ
ಳೂ ||೧೩೮|| ಎತ್ತಪೋದುಧೊನಿಯುಮವೆಲ್ಲಡ | ಗಿತ್ತೊಮೌನತಪೋಗ
ರಿಷ್ಯಸು|ವೃತ್ತಿಗಳನೆಲ್ಲವನುವರ್ಜಿಸಿದೇಶಿಕನುಯಿವಾಕ್ರ||ಮತ್ತಕಾಶಿನಿಗಾ
ಗ್ರಿಕತ್ತಲ|ಹೊತ್ತಿನೊಳ್ಬುಬಂದಿರುವನಕ್ಕೋ| ಇತ್ತನೋಡತ್ತೇನನೋಡು
ವೆಯಿೀತನಾಕೃತಿಯಂ ||೧೩೯|| ಎನಲುಕೇಳಿಸಖೀಮಣಿಯುಸ|ದ್ವಿನಯು
ಯುತೆಯುಹಕಾರಣದೊಳ | ತ್ಯನಘಮಾಹಾತ್ಮ್ಯರನುನೀನಿನಿತೆಲೆಲೆಕು
ತ್ಸಿತಪಾ || ಘನದುರುಕ್ತಿಗಳಾಡಬೇಡೆಂ | ದೆನುತೆಗರ್ಜಿಸಿಯೊಡತಿಯಿ
ಹುದಂ|ನಿನಗೆತೋರುವೆನೆಂದೆನುತೆಕರದೋಯ್ದುನಿದ್ರೆಯೊಳೂ||೧೪೦||
ಹೊಂದಿಳುವಸುಂದರಿಯನೇಳೇ | ಳೆಂದುಎಬ್ಬಿಸಿಗುರುವರೇಣ್ಯರು |
ಬಂದರಿದೊಯೆನಲಳ್ಕಿಏಳುತ್ತಿದಿರಗಮಿಸಿಪದ || ದ್ವಂದ್ವಗಳಿಗೆರಗುತ್ತೆ
ಸ್ವಾಮಿಯೆ | ಮಂಡಮತಿಯುಪರಾಧಿಯಾದೆನು | ಬಂದಿರುವಿರೀರಾತ್ರಿ
ಯೊಳುತಾವಾವತೆರದಿಂದೇ ||೧೪೧|| ನಿಮ್ಮನುಜ್ಞೆಯುಪಡೆದುತಂಗಳ |
ನುಮ್ಮಳದೊಳಿನಿತುಂಡುಭೂಪತಿ | ಸಮ್ಮುಖಕೆಪೋಗುತ್ತೆಕಾಮಿತವ
ಸ್ತುಗಳಪಡೆದೂ || ಸಮ್ಮತದೆನಾವಿದ್ದೆಡೆಗೆಬರ | ಲೆಮ್ಮತಂದೆಗಳೆಂದರಲ್ಲಿ
ಯು | ನಮ್ಮಕಾರ್ಯವುಸಫಲವಾದುದುನೆಲೆಯುಸೇರಲ್ಕೆ ||೧೪೨|| ಪೋಗ

ಬೇಕೆನೆಸೇವಿಸಲುಬರ | ಲೀಗಲಿಲ್ಲವೆನುತ್ತೆಕರವಿಡಿ | ದಾಗುರುವಕನಕರ
ದುತಂಡುಸ್ವೀಕರಿಯುವಂಚೆತಲ || ಕ್ಕಾಗಿಮೇಲ್ದೆಶೆಯಲ್ಲಿಮೂರ್ತ್ತವ | ನಾ
ಗುನಾಡಿಸಿಮುದನಕೇಳಿಯೊ | ಳಾಗತೃಪ್ತರವಾಡಿವಿಶ್ರಾಂತಿಯೊಡನಿರು
ತ್ತಿರ್ದ ||೧೪೩|| ಅವರೊಡನೆಯಿಂತೆಂದಳಾಸತಿ | ಸವನಿಸಿತುಮುತ್ಪೂರ್ವ
ಸುಕೃತದಿ | ಶಿವನಸನ್ನಿಭರೆನಿಪನಿಮ್ಮನುಕೂಡಿಸುಖಿಯುಪ್ಪ || ನಿವಹವ
ಪುಪ್ರಾಪ್ತಿಸದೆಪ್ಪೋಯ್ತಾ | ಭವನನುಜ್ಞೆಯುವಿಾರಲಳವೇ | ಭುವನ
ದೊಳಗನುದಿನವುಕೂಡಿಹಪುಣ್ಯವೆಂತಹುದೋ ||೧೪೪|| ಬೀಡುತೆರಳುವ
ಕಾಲವೊದಗಿತು | ವಸಾಡಲೇನಿನ್ನದಕನುಜ್ಞೆಯು | ನೀಡಿಯಿಲ್ಲಿರಲಾಗ
ದಾಗೀತಾವುದಯವಾಡಿ || ನೋಡಿಧರಣೀವಲ್ಲಭಂಕೊಂ | ಡಾಡಿನವಿಾಸ
ಲುಪ್ರತ್ಯುಷಸಿಯೊಳು | ಕೂಡಿರುವಸುಶ್ರದ್ಧೆಯಿಂದರ್ಚಿಸಲುಬರುವಾಸ
||೧೪೫|| ತಾವುಯಿರುವುದುಲೇಸುನಾವಿ | ನ್ನೇವೆಸ್ನೇಹವಮರೆಯದಿರಿ
ಸುಖ | ದೇವಯೆನುತಂಕಪಟಲೋಚನಬಾಷ್ಪಗಳಸುರಿಸೀ || ಬಾವೆಬಿ
ಗಿದಪ್ಪಲುಪ್ರವೋಹಸ್ವ | ಭಾವದಿಂಗುಂಡಿಗೆಧಿಗುಲ್ಲೆನೆ | ಕಾವನಾಥೀ
ನಾಂತರಂಗಪದೇವನಿಂತೆಂದಾ ||೧೪೬|| ಜೀವವೆನ್ನದುನಿಲ್ಲದೆಲೆಠಾ | ಜೀ
ವಲೋಚನೆನಿನ್ನಕೂಡಿಸು | ಖಾವಹಸ್ಥಿತಿಯಿಲ್ಲದಿರೆಭೋಧವನೆನಗೆಮಾ
ಳ್ಪ || ಸೇವೆವೊಪಲಾದುಪಚರಣೆಯೇ | ಕೀವಿಶೇಷಮಣಿಪ್ರದಾನುಗ |
ಳಾವಕೆಲಸಕೆಸಕಲಭೋಗವಿತಾನವೇತಕ್ಕೆ ||೧೪೭|| ಕೋವಿದನುಮೆನಿ
ರ್ಪೊಡೇನುಸು| ಭಾವಿಯೆನುತಂಸಕಲರುಂಸಂ | ಭಾವಿಸಿದೊಡೇನಧಿಕ
ಕೀರ್ತಿಯುಶ್ರೀವಿರಲದೇನು || ಪಾವನಾತ್ಮಕನೆಂದೊಡೇಂವೋ | ಣಾವಗಂ
ಮಿಗೆಕಾಮುಲಂಪಟ | ಜೀವಿಯೆಂದೊಡದೇನುಸ್ವಾತ್ಮಸುಖೈಕಪರವಶಗೆ
||೧೪೮|| ನೀನೆಕಾರಣವೀಸಮುಸ್ತಕೆ| ಮಾನಿನೀಮಣಿನಿಲ್ಲಲಾರ್ಪೆನೆ | ನಾ
ನುನಿನ್ನೊಡಗೂಡಿಬರ್ಪೆನುತ್ವತ್ಸುರತಸುಖವ್ರೊ || ಮಾನಿತಾಖಿಲವಾಂಛಿ
ತಾರ್ಥವಿ | ತಾನಕಾರಣವೆನಲುಚನ್ನಾ | ಯ್ತಾನಡುಹಿದಳುಗೌರವವೆನಿ
ಮುಗಿನ್ನುಡೊಂಬಾರ ||೧೪೯|| ಚನ್ನಿಎಂಬಳಕೂಡಿತನಗಿಹ | ಮನ್ನಣೆ
ಯುನೀಡಾಡಿತಿರುಗಿಡ | ನೆನ್ನುವುದುಯಿಾಲೋಕವಿದನುವಿಚಾರವೆಂವಾ
ಡೀ || ಮನ್ನಿಸ್ಲಲುಬೇಕೆನ್ನವಾತವು | ಹೋನ್ನತನೆನಾತಿರಿಗಿಬಳುವೆನು |

ಸನ್ನಿಹಿತಮುನೀಂದ್ರನಂ ಭಿಪ್ರೋಕ್ತನಲವಳಗಿಂತೆಂದಾ ||೧೫೦|| ಜಲಜಲೋಚ
ನೆಹಲವು ನುಡಿಯಿಂ | ಫಲವದೇನಾತ್ಮಕ್ಕೆ ಸ್ತೋತ್ರ ! ತ್ಕಲನನಿಂದೆಗ
ಳೆಂತು ಹೊಂದುತ್ತಿಹವು ತಿಳಿಯಲ್ಕೇ || ಮಲಿನನಿಂದಾದುತ್ತ್ಗುಣಗಳಿಗೆ |
ನಿಲಯುವಪ್ಪ ಶರೀರವಾಂತವ | ನಲಘುಲಘುಗಳಿಗಳುಕುವೆನೆನೀಂ ತಿರಿಗಿ ಬಸ
ವನಕಾ ||೧೫೧|| ನಿಲ್ಲಲಾರ್ಪೆನೆ ನಿನ್ನ ಕೂಡಿಸ | ಫುಲ್ಲಸದೊಳಾಂ ಬರುವೆ
ಗೌರೀ | ವಲ್ಲಭಂ ಎನಗಿಂತು ಬುದ್ಧಿಯ ಪುಟ್ಟಿಸಿಹನಾಗೀ || ಸುಕ್ಷೇತ್ರ
ಲ್ಲವಿದು ಸಿದ್ಧವು | ಸಲ್ಲದಿದು ಬರಬಹುದೆಯೆಂಬುವ | ಸೊಲ್ಲುಗಳನಾಬಲ್ಲಿ
ಬರ್ಪುದು ಮಾಣೆನಿಸ್ಸಾಣೆ ||೧೫೨||ಸತ್ಯವೆನ್ನಲು ಕೇಳು ತಾಕೆಯು | ಸ್ತ
ತ್ಯಚಾರಿತ್ರರುಗಳನಘರ | ಗತ್ಯದಿಂ ಬರುತಿಹೆವೆನಲ್ಕಾನೆಂತು ಬೇಡೆನಲೀ||
ಭೃತ್ಯಳಾಗಿಹೆನೆಂದು ಜನಕಂ | ಗತ್ಯತಿಶಯಗುರುಗಳು ಬರುತಿಹ | ಕೃತ್ಯ
ವಂ ಪೇಳುತೆ ಸತಿಯು ಬೀಡಂ ಪ್ರೊರಡಿಸಲ್ಕೇ ||೧೫೩|| ಇರ್ಪ ಜನರಿಗೆ ಪೈಣ
ವರಿಯಲ್ | ಭರ್ಪವೊಲು ಡಂಗುರವ ಹೊಯಿಸಲು | ತ್ರಿರ್ಪನಿತರೊಳಗಖಿಳ
ವಸ್ತು ಸಮೇತನೀವುಗಳೈ ||ತಪ್ಪದಾಂ ಮುಂಪ್ರೋಪೆನೆನುತಂ | ಧರ್ಪ
ಕಸತೀರೂಪೆ ನಡೆಯಲ್ಕು | ಬರ್ಪನಾಂ ಪಿಂದೆನುತೆ ನಡೆದಂ ಹೇಮ ನಗಚಾ
ಪ ||೧೫೪|| ಭಕ್ತನೊಡನೈತರುತಿರಲ್ಕವಿ | ಮುಕ್ತಕ್ಷೇತ್ರವ ಶೇರಲಿತ್ತಲ್ |
ಸಕ್ತ ಧರ್ಮಿಯೆನಿಪ್ಪ ಭೂಪತಿಯೆದ್ದು ಬೆಳಗಾಗೇ || ವ್ಯಕ್ತಿಯಿಂದಿನ ಕೃತ್ಯ
ಗಳನು | ದ್ರಿಕ್ತ ಭಕ್ತಿಯೊಳೆಸಗಿ ಸದ್ಯೋ | ನ್ಮುಕ್ತನಹ ಸದ್ಗುರುವನೀ
ಕ್ಷಿಸೆ ಮುದಿತಮಾನಸದೀ ||೧೫೫|| ಬಂದು ಸನ್ಮಣಿಮಂದಿರದಿ ತಾ | ನಿಂದು
ನೋಡಲ್ಕಾ ಸ್ಥಲದಿ ಬಾ | ಲೆಂದುಶೇಖರಸನ್ನಿಭಂ ಕಾಣಿಸದಿರಲ್ಕಲ್ಲಿ || ನಿ
ದನೊಯೆನ್ನುತ್ತ ನಾಣ್ದಿಶೆ | ಯೊಂದಿರುವೆಡೆಗಳೊಳಗೆ ನೋಡುತೆ | ಬಂಧ
ನಿಶಮುಂ ಮಠವೊಳಿರುತಿಹ ಸಿಷ್ಯರಂ ಕಂಡೂ ||೧೫೬|| ದೇಸಿಕೋತ್ತಮ
ನೆಲ್ಲಿಹನು ಮುನ | ಲಾಸಮುಸ್ತರು ಮೇಕವಾಕ್ಯದೆ | ಭಾಸುರಾತ್ಮಕ ಭೂ
ಪನೆನ್ನಿನದಿವಸದಿಂ ಕೃತ್ತಿ || ವಾಸಮೂರ್ತಿಯು ಸುಳುಹ ಕಾಣೆವು | ವೋಸ
ಮಾಡುದದೆತ್ತ ಪೋದರೊ | ವಾಸದಿಂ ಪೊರಮಟ್ಟ ವಿಧವಿಂತರಿಯೆವೆಂಥನ
ಲೂ ||೧೫೭|| ಕುಂದುತವರಂ ಕೂಡಿಕೊಂಡಾ | ಸುಂದರಾರಾಮದೊಳ
ಶೇಷಂ | ಸಂದಿನಿತು ಬಿಡದಂತು ನೋಡಲಾಸ್ವಾಮಿಯಿಲ್ಲಾಗೇ || ನೊಂ

ಧುಕೊಂಡುತ್ತಮೆಚರತಕರ | ದೆಂಡನಾವೆಡೆಯೊಳುಗುರುವರಂ | ನಿಂದ
ನೋಳೇಳ್ಛಿದೊಳಿತಿಳಿದುಂಬಂದಚತುರರಿಗೇ ||೧೫೮|| ಮಣಿಖಚಿತಕಾಂ
ಚನವಿಭೂಷಣ | ಗಣಸುವಸ್ತ್ರಸಮುಚ್ಚಯವನೂ | ನೆಣಿಕೆಯಿಲ್ಲದೆ
ಕೊಡುವೆನೆನಲವರಾಮಹೀಪತಿಯ || ಪ್ಪಣೆವಿಡಿದು ಪುರವೆಲ್ಲ ತಿರುಗುತೆ |
ದಣಿದುನೋಡಿಯೆಚರರುಕಾಣದೆ | ಅಣಿಯರದೊಳೈತಂದುಗುರುಗಳ
ಕಾಣೆವೆನಲವರೂ ||೧೫೯|| ಹಾಯೆನುತೆಹೇಮನ್ಮನೋಬ್ಜಾ || ಕಾಪಿ
ನುತನೀನೆನ್ನ ಬಿಡಬಹು| ದೇಎನುತಲಪರಾಧಕೃತ್ಯಕೆಶೀಕ್ಷಿಸಲುಬೇಹು||
ದೈಎನುತ್ತಂಯಿಂತುಚಿತ್ರವಿ | ದೇಂಎನುತಲಿನ್ನೆಂತುಗುರುಸ್ವಾ | ಮಿತಾ
ಎನುತದೇಶಿಕನೆಕೃಪೆಯಿಂದಾಳುವುದದೆಂತೂ ||೧೬೦|| ಎಂದುಸಂತಾಪಿ
ಸುತೆಮಗುಳ್ದಿಂ ! ಬಂದನಿದುಗುರುಲಿಂಗಜಂಗಮು| ದಂಡವೆನಿಪವರಿಷ್ಮ
ಪದಪಂಕೇರುಹಾರ್ಚನೆಯಾ || ನಂದಮುಂನಿರ್ವಾಣಲಕ್ಷ್ಮಿ | ಸುಂದ
ರೀವರಿಲಬ್ಧಸಾಧನ|ದಂಮಗಪ್ಪುನಗೇವುನೋಃದರಸದ್ಗಣಾಧೀಶ||೧೬೧||
ವವಮಹಾತ್ಮ್ಯಮಿಂದುಕರುಣಾ | ಭರದೊಳನುಭವವೇದ್ಯವಪ್ಪಂ |
ತರುಹಿವಿದಿತವಿದೆನಿಸುಪರಿಯನುರೆಯನುಗ್ರಹಿಸಿ || ಪೊರೆವ್ರತಿಹಶೀ
ಗುರುಗುಹೇಶ್ವರ | ನಿರದನೀನೆಲ್ಲಡಗಿದ್ದೈಈ | ಪರಿಯಪೋಪುದನರಿ |
ಧಿರಲುನಾನೆತ್ತಪ್ರೋಗಡೊಲು ||೧೬೨|| ನಿಷ್ಕಪಟಸೇವಾರತಿಯೊಳೇ
ನೆಮ್ಮಿಕೊಂಡಿರುತಿರ್ದನಗಲಪೆ|ಕೆಪ್ಮ್ರನೇಸಾಂಕೆಟ್ಟಿವೋಸದೊಳಾಗಿಯ
ಕಟಕಟಾ || ನಿಮ್ಮಭೃತ್ಯನಬಿಟ್ಟುಪ್ರೋಪ್ರದು | ಸಮ್ಮತವದೆಂತಾಯ್ತು
ಪ್ರಭುವೇ | ಎಮ್ಮತಾಯ್ತಂದೆಗಳುಮಿತ್ರರುದೈವದಾತೃಗಳೂ ||೧೬೩||
ನೀವೆಎನ್ನುತೆಸಾರ್ವಕಾಲವು | ಭಾವದೊಳುನಂಬಿದ್ದೆನುತ್ಸುಕ | ಸಾವ
ಧಾನಸುವೃತ್ತಿಯಿಂಭಜಿಸುತ್ತಲಿರ್ದಪನಂ || ಈ ವಿಧದಿಭುವಿಯೊಳಿಹ
ಜನರುಮ | ದಾವಕಾಲದೊಳೈದದವ್ಯಥಾ | ಪಾವಕಾಂತರದೊಳಗೆಕೆಡ
ಹಲ್ಭಹುದೆಶ್ರೀಗುರುವೇ ||೧೬೪|| ರಾಯಭೋಗನಿಕರಗಳೇತಕೆ | ಛೀ
ಯೆನುತ್ತಂತೊರೆದುಪ್ರೋದೆಯೊ | ಕಾಯಜಾಂತಕಸನ್ನಿಭನೆಕರುಣಾ
ಮೃತಾಂಬುಧಿಯೇ || ಬಾಯನುತೆಕರೆಗುಡುವೆಭಕ್ತಸ | ಹಾಯಕನೆ
ಪಿಂಧೆಂಬಭಿಲ್ಲವು | ನಾಯಭಿಪ್ರಾಯವನುನೆರೆತಿಳಿದಾಗಧೀವರರೂ ||

||೧೬೫|| ವಿನಯದಿಂಪೇಳಿದರುಕೇಳ್ವೈ | ಜನಕಬಲ್ಲವರುಗಳುದುಃಖದ | ವನಧಿಯೊಳ್ಮುಳುಗುವುದುವಿಹಿತವೆಶಿಲಿಯದೇತಮಗೆ || ಮನವೊಲಿದು ತ್ರಿಳಿಯಲ್ಕೆನಿರುಪಮ | ವೆನಿಸುವಾಧಾರಗಳುಶಾಸ್ತ್ರದೊ | ಳನಘಗುರುಚ ರಲಿಂಗಮೂರ್ತಿಗಳೊಂದೆರೂಪಾಗೀ ||೧೬೬|| ಪರಮಶಿವಲಿಂಗವನೆಜಾತ್ರೀ ಶ್ವರನೆನುತಲರ್ಚಿಸಲುಗುರುಪದ | ಸರಸಿಜಂಗಳಪೂಜಿಸಿದಫಲವದುಪೆಸ ಪುನಿಪುದು || ಹರಪುರಾತನರಾಚರಣೆಯಿಂ | ದೊರೆಯೆಮತ್ತೊರ್ವ್ವಂ ನುಡಿದನಾ | ಗುರುವಿನುಪದೇಶದಸುಮಂತ್ರಮಹಾತ್ಮ್ಯ ಯೊಭವದಾ || ||೧೬೭|| ಕಡಲತಡಿಯುಂಸೇರಿಪುದುಧರೆ | ಯೊಡೆಯನೀನಾಮಂತ್ರದಿಂದ ಲೆ | ಮೃಡನಕಾರುಣ್ಯಾಸ್ಪದಸುಮುಕ್ತಿಯನೆಪಡೆಯೆಂದೂ || ನುಡಿಯ ಲೆನ್ನವ್ರತಸ್ಥಿತಿಯನಿಂ | ತೊಡನೊಡನೆತಿಳಿದಿರ್ದ್ದನೀವ್ಗಳು | ನುಡಿಯಬ ಹುಫೇಯಹಾಮಹಾತ್ಮನಕಂಡನಂತರವೇ ||೧೬೮|| ಎಮ್ಮಲಿಂಗಾರ್ಪಿತವಿ ದನುನೀ | ವ್ನಿಮ್ಮಯಂಬನಿತರೊಳೆಚರನೋ|ರ್ವ್ವಮ್ಮದದೊಳೈತಂದು ಭರದಿಂನೃಪತಿಈದಿನವೇ || ನಮ್ಮಗುರುವಾಡೊಂಬರೊಡನತಿ | ಸಮ್ಮ ದದೆಕಾಶೀನಗರಕಂ | ಸಮ್ಮತಿಸಿಪೋಪುದನುಕಂಡೆನೆನಲ್ಕೆಹರುಷಿಸುತೇ ||೧೬೯|| ಅವನಿಗಿತ್ತಗಣಿತಧನವಭೂ | ಧವನುಸಚಿವಶಿರೋಮಣಿಗೆರಾ | ಷ್ಟ್ರವನುಪಾಲಿಸಲೊಪ್ಪಿಸುತಲಾಶ್ರಿತರನೊಡಗೊಂಡೂ || ಭವವಿದೂ ರಂಭ್ರಾಂತಿಯಿಂಗಿರಿ | ನಿವಹಸರಿದಟವೀಮೃಗಗಳಂ | ಜವದಿಗಣಿಸದೆ ಪೋಗುತಿರ್ದಂದರ್ಶನೇಚ್ಛೆಯೊಳೂ||೧೭೦|| ಗುರುವರೇಣ್ಯಾಂಪೋದಕು ರುಹಂ | ಅರಿವುತಂಗವಿಸುತ್ತೆಕಾಣಲು | ದುರಿತಭೇಕವ್ಯೂಹಗಂಧವ ಹಾಶಿಮುನಿಸೇವ್ಯ || ವರಸುತೀರ್ಥದರಾಶಿವಿನುತಾ | ಪರಿಮಿತಾಶ್ರಿತಭಕ್ತ ನಿವಹಾ | ಭರಣವಿಬುಧಾವಾಸಿಮುಕ್ತಿಪ್ರಕಾಶವಹಕಾಶೀ ||೧೭೧|| ಎನಿ ಸುವಾಸುಕ್ಷೇತ್ರಲಕ್ಷ್ಮೀ |ವನಿತೆಯಾಕಂಠಪ್ರದೇಶದಿ|ಮಿನುಪಹಾರವಿದೆ ನಿಘಗಂಗಾನದಿಯತೀರವೊಳೂ || ಅನುನಯೊಳಿಳಿದಿರ್ದ್ದಬೀಡಿನೊ | ಳನ ಘಪೊಗುತಂನಮ್ಮಜಾತ್ರೀ | ಶನನುಕಂಡಿರೆಎಂದುಕೇಳುತೆಪೋಗಿಯೊಂ ದೆಡೆಯೊಳ್ ||೧೭೨|| ಚಾಮರನವಮನೆಗಂಡುಪಾರ್ಥಿವ | ಧೀಮಣಿಯು ಮಾಸ್ಥಾವದೊಳೆತ | ಧ್ಯಾಮಿನಿಯೊಡನೆಕೂಡಿ ಯೊಂದೇಭಾಜನದೊ

ಳುಣುತಿರಂ || ಆಮಹಾತ್ಮನಿರಲ್ಕೆದೇಶಿಕ | ಸ್ವಾಮಿಗಳಕಂತಾನುಭವುಕಿಂ
ಡೆ | ಕಾಮಿತವುಫಲಿಸಿತ್ತುಭವಸಾಗರವದಾಂಟಿದೆನೂ ||೧೭೩|| ಆಪ್ರತಿ
ಮಶಾಪುಣ್ಯದಿಂಪರ | ಮಪ್ರಸಾದವಕರುಣಿಸೆಂದುಮು | ಹಾಪ್ರಮೋದ
ದೊಳಾಗನಮಿಸುತೆಭಕ್ತಿಯಿಂನಿಂತೂ || ಸುಪ್ರಶಸ್ತದಕರವನೀಡೆಮು |
ಖಪ್ರಸನ್ನತೆಯಿಂದಗುರುವರ | ನಪ್ರಮೇಯಾಶ್ಚರ್ಯದಿಂದವನತವದನ
ನಾಗೀ ||೧೭೪|| ನಾಚಿಸುಮ್ಮನೆಯಿರಲುಧೈರ್ಯ | ಪ್ರಾಚುರಸ್ವಾಂತಾಬ್ಜ
ಜೊಡನೆಸು | ವಾಚದಿಂದಾಯುವತಿಯುಂದಳುಧರಣಿಪತಿಯೊಡನೇ || ಈ
ಚತುರನೆನ್ನವನುಕಳೂಡಿಸ | ಹಾಚರಿಸ್ಕೃವುವಾಗಿಯಿರ್ಪ್ಪೀ | ಯೋಚನೆ
ಯುಬಂದಿಕುದುಮನದೊಳಗೆಡಬಿಡದೆಮೋಹ ||೧೭೫|| ದಾತುರದೊ
ಳೊಂದೇತಳಿಗೆಯೊಳು | ಜಾತಿಯೊಡೆಯನುಣುತಿರೆನೀವೀ | ರೀತ್ರಿಯು
ರಿದುಂಕೊಳ್ಳುವಡೆಕ್ಕೈಕೊಳಿರೆನುತೆನುಡಿಯೇ || ಆತನಾಯುಬ್ಜದಳನೇತ್ರ
ಗೆ | ನೀತಿಯುಕ್ತರಹಸ್ಯದಿಂಪ್ರ | ಖ್ಯಾತವಹಸದ್ಭಕ್ತಿಶ್ರದ್ಧಾಸಹಿತನಾ
ಗುತ್ತ ||೧೭೬|| ಲಿಂಗದೇಹಿಯೆನಿಪ್ಪದೇಶಿಕ | ಪುಂಗವನದಿವ್ಯಪ್ರಸಾದವ
ಸಾಂಗದಿಂಸದ್ಭ್ಯಕ್ತ್ರವೆನಿಸಿಹನಿನಗೆಸಂಶಯದಾ||ಸಂಗವೇಕಾನೆಂದು
ದೇನದು | ಅಂಗನಾಮಣಿನೀನೆತಿಳಿಯಿದ | ರಂಗನಂಎನ್ನಾತ್ಮಭಾವಪ್ರ
ಯಿಂಗಿತವನೀಗಾ ||೧೭೭|| ಅರಿಯದೇವಾಚಿಸುವೆಕಾಮಿತ | ಧಿರವಧೇಶಿ
ಕನುವಪ್ರಸಾದ | ಸ್ಫುರದಮೃತವದಕೊಳಧೆಪ್ಪೋಪನೆಎನುತೆನರಪತಿಯು
||ಗುರುವೆಡೆಗೆಹಸ್ತವನುನೀಡಲು| ಪರಮಕಾರುಣ್ಯಾಮೃತೇಕ್ಷಣ | ಗುರು
ಮೆಯಿಂಕೈವಲ್ಯಪದಕರಘನಪ್ರಸಾದವನೂ ||೧೭೮|| ಯತಿಪತಿಯುಕದು
ಣಿಸಲುಪರಮಾ|ಮೃತವೆನುತೆಕೈಕೊಂಡನಾಕ್ಷಿತಿ|ಪತಿಯುತತ್ಕ್ಷಣಧೊಳ್
ಗೆಶೈಲಕರಾಸನನುಮುಚಲ || ಧೃತಿಯುನಿಸುವನಭಕ್ತಿಗತಿಶಯು | ಯುತ
ಹೃದಬ್ಜನುಮಾಗಿನಲಿನಜ | ಶತಮುಖಾದ್ಯಸುರಾಳಿಸೇವಿಸ್ತುತಿರಲುವಾತ್ಸ
ಲ್ಯ ||೧೭೯|| ಶರಧಿಶಾಶ್ವಿತಮೂರ್ತಿಸಾಕ್ಷಾ | ತ್ಕರಿಸಿದಂಸದ್ಭಕ್ತಸುರತ
ರು | ವರನೊಲರುಣಜಟಾಳಿಪಲ್ಲವವಬ್ಜವೈರಿಫಲಂ || ಉರಗಚಯವೆಲ್ಲ
ತಾಪಲಿಯುಮಿಗೆ | ಗರಳಕಾಂತಿಯೆಮಧುಕರಂಗಳು | ಧರವರಾತ್ಮಜೆ
ಚೇಗುಮಾನಿವಿತತಿಯುಪಕ್ಷಿಚಯಾ ||೧೮೦|| ವಾಗೆಭೂವಿೂತಲದೊಳಶಿಶ್ರ

ಯ | ವಾಗಿಭಾಸಿಸುತಂಪ್ರಶಸ್ತದೆ | ಜೇಗನಂತವರುಗಳೆಡೆಯೊಳತಿವಿ
ಭವಯುತವೆನಿಸೀ ||ಹೀಗೆಸನ್ನಿಧಿಯಾಗೆಭಕ್ತಿಯೊ|ಳಾಗಲಾವಿಶ್ವೇಶ್ವರನ
ಪದ | ಕಾಗಿನವಿಸಿಧರಾಧಿಪಂನಿಜಫಾಲದೇಶದೊಳೂ||೧೭೧|| ಕರಸರೋ
ಜಂಗಳೆನುಕೀಲಿಸಿ | ಪರಮಭಕ್ತಿಯಭಾವದೊಳುಸ | ಚ್ಚರಿತನತಿವೋ
ದದೊಳುಶಿವನಂಸ್ತುತಿಯುಮಾಡಿದನೂ ||ಹರಕೃಪಾಸಾಗರವಿಧಿಸಿರಃ | ಕ
ರಕಮಲಸದ್ಭಕ್ತನಿಚಯೋ| ದ್ಧರದಿಗಂಬರವರಧರಿತ್ರೀಧರಸುಕೋದಂ
ಡ ||೧೭೨|| ದಂಡಧರಪೋರ್ಮದವಿಖಂಡನ | ಖಂಡಪರಶುಪಯೋಜವೈರಿ
ಸು | ಮಂಡನಾಯತಗರುಡವಾಹನಕಾಂಡಕಾಂಡಧರ||ಕಾಂಡಸುತಕಾಂ
ಡದಪರಮಶಿವ | ಕಾಂಡಸಂಭವಕಾಂಡಸಂಹರ | ಚಂಡಶಿಖಿಲೋಚನಧ
ರಿತ್ರೀಮಂಡಲಶತಾಂಗ ||೧೭೩|| ಮೌನಿಮಂಡಲಮಾನಸಾಂಬುಜ | ಭಾ
ನುಭಾಸ್ಮೋದ್ಧೂಳಿತಶರೀ | ರಾನುಪಮಭುಜಮೇಖಳಜಂಝಾನಿಲಮನೋ
ಜಹರ || ಲೂನವಿರಹಿತಶೂಲಪಾಣಿಸುಧೀನಿರರ್ಗಳಹಸ್ತಿಪಲಶಾ | ಶೀನಿರಾ
ತಂಕಪ್ರಸಂಹರ ದೀನಪಾಲಭವಾ ||೧೭೪|| ಎನುತೆಸಂಸ್ತುತಿಗೈಯ್ಯು
ತಿರ್ಪಾ | ಜನಪಶ್ರೇಣ್ಯನಕಂಡುಶರ್ವನು | ವಿನಯದಿಂದಾದರಿಸಿನಿನ್ನಪ್ರ
ಸಾದನಿಷ್ಠೆಗೇ || ಘನಪ್ರಮೋದಾನ್ವಿತನುಸಾಸಾ | ದೆನುಸುರಡುಗ್ರಮ
ಪುಷ್ಪದಿಂಕೋ | ಳನಪನಿಪದಿವ್ಯಲೆರಂಪಾನವಸೇರಿಳ್ವಲಾಸ ||೧೭೫|| ಗಿ
ರಿಯುನೇರಲುಪ್ಪೋಗಬೀಳಿಸೆ | ನರವರಂದೇವಾದಿದೇವನ | ಚರಣಪದ್ಮಂ
ಗಳಿಗೆವಂದಿಸುತುಸುರಿದಂಹಮ್ಮ || ಗುರುಪಿನಿಂಡಂನಿಮ್ಮಪದಸರ | ಸಿ
ರುಹಗಳನಾಂಕಂಡೆಭವದುರು | ತರಕಟಾಕ್ಷಶಕೆಪಾತ್ರನಪ್ಪುದರಿಂದಲಿಂತ
ಪ್ಪ ||೧೭೬|| ಘನಮಹಂತನಬಿಟ್ಟುಚಪಲೆಡಂ| ಬೆನಲಿವನುಪುಂನಿನ್ನನುಂ
ಸಾದನುನಯದಿಕೊಂಡೊಯ್ವನೆನಲಾಗುರುವ್ರಜನ್ನೆಯನೂ || ಮನವು
ಭಿಡದಾನೇನಗೈಯ್ಯಲಿ | ಯನಲದಂಕೇಳುತ್ತಗಿರಿಶಂ | ವನಿತೆಯಂ
ಕೊಂಡೊಯ್ಯಲೊಪ್ಪಿರಲಾಸತೀಮಣಿಯೂ ||೧೭೭|| ಇಂತುಪೇಳ್ದಳು
ತಂದೆತಾಯ್ಗಳು |ಮಂತವಿಲ್ಲದವೋಹದಿಂದೆನಿ| ರಂತರಮುಮೋಕ್ಶ್ಯಯಿ
ಸಿಕೊಂಡಿಹಬೀಡುಜನರುಗಳಂ || ಎಂತುಬಿಡಲಪ್ಪುವುದುಗೌರೀ | ಕಾಂ
ತವೆನಗಿದುಉಚಿತವೇಯೆನ | ಲಂತಕಹರಂದರಹಸಿತವದನಾಂಬುಜನು

ವಾಗೀ ||೧೪೪|| ಗುರುವನಾಚನ್ನಾಯಿಯಂತ | ತ್ಸರಸಿಜಮುಖಿಯೊಬೀ ಡಜನರಂ | ವರಸುವರ್ಣವಿಮಾನಪಙ್ತಿಗಳೊಳುಪ್ರವೇಶಿಸುತೇ || ಅರಿಡೆ ನಲುರಜತಾದ್ರಿಸದನಕೆ | ಪರಮಕೃಪೆಯಿಂದೀಶ್ವರಂಸಾ | ದರದೆಕೊಂ ಡೊಯ್ದನದುಕಾರಣದಿಂದೆಮುಕ್ತಿಪದ ||೧೪೯|| ಕಾರಣವೆನಿಸುತಿಹಪ್ರ ಸಾದದ | ಸಾರಸನ್ಮಾಹಾತ್ಮ್ಯಯನುಸ | ದ್ವೀರಮಾಹೇಶ್ವರವಿರಾಟನಿ ಸಿರ್ವಮಾಚಯ್ಯ || ಧೀರವೊದಲಾದಖಿಳಜಂಗಮ | ವಾರವಾಲಿಸುತಿರ ಲೊಡನೆಸುವಿ | ಚಾರನಿಧಿಸಕಳೇಶಮಾದರಸಾರ್ಯನರುಹುತಿರೇ ||೧೫೦|| ಸಕಲಪ್ರಮಥಗಣಂಗಳತಿಶಯ | ಭಕುತಿಯುತರಾಶ್ಚರ್ಯದಿಂನಿಜ| ಮು ಕುತಿಸಂಪತ್ಸಿದ್ಧಸಾದಾವಮೂರ್ತಿಯತಿಶಯಮಂ || ಯುಕುತಿಕೈಂಕರ್ಯಾ ನ್ವಿತೋತ್ಸುಕ | ಪ್ರಕಟವಿದ್ವದ್ಗಿರಿಮಸಂಸ್ತುತಿ|ನಿಕರದಿಂಸಂಭಾವಿಸಿದ ರಾನೀಲಗಳನಿಭನಾ ||೧೫೧|| ಆಸಮಯದೊಳಗಕ್ಕನಾಗಾಂ | ಬಾಸ ಮೂರ್ಚಿತದಪ್ಪಣೆಯಕೊಂ | ಡಾಸಕಲರುಂತಮ್ಮಸದನಕೆಸೇರಿದರೆನು ತ್ತಂ || ಆಸದಾಶಿವಮೂರ್ತಿಯರುಹಲು | ಭಾಸುರಾತ್ಮಕಕುಂಭಜಂವಿ | ಶ್ವಾಸದಿಂಮುಂದಣಕಥಾವೃತ್ತಾಂತವೆನಲೂ ||೧೫೨|| ಆರುವರ್ಗಂಗಳನು ವಾರಿಪು ! ರಾರಿಭಕ್ತಿಯದೋರಿಸಕಲವಿ | ಚಾರಮಂಸುಜನರಿಗೆಬೋ ಧಿಪಕಾರಣದೆಬಂದಾ || ಆರುವೊಗನವತಾರವಾರುತಿ | ಗಾರುಸರಿಯೆಂ ದೆನಲುಬರುದೀ | ಧಾರುಣೀವಲಯದೊಳುಷಟ್ಸ್ಥಲಧೀರಮೂರುತಿಗೇ ||೧೫೩|| ಇದುವೆರೇಣುಕಸಿದ್ಧಸದ್ಗುರು! ಪದಸರೋರುಹಜನಿತಶಿಷ್ಯಸ! ಮುದಯದೊಳುನಿಜಮಠಸುದೇಶಿಕರುಗಳಕಾರುಣ್ಯ || ಒದವಿರುವಶ್ರೀ ಸಿದ್ಧರಾಮಂ | ಮುದದೆಪೇಳ್ದಚನ್ನಬಸವಾ | ಭ್ಯುದಯವೆನಿಪಪುರಾ ಣದೊಳಗಿದುದ್ವಿತೀಯಾಶ್ವಾಸಂ ||೧೫೪||

ಅಂತು ಸಂಧಿ ೧೪ಕ್ಕಂ ಪದ ೪೯೨ಕ್ಕಂ ಮಂಗಳಮಹಾ

## ತೃತೀಯಾಶ್ವಾಸ ಪ್ರಾರಂಭವು.

### ಹದಿನೈದನೆಯ ಸಂಧಿ

# ಸಿದ್ಧರಾಮೇಶ್ವರನ ದೀಕ್ಷೆಯು

ಸೂ ॥ ಚೆನ್ನಬಸವಂಸಿದ್ಧರಾಮಂ । ಗುನ್ನತದಶಿವದೀಕ್ಷೆಯಿತ್ತು ಪ್ರ । ಸನ್ನನಾಗಿರಹಸ್ಯಲಿಂಗಮಹಾತ್ಮ್ಯೆಯರುಹಿದನೂ ॥

ಪದ ॥ ಗುರುಬಸವರಾಜನೊಲುಸುಸ್ಥಿರ । ತರಸಮಯನಿಷ್ಠಾಚರಣೆಯೆಡ । ದೆರಹಿನಿತುಮಿಲ್ಲದೆಶಿವಾರ್ಚನೆಯೊಳಗೆಭಕ್ತಿಯದೂ ॥ ಕೊರತೆಯಾಗದತೆರದೆಮಿಗಲಿನ । ಲುರುಸುಕೀರ್ತಿಯನಾಂತನಿಮ್ಮಯ । ಚರಣಕೆರಗುತೆಚೆನಬಸವಪೇಳ್ವೆನಿದನವದಾರು ॥ ೧ ॥ ಲಲಿತದೇಶಿಕಪಾದಪಂಕಜ । ನಲಿನನೀತಂಶೃತಿಗದಿತಷ । ಟ್ಸ್ಥಲಸುವಿಜ್ಞಾನೈಕವಿಶೃತಕಾರ್ತಿಕೇಯನಿವಂ ॥ ಅಲಘುತರಕೀರ್ತಿಯುತನಘೆಸಂ । ಕಾಲಮಹೀಧರವಜ್ರನೆಂದೊರೆ । ಯಲುಶಿವಶರಣನಿಚಯದಿಂಚೆನಬಸವರಾಜನಿರೇ ॥ ೨ ॥ ಆಗ್ರಹವಿದೂರಂಪರಸಮುದು । ನಿಗ್ರಹಂನಿಗಮಾಂತಸತ್ಯವಿ । ಧಿಗ್ರಥಿತನಿಜವರ್ತನಂಯುತಿಚಯವಿನತನಭವ ॥ ವಿಗ್ರಹಂಸದ್ಭಕ್ತ್ಯುದಾರಸಮಗ್ರಸುವಿವೇಕಾಢ್ಯಶಿವಯೋ । ಗ್ಯಗ್ರಣಿಯೆನಿಪಸಿದ್ಧರಾಮಂಸೊನ್ನಲಾಪುರದೀ ॥ ೩ ॥ ಆವಿಧದೊಳಿರುತಿರ್ದುನಿರುಪಮ । ಸಾವಧಾನದೊಳಕ್ಕನಾಗಾಂ । ಬಾವರಾತ್ಮಜನಂಘ್ರಿದರ್ಶನದಿಚ್ಛೆಯದುಮನದೀ ॥ ಶ್ರೀವಿಪರ್ಬಿರುತಿರೆಪುನೀತಸು । ಭಾವಗತಿಯಿಂದಾಣವಾದಿಮ । ಲಾವಲಿಪ್ತನೆನಿಸದೆಸ್ವರ್ಣಕಪರ್ದಕಗಳಸಮ ॥ ೪ ॥ ವಾಗಿಕಾಣುತೆಮುದದೊಳಿರುತಿಹ । ಸಾಗರನಿಷಂಗಾಂಘ್ರಿಸೇವಕ । ರಾಗಲುಂಸನ್ನಿಧಿಯೊಳಗೆತುಂಬಿರಲುಪರಿಪೂರ್ಣ ॥ ಯೋಗಿಜನರಿಂದೆಸೆದುಭೂವಿಭಾ । ಭಾಗದಿಹಕಲ್ಯಾಣಪುರವಂ । ವೇಗದಿಂಸಾರುತ್ತೆನೋಡಿಮನೋಂಬುಜದೆಮುಚ್ಚಿ ॥ ೫ ॥ ಮುಂದೆ

ನಡೆಯುತ್ತಂಘನತರಾ | ನಂದದಿಂಚೆನ್ನಬಸವರಾಜನ | ಮಂದಿರದ್ವಾರ
ದೊಳಪ್ರೊಕ್ಕಾಯಿಂದುಧರಯೋಗೀ || ನಿಂದುದಾವಾರಿಕರೊಡನೆತಾಂ |
ಬಂದವಾರ್ತೆಯನರುಹಿಕಳುಹ | ಲಮಂದಗತಿಯಿಂಪ್ರೋಗಿತಿಳುಹೆನೆ
ಸಿದ್ಧರಾಮಯ್ಯ ||೬|| ಎಂಬುವಾತಂತಪ್ಮದಿವ್ಯಪ | ದಂಬುಜಂಗಳದ
ರ್ಶನೇಛ್ಛೆ | ಡಂಬರದಿಬಂದಿರ್ಪನೆನಲಾತಂಮಹಾತ್ಮ್ಯಯುತಂ|| ಸಾಂ
ಬಮೂರ್ತಿಕೃಪಾನಿಯುಕ್ತಂ | ಎಂಬುದೇಸಿದ್ಧಂಸುಮೋಕ್ಷಾ | ಲಂಬ
ಷಟ್ಸ್ಥಲವ್ರತಸಹಿತನಾಗದಿಹಕಾರಣದಿಂ ||೭|| ಈಸಮಯದೊಳ್ನೋ
ಡಲಾಗದು | ಆಸಮರ್ಥನನಲ್ಲಿನಿಲಿಸಲು | ಲೇಸೆನಿಸದೇಗೈವುದೆಂದುನಿ
ಜಾಂತರದೊಳೆಣಿಸೀ || ಭಾಸುರಾತ್ಮಂತನ್ನಯಂತೇ | ವಾಸಿಯೆನಿಸುವ
ಭಕ್ತನಂಕರೆ | ದಾಸಮುಚಿತನೊಳೀವಿಧದವೃತ್ತಾಂತವಂತಿಳುಹೀ||೮||
ಸಮ್ಮತಿಸುನೀನೀಕ್ಷಣದೊಳೀ | ಗಮ್ಮನೇನಾಂಬರುವೆಪ್ರೋಗೆನ | ಲು
ಮ್ಮಹಾತ್ಮನನುಜ್ಞೆಯಿಂದಾಸಿದ್ಧರಾಮಯನಾ || ಸಮ್ಮುಖಕೆನಡೆತಂ
ದುನುಡಿದಂ | ನಿಮ್ಮಬರವಿಗೆಚೆನ್ನಬಸವಯ | ನುಮ್ಮದನ್ವಿತಹೃದಯ
ಸರಸೀಜಾತನಾಗಿರ್ಪಂ ||೯|| ಎನುತೆಮತ್ತಂತೆಂದನಾತಂ | ವಿನಯದಿಂ
ದೆಪ್ರಸಾದಭೋಗಾ | ರ್ಚನಸಮಯವಿದುತದ್ವಿಧಾನಾನಂತರಂನಿಮ್ಮಂ||
ಅನಘನೀಕ್ಷಿಸೆಬರುವನಿಲ್ಲಿಗೆ | ಮನಸಿಜಾಂತಕಶರಣನೀಕೇ | ಳೆನೆಮನ
ದೊಳಾಲೋಚಿಸುತೆಹಾಪರಮಶಿವಲಿಂಗ ||೧೦|| ಸಂಗತನುವಾಗದಿಹ
ಕಾರಣ | ಕಂಗೊಳಿಸದಾಂಪ್ರೋದೆನಿವನಂ | ಮಂಗಳಾತ್ಮಕನಪ್ಪಗು
ರುವರನೆಂದುನೆರೆನಂಬಿ || ಹಿಂಗದೆಭಜಿಸಿಮೋಕ್ಷಲಲನಾ | ಸಂಗಚಿನ್ಮ
ಯದೀಕ್ಷೆಯೈದುವೆ |ಲಿಂಗವಿರಹಿತನಾದವಂಸುಜ್ಞಾನಿಯಾಗಿರಲೂ||೧೧||
ವಿನುಫಲವಾಯಿಷ್ಟಲಿಂಗಾ | ಧೀನತನುಮನಕರಣವಾಗಿಹ | ಮಾನನಿಧಿ
ಯುನವಾನನಲ್ಲವೆನುತ್ತೆಶ್ರುತಿಶಾಸ್ತ್ರಂ || ತಾನೆಸಾರುತ್ತಿಲರಿದುನಾ | ನೀ
ನಿರರ್ಥಕವೀಸುದಿನಗಳ | ನೂನಮೋಸದಿಕಾಲಗಳೆವುತೆಭ್ರಾಂತನಾಗಿಹೆ
ನೂ ||೧೨|| ಈಸಮಯದೊಳ್ಭಾಗ್ಯವಶದಿಂ | ದಾಸುಧಾಂಶುಕಪರ್ದಿತಪ
ಲ್ಯಕ್ಪ | ಪಾಪಸಮುದ್ರನೆನಿಪ್ಪಸದ್ಗುರುಮೂರ್ತಿದೊರಕಿದನೆಂ || ದಾಸದ
ರ್ಥನುಮಾತ್ಮಸಂತೋ | ಷಾಸಮನ್ವಿತನಾಗುತಿರದೆ | ಗೃಸಭಕ್ತರ

ಕೂಡಿಶ್ರೀಚನ್ನಬಸವವಿಭುಬರಲೂ ||೧೩||ಸಿದ್ಧರಾಮಂಕಂಡುಭಕ್ತಿ | ಶ್ರ
ದ್ಧೆಯಿಂನಮಿಸುತ್ತಿರಲ್ಕೆಸ | ಮಿದ್ಧಪ್ರಿಯದಿಂದೆತ್ತಿಯಪ್ಪಿಕೊಳುತ್ತೆಯ
ನುಭವಸಂ || ಸಿದ್ಧಮಂಟಪದೇಶಕನುಪಮ |ಬುದ್ಧನಂಕರದೊಯ್ಯುತು
ಚಿತಪ್ರಸಿ | ದ್ಧದಾಸನದಲ್ಲಿಮೂರ್ತವಮಾಡಿಸುತೆತಾನೂ ||೧೪|| ಭಕ್ತಜ
ನರಿಂಭರ್‍ಮ್ರಮಣಿಸಂ | ಯುಕ್ತಪೀಠದಿಕುಳಿತುನುಡಿದನೆ | ದುಕ್ತಿಯನು
ಪಮರಾಜಯೋಗಾನಂದಪರಿಪೂರ್ಣ್ಣೀ || ದ್ರಿಕ್ತತಾದೃಗ್ಭಾವಶುದ್ಧ್ಯಾ
ದ್ಯುಕ್ತನಿನಗಾರೆಣೆಯುಜೀವನ್ಮುಕ್ತಸದಯನೆನಿಮ್ಮಬರವಿಂದೀದಿನವೆಸು
ದಿನಂ ||೧೫|| ಇಂದುಧರಸದ್ಭಕ್ತನೇತ್ರಾ | ನಂದವಾದುದೆನಲ್ಕೆರಾಮಯ್ಯ
ನೆಂಧ್ಗವಮುಕುಳೀಕೃತಕರಾಂಬುಜನಾಗುತವರೊಡನೇ || ಮಂದಮತಿಲೌ
ಲ್ಯಪ್ರಚಾರದೊ | ಳೊಂದಿಲಕ್ಷ್ಯೈಕುಬಂಧಯೋಗದೆ! ನಿಂದುವಿಹರಿಸಿ
ಚಾಡುಸೀಲವಿದೂರಕನುಮಾದ ||೧೬|| ಎನ್ನನಾಶಶಿಶೇಖರಾಂಘ್ರಿಗ | ಳಂ
ನ್ನಿರಂತರವರ್ಚಿಸುತೆನಿಜ | ಹೃನ್ನಳಿನದೊಳ್ಧ್ಯಾನಿಸುವಸದ್ಭಕ್ತರಿಗೆ
ತುಲ್ಯ || ನನ್ನುನೋಡುತೆವಚಿಸೆಗುರುವದು | ಧನ್ಯಶಿಷ್ಯನೊಳಿಹಕೃಪಾ
ಸಂ | ಪನ್ನತಾವಿಧವೈಸೆನಾನಪರಪ್ರತಿಮಪ್ರತದಾ ||೧೭|| ಸಾವಧಾನಕೆ
ಸಾಮ್ಯವಪ್ಪನೆ | ದೇವಮಹಿತೋದಾರಶಂಭುಸ್ವ |ಭಾವಭವದೀಯಾತ್ಮ
ಯೋಗವಳಿವುದುಜಾವಳವೇ || ಕೇವಲವದಾಗಿರುತಿಹುದುಪ್ರಾ| ರ್ಣ್ಣವಲಿ
ಪ್ತಕೃಪಾಮೃತರಸಂ|ಶೀವೆಸುಖಕಾರಣವೆನಿಪನೈಜಪ್ರಸಾದವನೂ ||೧೮||
ಹೊಂದುವಾಮಾರ್ಗ್ಗವನೊಸೆದುಮೇ | ಣಿಂದುಧರಪಾದಾಬ್ಜಭಕ್ತ್ಯಾ |
ನಂದಿಗಳುಮೆನಿಸಿರುವರೀರಸಿಕಾಗ್ರಣ್ಯರೊಳೂ || ನಿಂದಿರುವವರಿಯಿಂದೆ
ಶ್ರೀಗುರು | ತಂದೆಎನ್ನನನುಗ್ರಹಿಪುದೆಂ| ತೆಂದೆನುತ್ತವರಂಘ್ರಿಕಮಲಂ
ಗಳಿಗೆರಗಲೊಡನೇ ||೧೯|| ಹಸಿತಮುಖದಿಂಸಿದ್ಧರಾಮನ | ದಿಶೆಯನಿಟ್ಟ
ಸಿನುಡಿದಭಕ್ತಿಯ | ರಸಸುಧಾನಿಧಿನಿನ್ನಮನವಂಕಂಡೆನಿರುತಂದ್ವ ||
ದ್ವಿಜದೊಳುನಿಲ್ಲಿಸಿಶಿವನಭಜಿ | ಯಿಸುವಪಾವನನಿನಗೆಬೇರೀ | ಪ್ರೊಸ
ವರಿಯುವಾಂಛೆಯುದದೇತಕೆದೀಕ್ಷೆಯೆಂಬುವುದು ||೨೦|| ಎನಲುಕೇಳು
ತೆಸಿದ್ಧರಾಮಂ | ವಿನಯದಿಂದನಘಾತ್ಮಪ್ರಾಣಾ | ರ್ಚನಸಮಾಹಿತವಿಧಿ
ಯೊಳಿಂತುಸಮರ್ಥನಾದಡೆಪಾ || ವನಸುದೀಕ್ಷಾತ್ತೇಷ್ಟಲಿಂಗವ| ನೆನಿತ

ಜನ್ಮಾರ್ಜಿತಸು ಕೃತವೋ | ತನುವಿನೊಳುಧರಿಸಿಪ್ಪವರಸಡಿಬರ್ಪನೇಕೊಂತೆ ||೨೧|| ಯಿಲ್ಲದಿಹವೀಕ್ಷಾವಹನುಮೆನೆ | ಸಲ್ಲುವುದುತತ್ಕಾರಣವಿಕಸು | ಸೊಲ್ಲಸಿತಭವದೀಯಶಿಷ್ಯನುವೆನಿಸುಮದ್ಭಾವಂ || ಬಲ್ಲಪಂಎನ್ನೊಳುಕೊರತೆಯೇ | ನಿಲ್ಲದಂದದೆಮಾಡಿಕಾಯಲು | ಬಲ್ಲನಿಮ್ಮಡಿಗಳಮರೆಯಹೊಕ್ಕಾನುಬದುಕಿದೆನು ||೨೨|| ಎನಲುಚೆನಬಸವೇಶ್ವರಂನುಡಿ | ದನುನಿನಗೆಗುರುತನವಮಾಡಲು | ಮನದನಿಷ್ಠಾತಿಶಯದೃಢವಾಗಿದ್ದುಈಬಯಕೆ || ಜನಿತವಾಗಿರೆಕೈಕೊಳುವುದೀ | ಘನಮಹಾಂತರೊಳೋರ್ವನಂಗುರು | ವೆನಿಸುತಾತನಪೂರ್ಣವಿಶ್ವಾಸಾತಿಶಯದಿಂದೇ ||೨೩|| ಎಂದುನುಡಿಯಲುಸಿದ್ಧರಾಮನ | ಮಂದಮೇಘಾಯುತದಿಶರಣರ ಬೃಂದಸಾನ್ನಿಧ್ಯಪ್ರದೇಶದೊಳೆರಗಿಸಾಷ್ಟಾಂಗ || ದಿಂಡೆನಮಿಸುತ್ತಂದನೆನ್ನೊಳು | ಸಂದಿರುವಜೀತೋಭಿಮತವಂ| ಇಂದುನೀವೇಘರಿದುದೀಕ್ಷಾಲಿಂಗಮುಂಕುಡಲು ||೨೪|| ಬೇಕೆನಲುಕಾರುಣ್ಯದೃಷ್ಟಿಸ | ಮಾಕುಲದಿಶ್ರೀಚೆನ್ನಬಸವಂ | ವಿಕಪುರ್ರಿತಿಗೆಪೇಳಿರಯ್ಯಾಎಂಬುದಂಕೇಳೀ || ಪಿಕವಾಕ್ಯದೊಳಖಿಳಪ್ರಮಥಾ | ನೀಕವದುನಿರ್ಧರಿಸಿನುಡಿದುಪು | ಲೋಕಪಾವನಚರಿತನಿಮ್ಮಲ್ಲಿಯೆಗುಪುತ್ವವಪು ||೨೫|| ಸಿದ್ಧವಾಗಿರುತಿರ್ಪುದೇಸಂ | ಸಿದ್ಧವೈಚೆನಬಸವರಾಜನೆ | ಸಿದ್ಧರಾಮಯ್ಯಂಗೆಯುಪರಿಂಸತ್ಕ್ರಿಯಾದೀಕ್ಷಾ || ಬೋಧ್ಯನಾಗುತ್ತೀಕ್ಷಣಡೊಳುಪ್ರ | ಸಿದ್ಧತದ್ವಾಂಛಾಪ್ರಪೂರ್ಣನಿ | ಬದ್ಧತೆಯಕೈಶೇರಿಸುತೆಪಾತಿಸುವುದೆಂದಮಹಾ ||೨೬|| ಪ್ರಮಥಗಣದಾಜ್ಞೆಯನುಶಿರಮೊಳು | ಪ್ರಮುಪಟಿಂಕೋಟೀರಭಾವದಿ ಸುಮುಶತದಹನವಿಗ್ರಹಂಧರಿಸುತ್ತಲಾಕ್ಷಣದೇ || ಅಮರಗಣಶೇಖರನನುಜ್ಞಾ | ಕ್ರಮದಿನಿನ್ನ ಮನೋರಥವನೀ | ಸಮಯದೊಳೆಕೈಸೇರಿಸುವೆನೆಂದಿನೊಲುಪರಮಶಿವ ||೨೭|| ಲಿಂಗಪೂಜೆಯವಾಡುಪ್ಯೋಗ್ಯೆ | ಮಂಗಳಾತ್ಮಕಪೂರ್ವವಿಧವಮ | ಭಂಗವೆನಿಸದತೆರದೊಳೇನೀಂತೀರಿಸುವುದಿಂದೂ || ಸಾಂಗದೀಕ್ಷಾಯುಕ್ತನಾಗಲು | ಇಂಗಿತವೆನಿಸಿರುವುದುನಾಳೆನುತಂಗಣಂಗಳಭಕ್ತಿಸೇವಾಕಾರ್ಯನಿರತರಿಗೇ ||೨೮|| ಆಲಯವಲಂಕರಿಸಲಾಕ್ಷಣ | ವೇಲಘುತರವೆಕಳುಹಿಹರ್ರೊ್ಪೀ | ದ್ವೇಲರಾಶ್ಚರ್ಯವದೆನಿಸೆಸೌರಭ

ಮೃಗಮದದೊಳೂ || ಕೀಲಿಸಿದಕುಂಕುಮದಿಸಾರಿಸಿ | ಲೋಲಮುಕ್ತಾ ಫಲಗಳಿಂಸುವಿ | ಶಾಲಸೊಬಗಿನಸೋಜಿಗದರಂಗಗಳನೆರೆರಚಿಸೀ ||೯||
ಗೋಡೆಗಳಮಿಂಚುವ್ರೊಲುಸಾರಣೆ|ಮಾಡಿಬಹುವಿಧಚಿತ್ರರೂಪಂ | ನೋಡುವರುಚಿರಗಾಗುವಂದದೆಬರೆದುಬಿಳಿಪಟ್ಟಂ|| ಹೂಡಿರುತೆನೆಲೆಯುನುಗೊಳಿಸಿರೆನಿ | ಪೀಡದಿಂಮೇಲ್ಕಟ್ಟಕಟ್ಟುತೆ | ನಾಡೆಮಣಿಮಯತೋರಣಗಳಂಮಂಟಪಕೆಕಟ್ಟಿ ||೨೦|| ಕದಳಿಕಾಸ್ತಂಭಗಳಮೂಲೆಗ | ಳೊದಗಿದೆಡೆಯೋಳ್ನಿಲ್ಲಿಸುತವಿಧ | ವಿಧವಿಚಿತ್ರಸುಕೇತನಗಳಂತರನೆರಿದುನೆಲಸೀ ಸದಮಳಸುವಸ್ತುಗಳಸಂಗ್ರಹ | ವದವಿಸುತೆಸನ್ಮಂಗಳಾನ್ವಿತ | ಸದನದಿವ್ಯವಿಲಾಸಲೀಲಾಸ್ಪದದಲಂಕರಣಂ ||೨೧|| ಪದುಳವಾಗಿರೆನೋಡಿಮೆಚ್ಚಿಸು | ಹೃದಯನಗಜಾರಮಣಶರಣಸ | ಮುದಯದಿಂದೊಡಗೂಡುತಾಗಲಪೂರ್ವಸುಖಮಯಸ|| ತ್ಸದನವದುಪರಿಶೋಭಿಸಲುಜರಿ | ಗಿದುದೊಡನೆಪ್ರತ್ಯೂಷಮಾಸಮು | ಯದವಿಧಿಯತೀರಿಸುತೆಶ್ರೀಚೆನಬಸವಪೇಶಿಕನೂ ||೨೨|| ಸಕಲಭಕ್ತಸಮೂಹಪರಿವೃತ | ಸುಕರದೀಕ್ಷಾಮಂಟಪದನೇ | ದಿಕೆಗೆಗಮಿಸೆತದೀಯಮಧ್ಯದಿಪೂರ್ಣಕುಂಭಗಳಾ || ನಿಕರದಿಂಶೋಭಿಸುತೆಶಿಖರ | ಪ್ರಕರಛಾತುಸ್ತಂಭದುಪರಿಯೊ | ಳಕುಟಲದಿ ಕೀಲಿಸಿರೆವಿಸ್ಮಯವೆನಲುಮೆರೆಯುತಿಹಾ ||೨೩|| ವರಪ್ರವಾಳಪ್ರಸೂನಗುಚ್ಛ | ಸ್ಫುರಿತಮುಕ್ತಾಫಲಸಮೇತಂ | ಸುರುಚಿರತರೆರೋಲ್ಲಸಿತಶೋಭಾಕರತೆಬಹುವಿಧದಾ || ಪರಿಮಳೋಪೇತಾತಿಶಯಸಂ | ಭರಿತಧೂಪಸುಧೂಮದಿಂಕರ್ಪುರದದೀಪದಿದೀಪಿತವದಾಗಿರ್ಪಮಂಟಪದಾ || ೨೪ ||
ಅಂತರಕ್ಕೆಪ್ರವೇಶಿಸುತ್ತವು | ಹಂತನಪರೊಳುಪಂಚವರ್ಣವ | ನಾಂತಚೂರ್ಣದಿಗೌರಿತಿಲಕವೆನಿಪ್ಪಚಿತ್ರತವಾ || ದಂತಹಂಛತೆಯರಚಿಸುತಂಚತು | ರಂತವಿಜ್ಞುಖಮಧ್ಯದೊಳಗೋ| ರಂತೆವಿಶ್ರಾಂತಸಿತಶಾಲೀತಂಡುಲಂಗಳನೂ ||೨೫|| ಅದರಮೇಲಷ್ಟಕದೊಳುಹರವಿಸಿ ! ನದಿಯಸಲಿಲಪೂರ್ಣಕಲಶಸ| ಮುದಯಮುಂನೆಲೆಗೊಳಿಸಿತತ್ಸ್ವಚ್ಛ ಮುಪ್ರದೇಶದೊಳೂ|| ಮುದದೊಳಾತ್ಮಧ್ಯಾನನಾಗಿವ | ಒಡವರೇಣ್ಯನುಮೆನಿಸಿಮೆರೆದಿಹಸದಮಲಾನಂದೈಕನಾಗಳ್ಕುಳಿತುತತ್ಕ್ಷಣವೇ ||೨೬|| ಚತುರ್ವಿಧಾಚಾರ್ಯರು

ಗಳೆನಿಸುವ । ಯತಿಗಳೆಂಬಾತುಃಕಲಶಸಂ । ಚಿತಸವಿಶಾಪದೊಳಧಿಕರಣ ರಾಗಿರುವತೆರದಿಂದರ ॥ ಅತಿಶಯದೆನಿಯಮಿಸುತೆಯುಳಿದಾ । ಸಿತಿಗಳ ಪ್ರತಿನಿಧಿಗಳೆನಿಪ್ಪಾ । ರ್ಜಿತಸುಭಕ್ತರಸಂಚಯವನುಚಿತಾಸನದೆನೆಲಸಿ ॥೩೬॥ ತನ್ನದೆನಲಾಮುಖ್ಯಕಲಶವ । ನುನ್ನತದೆಕೈಕೊಳುತಲವಭುಗ । ಳನ್ನು ಕೂಡಿಯುತಾನುತತ್ಕಲಶಂಗಳನುಗಂಧಾ ॥ ಭಿನ್ನ ಶುಭಾಕ್ಷತಪ್ರ ಸೂನಾ । ಸನ್ನಧೂಪಾವರ್ಣಮುಖಗಳಿಂ । ತೆನ್ನುವಾಸಕಲೋಪಚಾರ ಗಳಿಂಸಮರ್ಚಿಸುತೇ ॥೩೪॥ ಅದರಮೇಲ್ಭಾಗದೊಳುವಸ್ತ್ರದ । ಹೊದಿಕೆ ಯಾಛ್ಛಾದನವನೂಡಿಸಿ । ಸದಮಲಾನರ್ಘ್ಯಮಣಿಸಂಚಯಸ್ವರ್ಣಗಳನ ದರೋಳ್ ॥ ಒದವಿರುವಚೂತಪ್ರವಾಳವಿ । ಶದಸುತಾಂಬೂಲೀದಳಗಳಿಂ ಪುದಿದುತನ್ಮುಖದೊಳಗನೆಲಸುತಾಕಲಶಪಂಚಕದಾ ॥೩೯॥ ಸುತ್ತತಂತು ಸುವೇಷ್ಟನವಮಾ । ಡುತ್ತೆತತ್ಕಲಶಂಗಳಂಸ । ರ್ತ್ವೋತ್ತಮೋತ್ತ ಮವೆನಿಪಪಂಚಾಕ್ಷರಮಹಾಮಂತ್ರಂ ॥ ಮತ್ತೆಪಂಚಬ್ರಹ್ಮಮಂತ್ರಗ । ಳಿತ್ತಲಭಿಮಂತ್ರಿಸುತೆಸೌರಭ । ವೆತ್ತಉತ್ತರಧೂಪದೀಪಾರತಿಗಳಿಂದ್ಗೈ ಸೆಯೋ ॥೪೦॥ ಅಲ್ಲಿರುವಸದ್ಭಕ್ತಪುಂಗವ । ರೆಲ್ಲರಂವಿಭೂತಿತಾಂಬೂ । ಲೋಲ್ಲಸಿತಪೂರ್ವಕದೊಳಾರಾಧಿಸುತಲವರಿಂದೇ ॥ ಚೆಲ್ಲಸಿತದೀಕ್ಷೆಯ ನುಮಾಡ । ಲ್ಕಲ್ಲಿದರಮುಖದಿಂದಲಪ್ಪಣೆ । ಯೆಲ್ಲರಿಂಪಡೆವುತ್ತಲಾತ್ಷಣ ವೇಣುವೀಣಾದಿ ॥೪೧॥ ರಾವಗಳುಮೊರೆವುತಿರಲದರಿಂ । ದೇವೆಮುನ್ನವ ಗಾಹಿಯಾಗಿಸು । ಭಾವಿಕನುಭಸ್ಮಾಕ್ಷಮಾಲಾಭರಣನಾಗುತ್ತ ॥ ತೀವಿ ರುವಮಂಟಪದಪೂಜೆಯೊ । ಳೋವಿಮುದದಿಂಬಂದಿರುವನಿಜ । ಸಾವಧಾ ನದಸಿದ್ಧರಾಮಯ್ಯನನುಬಾರೆಂದು॥೪೨॥ ಕರೆಯುತಾತಂಪರಮಮುತ್ಸಂ ಭರದಿಬಂಧುಮಹೇಶಭಕ್ತನಿ । ಕರಕೆಸಾಷ್ಟಾಂಗಪ್ರಣಾಮುವನರ್ಥಿಯಿಂ ಮಾಡೀ ॥ ಹರಪುರಾತನರಾಜ್ಞೆಯಿಂಶ್ರೀ । ಗುರುಪದಂಗಳಿಗೆರಗಿಮುಕ ಳಿತ । ಕರಕಲಿತನಾಗಿರೆಕೃಪಾಲೋಕನದೊಳುಂಪೂರ್ವ ॥೪೩॥ ತನುವ ನೊದಗಿದಕರ್ತ್ರುವಡಗಿಸಿ । ವಿನಯದಿಂಮಂಟಪವಪುಗಿಸಿ । ಷ್ಯನನುಪೂ ರ್ವಾಭಿಮುಖನಾಗಲುಕುಳ್ಳಿರಿಸಿತಾನು ॥ ಸನುಮತೋತ್ತರಕಭಿಮುಖ ನುಮಾ । ಗನುಪಮಂತತ್ಕಲಶಪಂಚಕ । ದನಿತುಜಲದಿಂದಾಗಸಂಪ್ರೋಕ್ಷ

ಕ್ಷೆಸುತೊಡನೆಶೈವಾ ||೪೪|| ಚಾರಸಂಸ್ಕಾರನನುಮಾಡುತೆ | ವೀರಶೈವವಿಧಾನದೀಕ್ಷಾ | ಧಾರವಿಧಿಯೋಸರಿಸದಂದದಿತನುವಿನಂಡಲೆಯಂ || ಪೂರವಾಡಿಸ್ವಯೆಂಭುವೆನಿಸುತೆ | ಸಾರಸುಖವಂಧೋರುತೆಭವದ | ಬೀರಕತ್ತಿಡಾಡಿಮೇಣತ್ತಾಲಸಂಗ ತದ||೪೫|| ಭೇದದುರ್ಲೇಖಂಗಳಡಗುವ | ನಾದಿಚಿದ್ಭಸಿತೈಕಪಟ್ಟವ | ಸಾದರದೆತಾಂಕಟ್ಟಿನಿಜಹಸ್ತಾಬ್ಜಸ್ಪರ್ಶನದಿಂ || ಮೋದದಿಂದಾಸಿದ್ಧರಾಮನೊ | ಳಾದತನುಗತಪಂಚಭೂತಗ | ಳಾದಿವೈಕಾರಿಕವಡಂಗಿಸಿಯನುಪಮಿತಪಂಚ ||೪೬|| ವರ್ಣಮಂತ್ರವಸುಗ್ರಹಿಸಲಾ | ಕರ್ಣಮಾತ್ರಂಮೋಹತಿಮಿರಾ | ಕೀರ್ಣಹಂಕಾರಾದಿಗುಣವಿರಹಿತನುಮಾಗಲ್ಕೇ || ಪೂರ್ಣಪರಬ್ರಹ್ಮಂವಿರಿಂಚಿಸು| ಪರ್ಣಗಮುನರುಗಳಿಗೆಸಿಲ್ಕದ | ನಿರ್ಣಯಾತೀತನುಸದಾಸರ್ವಗತನೆಂದೆನಿಪಾ ||೪೭|| ಪರಶಿವನನವಯುವವಿರಹಿತನ | ಸುಸ್ಥಿತರಜ್ಯೋತಿರ್ಮಯಾಕೃತಿ | ನಿರವಧಿಕನಿರ್ವಿಕೃತಿನಿರ್ದ್ವಂದ್ವಶಿವಲಿಂಗವನೂ || ಕರದಿನಿಲ್ಲಿಸುತಾರುಮಾರ್ಗಗಳಿರವೆನಿಜವೆಂದದನೆತಿಳುಹಿಸಿ | ನಿರತನಿರ್ಲೇಪಕವದಾಗಿಹನಿಲವನೆಲೆಗೊಳಿಸೀ ||೪೮|| ಪಂಚವಿಷಯುವಿರಹಿತನಾಗಳೆ | ಪಂಚವಿಧಮೃತಸ್ನಪನಗಳ | ನುಂಚಲನೆಯೆಣುಮಾತ್ರವಿಲ್ಲದತೆರದಿಮಾಡುತೆನಿ || ವಂಚಕವಿನಿಖಿಲೋಪಚಾರವ | ಪಂಚಮುಖಶಿವಲಿಂಗಕೆಸಗಿಮು | ದಂಚಿತಪದೇಶಿಕನುನಿಜಪ್ರಿಯಶಿಷ್ಯನುತ್ತಮದಾ ||೪೯|| ಅಂಗದೊಳಗಣಚಿತ್ಕಲೆಯಕರಕಂ ಗಮಿಸಿದಂಭಾವದನುಗತ| ದಿಂಗಿತವಿಕಂಡದನೆಯೂಕರ್ಷಿಸಿಮಹಾಘುಂತ್ರ || ಸಂಗದಿಂದೆಪ್ರತಿಷ್ಠಿಸಿದನಾ | ಲಿಂಗದೊಳುಸತ್ಪ್ರಾಣಭಾವದ ಮಂಗಳಾತ್ಮಕವನಾತ್ಮಶಿಷ್ಯನಕರಕೆತಾನಿತ್ತೂ ||೫೦|| ಗುರುವರಂತಲ್ಲಿಂಗಮೂರ್ತಿಗೆ | ಪೆರತೆನಿಸದೊಲುಪ್ರಾರ್ಥಿಸುತಲಿಂ| ತರುಹಿದಂಶಿವಲಿಂಗಮೂರ್ತಿಯೆಪರಮದೃಢಭಕ್ತಿ || ಪರಿಚಯನುಮೆಂದೆನಿಸುವೀತನ | ಶರಿರಮನಭಾವಗಳೊಳುನೀಂ| ಭರಿತವಾಗಿರುಎಂದುಮಗಲದವಿಧದೊಳಿಂತೆಂದೂ ||೫೧|| ಆಮಹಾಲಿಂಗವನೆಪ್ರಾರ್ಥಿಸಿ | ಪ್ರೇಮದಿಂದಾಶಿಷ್ಯನನುಕಂ | ದೀಮಹಾಲಿಂಗವನೆಪ್ರಾಣವದೆಂದುಭಾವಿಸುತೆ || ನೇಮದಿಂಪಂಗದೊಳುಧರಿಪುಸ | ದಾಮನೀಷಿಯೆತೊಲಗಲಿದುನೀ | ಪ್ರೇಮದಿಂತನುವಾಕ್ಷಣದೊ

ಳೀತ್ಯಜಿಸಬೇಕೆಂದೂ ॥ ೫೦ ॥ ಕೀಲಿಸುತ್ತಂಲಿಂಗಡಕ್ರಿಯಾ । ಜಾಲ
ದೊಳುನಿಪುಣನುಮೆನಿಸುತಂ । ಲಾಲಿತಪ್ರಸಾದಾಂಗನಂಲಕ್ಷಣದಿಮಾ
ಡುತ್ತ ॥ ಮೂಲವಾಗಿಹಪ್ರಾಣವಾಯ್ವಾ । ಭೀಲವೃತ್ತಿಯುಸಡಲಿಸುತೆ
ಸ । ಲ್ಲೀಲೆಯಿಂಶಿವಲಿಂಗಪ್ರಾಣನುಮೆನಿಸಿಭವಭಾರಂ ॥೫೧॥ ನೀಗಿಜೀ
ವನ್ಮುಕ್ತಿಕಾರಣ । ವಾಗಿರುವನಿಜವೀರಶೈವನು । ಯೋಗರಹಸ್ಯಂಗ
ಳಿಲ್ಲವನೋಜೆಯಿಂತಿಳುಹೀ ॥ ಬೇಗದಿಂತೀರ್ಥಪ್ರಸಾದನು । ಭೋಗನಂ
ಮಾಡಲ್ಕೆನಿಜವೈ । ರಾಗಿಯೆನಿಸುವಸಿದ್ಧರಾಮೇಶ್ವರನುತತ್ಕ್ಷಣದೀ॥೫೨॥
ನಿರುಪಮಾನಾನಂದಪರವಶ । ಭರಿತಚೇತಸ್ಸಾರವೈಭವ ।ನಿರತಿಶಯುನಿಕ್ಷೇ
ಪನಿರಘನಿಸ್ತುಲಸುಖಾದ್ವಂತ ॥ ವಿರಹಿತಾವ್ಯಯಬ್ರಹ್ಮವಾಗಿಹಪರಮ
ಲಿಂಗವಕರುಣಿಸಿದಶ್ರೀ । ಗುರುವರಾಧಿಕಮೂರ್ತಿಚನ್ನವೃಷಾಧಿಪನಪಾ
ದ ॥೫೩॥ ಪಂಕಜಂಗಳಿಗೆರಗಿದೇವಾ । ನಿಃಂಕರುಣದೆಶೆಯಿಂದೆಗುರುಚ
ರ । ಸಂಕುಲಾಂಘ್ರಿಸಪರ್ಯೆಗಳಮಾಡುವಸುಭಾಗ್ಯವನೂ ॥ ಭೋಂಕನೇ
ಕೈಸೇರಿಸಲುತವ । ಲೆಂಕರಾದಿವ್ಯಪ್ರಸಾದದ । ಸೋಂಕ್ಯಸಚ್ಚಿತ್ತಾಸ
ಖ್ಯವಾಗಿರೆನೆಲಸಿಸದ್ಭಕ್ತ ॥೫೪॥ ಶ್ರೇಷ್ಠರೊಳುಪೆಸರ್ವಡೆದೆನೆಂದು ।
ತ್ಕೃಷ್ಟವಾಕ್ಯವಿತಾನದಿಂನಿಜ । ನೈಷ್ಠಿಕರೊಳತಿಶಯಫಣಿತಿಯಿಂಸ್ತೋ
ತ್ರವಂಮಾಡೀ ॥ ಕಷ್ಟರಹಿತಾಜ್ಞಾಸ್ವರೂಪವಿ । ಸಿಷ್ಟರಲ್ಲಿರುತಿರ್ಪ
ಸುಗುಣಗ । ರಿಷ್ಯಗಣಸಂತತಿಯದೊಂದೇವಾಕ್ಯಮುಖವಾಗೀ ॥೫೫॥
ನಳಿನಸಂಭವಮುಖ್ಯಸುರರಿಗೆ । ತಿಳಿಯದವೊಲೇಪೊಳೆವದಿವ್ಯಾ । ಮಳ
ನಿಜಾಮೃತವೆಂಬುವುದುಮತಿಕೌತುಕವಿದೆನಲು ॥ ಸುಲಭದಿಂಪೊಂದಿಹ
ಸುನೇಮವು । ಛಲರೆಛಲಶ್ರೀಸಿದ್ಧರಾಮಾ । ಮಲಹರಾತ್ಮಕಭಾಪುಪಾ
ವನನಾಮನಿಸ್ಸೀಮಾ ॥೫೬॥ ಸಾರಮಲಯಕುಜದೆಸುಮುಪುವಿ । ಸ್ತಾರ
ಮಾಣಿಕ್ಯದೊಳುದೀಪವ । ಪಾರಸುಧೆಯೊಳ್ಸೇಗುಹಾಟಕವಲ್ಲಿಸದ್ಗಂ
ಧಂ ॥ ಚಾರುಪುಂಡ್ರೇಕ್ಷುವಿನೊಳುಫಲವು । ಸೇರಿಚಿತ್ರದಬೊಂಬೆಯೊಳ
ಗಸು । ಪೂರವೆನಿಸಿದತೆರದೆನೀಂಪೊಂದಿರುವದೀಕ್ಷೆಇದೂ ॥೫೭॥ ಎನು
ತೆನುತಿಸುವಪ್ರಮಥರಿಗೆಶ್ರೀ ! ಚೆನಬಸವದೇಶಿಕನೊರೆದನೀ । ಯನಘ
ನಾಬಾಲ್ಯದೊಳುಮನಕೆನಿಲುಕದಶ್ರೀಗಿರಿಜಾ ॥ ಇನಯನೆನಿಸ್ಸೀಮಲ್ಲಿ

ಕಾರ್ಜುನ | ಘನಮಹಿಮನಂತಂಡನಾತ್ಮಸ | ಜನವೆನಿಸುತಿಹಸೊನ್ನಲಾ ಪುರವೆಡೆಗೆಜೋದ್ಯವೆನೆ ||೬೦|| ನಿಲ್ಲಿಸಿದನಡುಕಾರಣದೊಳೀ | ಬಲ್ಲಿದನ ಚರಿತೆಯುಮಬ್ರಾಹ್ಮಿಕ್ರೀ | ವಲ್ಲಭಗೆಗಣಿಸಲುಮಶಕ್ಯವಚೆನಲುಕೌತುಕ ದೀ || ಎಲ್ಲಪ್ರಮಥಗಣಂಗಳುಂಪರಿ ವೋಲ್ಲಸನದಿಂಚನ್ನ ಬಸವಣ | ಬಲ್ಲಿ ವನನೀಕ್ಷಿಸುತಲಾಪವಿಧವೊಳುಶ್ರೀಮಲ್ಲೀ || ೬೧ || ನಾಥನಂಕರತಂಡ ನೋತ | ತ್ಖ್ಯಾತಚರಿತೆಯುಕೇಳ್ವವಾಂಛೊೀ | ಪೇತರಾಗಿರುತಿಹೆವೃತ್ತ ದ್ವಿಧವಹುಜಬೇಕೆನಲೂ || ಶೀತಲಾಗತನೂಭವಾಧಿಪ | ಜಾತನಪಪವತಾ ರನತಿಶಯ | ಪ್ರೀತಿಯುತಸದ್ಭಕ್ತಿಯಿಂಕರಕಮಲಗಳಮುಗಿಡೂ ||೬೨||

ಅಂತು ಸಂಧಿ ೧೫ಕ್ಕಂ ಪದ ೯೫೪ಕ್ಕಂ ಮಂಗಳಮಹಾ.

---

## ಹದಿನಾರನೆಯ ಸಂಧಿ

### ಸಿದ್ಧರಾಮೇಶ್ವರನು ಮಲ್ಲಿಕಾರ್ಜುನನಂ ತಂದ ವಿಷಯವು

---

ಸೂಚನೆ || ಮಲ್ಲಿನಾಥನಸಿದ್ಧರಾಮಯ | ನೆಲ್ಲರರಿಯಲುಸೊನ್ನ ಲಾಪುರ | ದಲ್ಲಿನಿಲಿಸಿದನಿರದೆಬುಧರುನುತಿಸಲುಶ್ರೀಗಿರಿಯ ||

ಪದ || ಪ್ರಮಥಗಣಾಧೀಮಣಿಗಳೇತ | ತ್ಕ್ರಮವನರುಪುವೆನಾಪ ಗಂನಿರು | ಪಮುಪಸೊನ್ನಲಿಗೆಯಪುರಾಂತರವಲ್ಲಿಮುದ್ದಯ್ಯಂ || ಸುಮ ತಿಯೆಂಬವನಿರಲುಶಿವಪದ | ಕಮಲಷಟ್ಚರಣನುಮೆನಿಪನ | ದ್ವಿಮಳಭಾ ಕ್ತಿಕನಾದಪಾವನನೀತನಂಪಡೆದೂ ||೧|| ಶಿವಕೃಪೆಯಿನಂಗನೆಯೊಡನೆ ತಾ | ನವಿರತಮತಿಪ್ರೀತಿಯಿಂದಿರೆ | ದಿವಸದಿವಸಂವರ್ಧಮಾನದಿಬೆಳವು ತಂತನ್ನ || ಕವಲೆನಿಪಗೆಳೆಯರುಗಳೊಡನು | ತ್ಸವದೊಳಾಡುತಲಿರ್ದು ಥಾಂಶೈ | ಶವಸುಕ್ರೀಡೋಪೇತನಾಗಿರುತಿರ್ಪಸಮಯದೊಳೂ ||೨|| ತಾ

ಯಿತೆಂದೆಗಳುನಿರವಿಸಿದರು | ಪಾಯದಿಂಗೋವತ್ಸಗಳನೆರೆ |ಕಾಯಲುಂ
ತೆರಳ್ವಾಗಗೋರ್ವ್ವಡಿಚೆಣ್ಣಮುಂಡಾಸಂ || ಆಯತದಕೈಕೋಲುಕಿರಿ
ಷಿ | ಟ್ಟಾಯಥೋಚಿತವಿಧದಪಿಲ್ಲಂ | ಗೋಯಿಕೈಯೊಳಗಿರೆಪೋಲಗ
ಳಂಸೇರುತಿರೆಮುಂದೆ ||೩|| ಶ್ರೀಗಿರೀಶ್ವರನಂಘ್ರಿದರ್ಶನ | ವಾಗಬೇಕೆಂ
ಬುವಬಯಕೆಯಿಂ | ಪೋಗುತಿರ್ಪಸರ್ವದೇಶಾಗತಮನುಜರುಗಳಂ ||
ಬೇಗದಿಂಕಂಡಚ್ಚರಿವಡೆವು ! ತೀಗಳಿವರೀಪರಿಯುಮೇಳಪ| ದಾಗಲಾವೆ
ಡೆಗೈದುವರೊಎಂದೂಹಿಸುತೆಪೋಪ ||೪|| ಮನುಜನಿಕರದೊಳಾಶ್ರುತಿ
ಸ್ಮೃತಿ| ಘನಶಿವಾಗಮವೇದಿಗಳೆನಿಪ | ಮನಸಿಜಾಂತಕಶರಣರಗ್ರಣಿ
ಯಾದವರಕಂಡೂ || ವಿನಯದಿಂಕೇಳಿದನುಕಾವಡಿ | ದಿನಸುದಿನಸಿನಬು
ಟ್ಟಗಳುನಿಡು | ದೆನಿಪಸೋರೆಯಕಾಯಿಗಳುಕಂಟಲೆಗಳೆತ್ತುಗಳೂ ||೫||
ಪೊತ್ತುನಡೆಯಲ್ಭಾರವಾಯಿತೆ | ಸುತ್ತನಡೆಯುವವೊಟ್ಟೆಯವರ್ಗ್ಗಳ|
ವೊತ್ತುಮುಂವಿಧವಿಧದಿಪೋಗುವನೇಕಜನರುಗಳೂ|| ಎತ್ತಪೋಪರುಎನ
ಗೆಬೇರ್ವಡಿ | ಸುತ್ತನೀವುಗಳರುಹುವುದೆನೆನ | ಗುತ್ತೆಯಭಿಮುಖರಾಗಿ
ಪೇಳಲ್ತೊಡಗಿದರುಮುಡದೀ ||೬|| ಮುನಿನಿಕರವಿರುವೆಡೆಯುಭಾಕ್ತಿಕ |
ಜನರಿಗಂಗಣದೊಳಸಿರಿಯುಮಾ | ವನವೆನಿಪತೀರ್ಥಾಳಿಗಳಸಂಭೂತಹೇ
ತುಕವು || ಘನತರದಸುರಸಂತತಿಗೆನೆಲೆ | ವನೆಯನಿಸುವಚ್ಚರಿಯುತಾ
ಣಂ| ಜನನಭೂಮಿಯುಮುಕ್ತಿಕಾಂತೆಗೆಶೈಲಜಾಧವನಾ || ೭ || ವರನಿ
ಹಾರಸುದೇಶವೆನಿಸುತೆ | ಮೆರೆವಶ್ರೀಶೈಲವನುನೋಡಲು | ಭರದಿಪೋ
ಪರೆನಲ್ಕೆಮುಗುಳ್ದಿಂತೆಂಡನವರೊಡನೆ || ಪರಿಪರಿಯುಗುಂಪಾಗಿನೀವೆ|
ಲ್ಲರುಗಮಿಸಲಲ್ಲೇನುಕಾರಣ| ವಿರುಪ್ಪುದುಮುದುವೆಯಾಗುವುದೊನೆಂಟ
ರುಗಳಿರುತಿಹರೋ || ೮ ||ಪೇಳಬೇಕೆನಲಾಗವತ್ಸನೆ| ಕೇಳುನಿಖಿಲಸು
ರಾಧಿನಾಥಕ್ಕೆ | ಪಾಳುವೆನಿಸುವಮಲ್ಲಿಕಾರ್ಜುನನೆಂಬಪೆಸರಾಂತ || ಭಾಳ
ಲೋಚನಚಂದ್ರಮೌಳಿಕ | ರಾಳಶೂಲಧರನನುಕಾಣಲು | ಪಾಲಿಯಿಂ
ಪೋಗುವೆವೆನಲ್ತಾನರುಹಿದಂಸಿದ್ಧಂ||೯|| ಘನದಶ್ರೀಗಿರಿಮಲ್ಲಿಕಾರ್ಜುನ |
ನೆನಲುಮೌನಿಯೊಪೇವಸೋಯಿಳೆ | ಮಿನಯನೋತದ್ವಿಧವತಿಳಿಸೆಂ
ದಾಗನುಡಿಯಲ್ಕೇ || ವಿನಯವಾಕ್ಯವಕೇಳಿದಾಕ್ಷಣ | ಮನವರಳಿಂದುವ

ರಂಪರಾಬಾ । ಲನಕುರಿತುತಾಪಸನುಮಲ್ಲರಸಾಧಿಪನುಮಲ್ಲ ॥೧೦॥ ದೇ
ವತಾಧೀಶ್ವರನೆನಿಪಮಹ ।ದೇವನೆನ್ನಲದೆಂತಿರುವನಾ । ದೇವರಿರುವಂದವ
ನುನಾನಿನಿತರಿವೆತಿಳಿವಂತೇ ॥ ನೀವುಪೇಳಿರೆನಲ್ಕೆಕರುಣಾ । ಭಾವಧಿಂ
ಪೇಳಿದಹುಕಯ್ಯೊಳು । ಕೇವಲಾಭೀಲಾಂಕಿತದುರುತ್ರಿಶೂಲವಿರುತ್ತಿಪ್ಪ
ಪ ॥೧೧॥ ತಲೆಯೊಳಗೆನ್ನೆದಿಲೆಗೆಳೆಯನುರೆ । ನೆಲಸಲರೆಮೈವೆಣ್ಣಿಕಂ
ಜಿಡೆ । ನೆಲೆಯೊಳಾಬಾಂದೊರೆಯುಪುಲಿದೊವಲುಡಿಗೆಯುಂದೃಢದಾ॥
ಬಲದಪಾವದಿಗಂಡುಪೆಂಡೆಯು । ವುಲಿವುತಿಹಜೀಜಿಗಳಜೀಜನು । ಜೆಲು
ವೆಸೆವಬಿಳಿದಾಡಪತ್ತಿನಮೇಲೆಕುಳಿತಿಹನೂ ॥೧೨॥ ಪಾವುದೊಡಿಗೆಯುಗ
ಳದೊಳುವಿಷವು । ಜೀವಿಗಳಹಣೆಯಲ್ಲಿಬರೆವಸ್ವ । ಭಾವಿಕನತಲೆಯೋ
ಡುಕ್ಕೆಯೊಳುಹಣೆಯೊಳಗೆಬೂದಿ ॥ ಪಾವನದರುದ್ರಾಕ್ಷಸರಗಳ । ತೀ
ವಿಪಯ್ಯನಹೊಲಬನರಿಯು । ಲ್ಯಾವನಳವಪ್ಪದದುಯೀಭುವನತ್ರಿತಯ
ದೊಳಗೇ ॥ ೧೩ ॥ ಎನಲುವೂಜೀಜಿಗಳದೊರೆಯುಂ । ಬನನುಕಾಂಬಾ
ಪೇಕ್ಷೆಯೂಪುಪು । ಮನವ್ರೊಲಿದುಕರದೊಯ್ಯೆಬರುತಿಹೆನಾನುನಿವ್ರೊತ
ನೇ ॥ ಘನಮಹಿಮನಂತೋರೆನಲುಡಿಂ । ಬನವೊಗವನೋಡುತ್ತಲೆಂದ
ರು । ಬನದಿಜೆಟ್ಟಗಳೇರಿನಡೆದನ್ನವಡುಕಾಲಕ್ಕೆ ॥ ೧೪ ॥ ಉಂಬಲಿಲ್ಲವು
ಮತ್ತೆಬಿಸಲಿನೊ । ಳುಂಬಳಲಿಬೆಂಡಾಗುತಂಯೀಂ । ಪಂಬಲಿಪೆಚಿಕ್ಕನ
ನುತಾಯ್ತಂದೆಗಳುಮಾಪ್ತಜನಂ ॥ ಬೆಂಬಳಿಯೊಳಿರದಿರಲುನಿಮ್ಮವ
ರಂಬಿಡುತೆಬರುತಿಹೆನುನಾನೆಂ । ದೆಂಬುದಿದುವಿಪರೀತನಾವ್ತೆರಳುವೆವುತ
ಡವಾಯ್ತು ॥ ೧೫ ॥ ಜನರುಗಳುಮುಂಪಕ್ಕೆಪೋದರು । ಎನಿತೊದೂರ
ದಾಯ್ತುಪೋಗುವೆ ವೆನಲುಮತ್ತಿಂತೆಂದನೀದಾರಿಯೊಳುಸಂಕಷ್ಟಂ॥
ಎನುತಲಂಜಿಸಿನುಡಿಯಬೇಡಿರಿ । ಯನಘರೇನನ್ನೊಲಿಪಬಾಲಕ । ರನಿ
ಬರುಂಟದೊನೋಡಿಹುಡುಗರಜೊತೆಯೊಳಗೆನಿಮ್ಮ ॥೧೬॥ ಚಿನ್ನಬಿಡದ
ಲೆಬರುವೆತಾಯೊಳು । ಮುನ್ನತಮುಪಂಬಿತಬಹುದುಪರ । ವೋನ್ನತಧ
ದೇವರನುಕಾಂಬುವಭಾಗ್ಯವಳವಡಲೂ ॥ ಎನ್ನಲವರಾಬಾಲಕನಬರ ।ಲೆ
ನ್ನುವುಡುವ್ರೊಳಿತಲ್ಲವಿವನಂ । ಮುನ್ನವೇಬರಬೇಡವೆನ್ನಲ್ಬಾರದೆಂದುನಿ
ಜ ॥೧೭॥ ಪೃನ್ನಳಿನಸಂಶಯುದಿಶರಣಚ । ಯೋನ್ನತಂಮುಂದಕ್ಕೆನಡೆ

ಯೊಲು । ಚೆನ್ನಬಳಿಯೊಳುಬರುವಬಾಲನಕಂಡುಮುದಕವೊಳೂ ॥ ಇನ್ನುಬಿಡಲಹುದೇವಿನುತಲವ । ನನ್ನುಬಳಲಿಸದಂತೆಶ್ರೀಗಿರಿ । ಯುನ್ನತವನತಿಯುದಧಿನೋಡುತಪೋಗುತಾಸ್ಥಲದೀ ॥೧೮॥ ಇರುವವಮಹಿಮಾತಿಶಯವಿಂತೆಂ । ದೊರೆದುತೋರಿಸನತಿಕರುಣದಿಂ । ಪರಮತೀರ್ಥವಿತಾನವಿಪುಷುರಿತಚಯಹರಕುಂಡ ॥ ಪರಿಕರವೃಷಭನಮಹಿಮಮಂಟಪ । ದಿರವಿಧುವೆವನನಿಕರವಿಪುಗೋ । ಪುರವಿರಾಜಿತನಂದಿಭೃಂಗಿಗಳಿವುಶಿಖರಶಾಜಿ ॥೧೯॥ ಇದುವೆಖನಿಯಿಧುನದೀನದಜಾ ।ಲಧವಿಶಾಲಸುಸಾಲವಿಧುಗಂ। ಧದಪ್ರವಾಹವುಮೂಲಿಕೋತ್ಕರವಿವುಸರಂಗಳುಸಂ ॥ ಮದಮುನಿಸ್ಥಾನಂಗಳಿವುಸಾಂ । ಪ್ರದಪರಿಘಸದ್ವಾರವಿದುಚಿ । ತ್ರದೆಸುಪುತ್ತಳಿಗಳುರಥಗಳಿವುಶಕ್ತಿಗಳುಜ್ಯೋತಿ ॥೨೦॥ ಗಳುಮಹಾಕುಳಗಳುಇವೇಮಠ । ಗಳುಇವೇಭನಸಿಲೆಗಳುಂಥಳ । ಥಳಿಪಸ್ವರ್ಣಶಿಗಳಸಮುದಯುವೆನುತಲಾಶ್ಚರ್ಯ ॥ ಗಳನುಬೀರ್ಪಡಿಸುತ್ತತೋರಿಸಿ । ಲಳಿತವಜ್ರೇವಲಸುಕುಡ್ಯಂ । ಗಳಪ್ರಕಾಶಧಿಶಾತಕುಂಭಸ್ತಂಭಸಂಚಯದಿಂ ॥೨೧॥ ಮೆರೆವವೈಡೂರ್ಯಮಣಿವಿರಚಿತ । ವರಕವಾಟಸುದೀಪ್ತಿಯಿಂಭಾ । ಸುರಮಸ್ತ್ವದ್ರತ್ನಜಾಲಕಸಮುದಯದೊಳಧಿಕ ॥ ವರಿಮಳದಧೂಪಪ್ರಕಟವರಿ । ಕರದಿಗಂತಾಕ್ರಾಂತದಿಂದಾ । ಜ್ವರಸಕರ್ಪೂರಪ್ರದೀಪಂಗಳಿನಖಿಳದೇಶ॥೨೨॥ ಥಿಂದೆಬಂದಿರುತಿರ್ಪಮಾನುಷ । ಬೃಂದದಿಂವೇತ್ರಾನ್ವಿತರುಗಳ । ಬಂಧುರದಿಭಟುತರಚತುರ್ವಿಧವಾದ್ಯಭಾಸುರದಾ ॥ ನಂದವಿಂವೇದಾಂತಪಾಠಕರಿಂದಲನುಸಗಣಿಕೆಯುರಂಪಳಿ । ವಂದದಸುನರ್ತಕಿಯರಿಂರಾಜಿಸುತಮೆರೆಯುತಿಹಾ ॥೨೩॥ ಭೂತನಾಥಾಲಯುವಪ್ರೊಗುತಂ । ಭಾತರಳನೀನೆನುತೆಹಸ್ತಾ । ಬ್ಜಾತದಿಂಬಾಲಕನಹಸ್ತವಪಿಡಿವುತಾಚರನೂ ॥ ಸ್ಫೀತಭಕ್ತಿಸಮೇತಮರ್ತ್ಯ । ವ್ರಾತಸಮ್ಮರ್ಪನನನೋಸರಿ । ಸೀತೆರದೊಳೊಳಪೊಗಿಸಿಬಾಲನನೀಶ್ವರನಮುಂದೇ ॥೨೪॥ ನಿಂದುನಿಟ್ಟಸುತೆಂದನೀತಗೆ । ವಂದಿಸೈಸಪಯಾಂತರಂಗಾ । ನಂದಶ್ರೀಗಿರಿಮಲ್ಲಿಕಾರ್ಜುನಮೂರ್ತಿನೋಡೆನಲೂ ॥ ಕಂದನೆಂಡನುಈತನಾಬಾ । ಲೇಂದುಶೇಖರನೇವಳಿತುಹರ । ತಂದುಸತಿಲೇಸಾಯ್ತುನಿನ್ನಾತ್ಮಾಂಬುಜದೊಳಾವ ॥೨೫॥ ಶ

ಘನದಿಂನೀಂತೋರಲುಜ್ಜುಗಿ | ಸಿಪಪೆನಾಂಮರುಳಲ್ಲದೇವರ | ವೇದಗಳಂ
ನೆರೆತೋರಿಸೈಈ ಚತುರತೆಯನುಳಿದೂ || ಮುದದಿದೇವರನಡಗಿಸದಿ
ತೋ | ಪೂರ್ದುಡಯಾವುತ್ತಿಯಿಂದೆನಲುಕೇಳ್ | ವಿದಪರೇಣ್ಯನೊರೆದ
ನುಬಾಲಕನೊಡನೆಎಲೆತಮ್ಮ ||೨೬|| ನೀನುನುಡಿವದ್ಭುತದವಾಕ್ಯವಿ
ಧಾನವೇತಕ್ಕೆನ್ನಮನದನಿ | ದಾನವರಿಯದೆಸ್ವಾಮಿಯಿಂತ್ರವನಲ್ಲವೆಂಬು
ದಕೆ || ಏನುಲಕ್ಷಣವಂತುವುಲ್ಲದ | ಯಿಹನಿಖಿಲಮರ್ತ್ಯಾಳಿಭಕ್ತರ |
ಜ್ಞಾನುಭವದಿಂಬಂಡುವಾಂಛಾಫಲವಿತಾನಗಳ ||೨೭|| ಬಯಸಿಬೇಡಲು
ಕೊಡಿಬಲೆನಿ | ಶ್ಚಯದಿಪಾಸ್ಥನೆಗಳನುತ್ತೀರಿಸಿ | ಪಯಣವಾಗಿರ್ದವರ
ನೋಡೈನಿನ್ನೊಡನೆಯಂತೊ || ನಿಯುತಿದಪ್ಪಿತೆಹಾಸ್ಯಗೈವೆನೆ | ದಯೆ
ಯುದಿವಸದವರಂತೆನಾನೆನೆ | ರಘುಪೋಳಾಬಾಲಕನುಮಂದಸ್ಮಿತದೊಳು
ಸಿರಿದನೊ ||೨೮|| ಸ್ವಾಮಿಗಳೆಪರಿಹಾಸವೆಂಬುದು | ನೇಮಿಸಲುಬೇಕುಂ
ಟೆಶರ್ಕರೆ | ಯೈವುಗುವೆಕೋಎಂದುಪಿಟ್ಟಂಕೊಟ್ಟತೆರನಾಯ್ತು || ಧೀ
ಮಹಿತರಾಗಿರ್ಪನಿಮ ಗಾ | ಪಾಮರಂತರರುಪೆಸಮರ್ಥರು | ಪ್ರೇಮದಿಂ
ತೋರಯ್ಯಮುನ್ನೊರೆದಿರ್ದದೇವನನೂ ||೨೯|| ಎಲ್ಲಿಹುದುಬಾಂಬೊಳ್
ಯುಮಂಡೆಯೊ | ಳೆಲ್ಲಿಹುದುಕೆಯ್ವಲ್ಲಿತಿಸುಳವು | ಎಲ್ಲಿಹುದುಕೊರಳಡೆ
ಯೊಳಗೆಕಪ್ಪಾನೆದೊಪಂಬುದಿಗೇ || ಎಲ್ಲಿಹುದುತಲೆಯೋಡುತಿಂಗಳ | ನ
ಲ್ಲಿರುವನರೆಮುಯ್ಯನೇತ್ರಯಿ | ವಿಲ್ಲದರೆಜೇಜೆಗಳೆರೆಯನೆನಲೆಂತುಮನು
ಕರಿಪೆ ||೩೦|| ಎನಲುಕೇಳುತೆಚರವರಂನೀ | ನನಿತುಕೇಳಿದುದೆಲ್ಲಸಾವ
ಯು | ದನುಪಮುಸುಚಿನ್ಹೆಗಳುಸಾಮಾನ್ಯದೊಳುಕಾಣಿಪವೇ || ಮನದಿ
ಭಾವಿಸಬೇಕದಲ್ಲದೆ | ಜನರುಗಳವಿಕಳೇಕ್ಷಣಕೆಪಾ | ವನವೆನಿಪಚಿನ್ಮ
ಯುಸ್ವರೂಪದುವಶವೆನೋಡಲ್ಕೆ ||೩೧|| ಹೃದಯದೊಳಗೆಡೆಗೊಂಡಸಂ
ಶಯು | ವೊದಲಿಗಿಲ್ಲದತೆರವೆಬಿಟ್ಟೆ | ಸದಯನಾಗಿರುತಿರ್ಪಮಲ್ಲೇಶ್ವರ
ನನುರೆನಂಬಿ || ಮುದದಿಸನ್ನುತಿಗೈದುನಮಿಸುವು | ದಿದೊತಿರುಗಿದರುಜ
ನರುನೀಕಡೆ | ವೃಷಮುರುಳ್ತನೆದಬಿಡುಬಿಡೆನೆಬಾಲಕಂನುಡಿದಂ ||೩೨||
ಪುರಸ್ಮರಾಂತಕಮದಹರನುಪಾ | ಮರರದೃಷ್ಟಿಗೆಕಾಣಬರುವನೆ | ಪರ
ಮನಿರ್ಮಳರಾದಸದ್ಗುಣಿಗಳನಯನಗಳಿಗೆ || ಸ್ಫುರಿಸುತಿಹನೆಂದೊರೆವುದಿ

ಮುವೇ | ಳರಿದೆನಿಮ್ಮಂಕೇಳೆನೀವಾ | ವರದಿಪುಮ್ನಾಡಿಪುದತಪ್ಪಿಸದೆನ್ನ
ನುಂನಣ್ಣ ||೩೩|| ಪುಡುಗನಂಬಳಲಿಸುತಿರುವುದಿದು | ಒಡೆಯರಿಗೆನ
ಧ್ವರ್ತ್ಮವೇಯೆನ | ಲೊಡನೆತಜ್ಜಂಗಮುವರಂಬಾಲಕನೊಳಿಂತೆಂದಂ||ಮೃ
ಡನಪಂತಿಹನೆಂದುದಕೆನಿ | ನ್ನೊಡನೆನುಡಿದೆವದೀಗವರಶಿವ | ನಡಿಗಳಿಂ
ಕಾಣಿಸಲಳವೆಎಮ್ಮಂತೆಹಜಡರಿಗೇ ||೩೪|| ಧ್ಯಾನಗಮ್ಯನೆನಿಸಿಮೆರೆವನು
ಹ | ಡಾನಿಯಾತ್ಮದಯಾನುಗುಣದಿಂ | ತಾನೆಸನ್ನಿಧಿಯಾಗಬೇಕಲ್ಲದೊ
ಡೆಕೆಧರಣೀ || ಮಾನುಷರುಭಜಿಯಿಸುವತತ್ವವಿ | ದೇನಿಜವುಬೇರಿಲ್ಲವೆ
ಪರಿಂ | ದೀನಿಮಿತ್ತದೆಭಕ್ತಿಯಿಂಶರಣಾಗುಬರುಜನರೂ ||೩೫|| ಮುದಲಿ
ಪೋಪರುಬಳಿಕನಾವಿ | ಲ್ಲಿರಲಿಕಾಗದುಪೋಗಬೇಕತಿ | ಭರದಿವಾಧಿಸಬೇ
ಡವಾಸಿಸುತಿರುವಶಾವಿಂಗೇ || ತರಳಬಾರಾಎನುತಲಾತನ | ಕರವಪಿಡಿಯು
ಲುಸಿದ್ಧರಾಮಂ | ಚರಪರೇಣ್ಯಂಗೆಂದಸದಯಾಮೂರ್ತಿತಾನಾಗೀ ||೩೬||
ಬರಲುಬೇಕಲ್ಲದಿರೆನೀಂನಿ | ರ್ಧರದಿತೋರಿಸದಾಗದಿರೆನಾಂ | ಬರುವಕಾ
ರಣವೇನಿದೇನೆನಗಲ್ಲಿದನುಬಿಟ್ಟು || ತ್ವರಿತದಿಂನೀವುಗಳುಪೋಗಿರಿ | ಬ
ರಲಿನಾನೆಂತೂರೊಳಿರುತಿಹ | ತರಳರಾಳಿಗೊಳುತ್ತಲಜ್ಜಿಸುವರುವಿಧವಿ
ಧಮೊಳೂ ||೩೭|| ಅಂತಕಾಂತಕನನ್ನುನೋಡುತೆ | ನಾಂತವಕದಿಂಬ
ರುವೆನೆನಲುಮು | ಹಂತನುರೆಕನಲುತ್ತೆಬಾಲನದುರ್ಗ್ಗಸೀಮೆಯೊಳೂ ||
ಎಂತುಬಿಡುವುದೆನುತ್ತೆಪೋಗುವು | ದೆಂತೆನುತೆಬಲುಗಾರವಿಸಿಬೋ |
ಧಾಂತರದಬರುವಂತೆಬೋಧಿಸಿದೊಡೆವಿಡಂಬಿಸಲೂ ||೩೮|| ವಿಸುಯು
ಕ್ತಿಗಳಿಂದೆಪೇಳಲು | ಮೋಸವಂಟಪದ್ಬುಧವನಾಂತವು | ಹಾಸಮರ್ಥನ
ಕಾಣುತಂಬೆರಗಾಗುತಾಕ್ಷಣವೇ || ಆಸದರ್ಥನುಮಾತ್ರದೇಶಾ | ವಾಸ
ಕಂಗಮಿಸಿದಡೆಬೆನ್ನಂ | ಟೀಸಮುಂಬದೆಬರುತಿಹನೋಯೆಂದೂಹಿಸುತೆನ
ಡೆಯೇ ||೩೯|| ಇತ್ತತನ್ನಂಬಿಟ್ಟುತ್ಪಟ್ಟರ | ಣೋತ್ತಮಂಪೋಗಲ್ಕೆಬಳಿ
ಕನು | ಹತ್ತರದಮೂರ್ಧ್ವಾವಿಪಶದಿಂಸಿದ್ಧರಾಮಯ್ಯಂ || ಚಿತ್ತದೊಳು
ಸಂತಾಪದಿಂಬೆಡ | ರುತ್ತನೇತ್ರೋದಕಗಳಂಸುರಿ | ಸುತ್ತಲಿಳೆಯೊಳು
ಹೊರಳುತ್ತೇಳುತೆಬಿಸಿಯುಸುರಬಿಡುತೇ ||೪೦|| ದಿಶೆದಿಶೆಗಳಂನೋಡಿವಿ
ಧವ್ರೊಡೆ | ದಸವ್ಮಶ್ರೀಶಾಕಾಕ್ರಾಂತನಾನಸ | ಬಿಸಜದೊಳುನೆನೆಯುತೆ

ದೇವವ್ರತೆ ತೋರಿಸುವೆನೆಂದೂ ॥ ಉಸಿರಿಪೂಜ್ಯನೆನಿಪ್ಪಜಂಗಮ ।ನೆಸಕದಿಂ
ದೆನ್ನನುಕಾನನ।ವಸುಮತೀತಲದಲ್ಲಿಬಿಡುತಂಪೋದನಕಟಕಟಾ॥೪೧॥
ಇನ್ನೆನಗೆದಿಕ್ಕಾರೆನುತಲುಂ । ತನ್ನೊಳಗೆಕಡುಶೋಕಪರ್ಬಿರೆ । ಖಿನ್ನ
ನಾಗುತಸಿದ್ಧರಾಮಯನಾಸ್ಥಲವಬಿಟ್ಟೂ ॥ ಎನ್ನನಾಳ್ದವನೆಲ್ಲಿಯಿರ್ದಪ।
ನೆನ್ನುತಳಲುತವೇದತುರಗನ । ನಿನ್ನುನೀವಗ್ಗಳುತತೋರಿರೆಂದತ್ಯಾರ್ತಿಯೊ
ಡಗೂಡೀ ॥೪೨॥ ಗಿರಿಗಳೊಳುಕೆರೆಗಳೊಳುಝರಿಗಳ । ನಿರುಗೆಯೊಳು
ನೀರ್ಗಳೊಳುತರುಗಳ । ನೆರೆಗಳೊಳುಕರಿಗಳೊಳುವನಚರಗಳೊಳುಹಕ್ಕಿ
ಗಳೊಳು ॥ ದರಿಗಳೊಳುನೆರೆಸರಗಳೊಳುಭಾ । ಸುರವನಾಂತರದೇಶದೊ
ಳಗಾ । ಪರಿಪರಿಯೊಳವನರಸುತಂತಿರುತಿರುಗಿನೋಡುತ್ತಂ ॥೪೩॥ ಶಾರ
ದೆಯೆನೀಂಕಂಡೆಯಾವರ । ಶಾರದಾಂಬುದವರ್ಣಕಾಯನ । ಸಾರಮನ್ಮ
ಥಕಂಡೆಯಾನೀಂಮನ್ಮಥಾರಿಯನೂ ॥ ಮೇರುಸಮಶಾಂಡಿಲ್ಯಕಂಡೆಯ।
ಧೀರಶಾಂಡಿಲ್ಯಾನತನನ । ತ್ಕಾರಪಾಟಲಿಕಂಡೆಯಾಪಾಟಲಜಟಾಧರನಂ
॥೪೪॥ ಭದ್ರವಾರಣಕಂಡೆಯಾಮದ । ಭದ್ರವಾರಣಹನನನೀನ । ಕ್ಷು
ದ್ರದಮೃತವೆಕಂಡೆಯಾನೀನಮೃತದೇಹನನೂ ॥ ಅದ್ರಿಸ್ಯಂದನಕಂಡೆ
ಯಾನಿದು । ಪದ್ರವಧರಾಸ್ಯಂದನಂವಿ । ಛಿದ್ರದಭಯವೆಕಂಡೆಯಾನೀ
ನಭಯಪಸ್ತನನೂ ॥೪೫॥ ರಾಜವೃಕ್ಷವೆಕಂಡೆಯಾನೀಂ । ರಾಜಮ
ಸ್ತಕಧಾರಿಯಂವಿ । ಭ್ರಾಜಬಾಣಮಹೀಜಕಂಡೆಯಬಾಣವರಪನನು ॥
ರಾಜಿಸುವನವನಂದಿವರ್ಧನ । ಭೂಜಕಂಡೆಯನಂದಿವಾಹನ । ನೋಜೆ
ಯಿಂನೀನೆಂದುದೃಢಗಿರಿರಾಜಿಗಳಕೇಳ್ದು ॥೪೬॥ ಘನತರಶ್ರೀಮಲ್ಲಿಕಾ
ರ್ಜುನ । ನೆನಿಪದೇವರಕಂಡಿರೇಪಾ । ವನತರವಗಿರಿಮಲ್ಲಿಕಾರ್ಜುನಗಳಿರ
ಖರ್ಜೂರ ॥ ವನದಶಿಖರಿಪ್ರಿಯಾಳುತಾನೆಂ । ದೆನಿಪದೇವರಕಂಡಿರೇನೀ ।
ವನುಪಮಿತಖರ್ಜೂರಶಿಖರಿಪ್ರಿಯಾಳುಗಳೆನುತೆ ॥೪೭॥ ಈ ವಿಧದಕೇ
ಳುತ್ತತಿರುಗಿದ । ತಾವುಗಳಲೀಯರಸಿಯರಸಿತ್ರ । ಣಾವಳಿಯಗುಲ್ಮಂಗ
ಳೊಳುಮೇಣ್ಬಡುಕಿಪೊಡುಕುತ್ತಂ॥ಆವೆಡೆಯೊಳುಂಪುಗಲುಬಾರದ । ದೇ
ವಖಾತಂಗಳಪುಗುತ್ತೆ೩!ವಾವಶೀಕರನೆನಿಪಶ್ರೀಗಿರಿವರನಕಾಣದಲೇ ॥೪೮॥
ಬೆನುಮಯದೊಳುನಡೆಯಲಾರದೆ । ಗಾಸಿಯಾಗುತೆಕಡುಬಳಲಿಬಹು।

ಮೋಸದೊಳುಸಿಕ್ಕಿರ್ಪ್ಪಮೈಯೊಳುಮುಸುಕಿದಾಜೀವರಾ || ಯಾಸದಿಂದೆ
ದೆಯೊಣಗಿಕಂಪಿಸು | ಶೇಸಮಾದರದಿಂಜಿದರವಿರು | ಕೂಸೆಯೆನ್ನುತೆ
ಪಯುದಿಕಾಯ್ವವರಿಲ್ಲದಿರಲೊಂದು ||೪೯|| ಕ್ಷೇತ್ರದೊಳುಕುಳ್ಳಿರ್ದ್ದುಸಿದ್ಧ
ಸು | ನೇತ್ರದೊಳುನೀರ್ಪ್ಪರಿವುತಿರೆತ್ರೈ | ನೇತ್ರಜಂಗಮವರನುಪೇಳ್ದ
ನ್ನಸುರುಚಿರದಾ || ಗಾತ್ರವದುಗೋಚರಿಸದಯ್ಯೋ | ಸೂತ್ರಧಾರಿ
ಯೆನಿಪ್ಪಪರಮಪ | ವಿತ್ರಎನ್ನಂಬಳಲಿಸುವಬಗೆಯಿಂಪದಾವಕಡೆ ||೫೦||
ಯಿಲ್ಲಿಯುಡಗಿರುತಿರ್ಪ್ಪೆಯೋಪಿಸ ! ಲಲ್ಲಿಯೊಕಾಡೆಲ್ಲತಿರುಗಿದೊ | ಡಿಲ್ಲನೀ
ನಡರಿಂಪೆಬಳಲಿದೆಹಸಿದುನೀರಡಿಸೀ || ಇಲ್ಲೆಯಿರ್ಪೆನುನಾನುಸಂದೆಗ |
ವಿಲ್ಲವೆನುತಂನುಡಿಯುಬಾರದೆ | ಸಲ್ಲಲಿತಕಾರುಣ್ಯದಿಂಪ್ರತ್ಯಕ್ಷನಾಗು
ತ್ತೇ ||೫೧|| ಎಂದುಧ್ಯಾನಿಸುತಂಮನಬೆಬಾ | ಲೇಂದುಧರಶರಣಾಗ್ರಗ
ಣ್ಯನು | ನೊಂದುಚಿಂತಾಶರಧಿಯೊಳ್ಮುಳುಗಾಡಿಸೈರಿಸುತೇ || ಸಂದು
ಗೊಂದಿಗಳಲ್ಲಿಸುತ್ತಲು | ಹೊಂದಿರುವಗುಡ್ಡಗಳೊಳರಸುತೆ | ಬಂದೆನ
ಯ್ಯೋಮುಂದುಗಾಣದೆತಂದೆನಿಮ್ಮಡಿಯಾ ||೫೧|| ಇನ್ನುಕಾಣದೆಹೋ
ದೆನದರಿಂ | ನಿನ್ನತೆತ್ತಿಗನಾಗಿಯಿರ್ಪ್ಪನ | ಭಿನ್ನಪ್ರಿಯದಿಂದೀಕ್ಷಣದೊ
ಳಿನ್ನಾದರುಂಬಾರಾ || ಎನ್ನಸುಂಪಶುಗಳನುಕಾಯುವ | ಕುನ್ನಿಹುಡು
ಗನೆನುತ್ತಮನದೊಳು | ಭಿನ್ನಿಸುತ್ತಂಎನ್ನನೀಪರಿಗಾಸಿಮಾಡುವುದೂ
||೫೨|| ನಿನಗೆಧರ್ಮವೆತಂದೆತಾಯಿಗ | ಳನುಬಿಡುತೆಪರಿಪಾಲಿಸುವಗುರು !
ವೆನುತೆನಿನ್ನಾಲಯವಪೊಕ್ಕವನಾದೆನೀಗೆನ್ನ || ಮನವಬೇಸರಹೊಂದ
ಲೀಯದೆ|ಘನದಮೂರ್ತಿಸುತೋರಿಕಂಗಳ | ಗನುಪಮಾನಾವೋದಶಾಂ
ತಿಗಳನುರೆಕರುಣಿಪುದೂ ||೫೩|| ಅಡಿಗಳಿಗೆಶರಣಾಗಿಬದುಕುವೆ| ಒಡೆಯ
ಯನೆನ್ನುವನಳಲಿಸದೆಕಡು | ಬಡಮಗನಿಗೀಕ್ಷಣದೆಕಾಣಿಸಲತಿಶಯದಿನಿ
ನ್ನ || ಒಡನೆಕರಪೊಯ್ದುಮುಗಿರುವನ | ಲ್ವಡಿಪಬಾಂಧವರುಗಳತಾಯ್ಗ
ಳ | ಬಿಡದೆಪ್ರೋಷಿಪತಂದೆಗಳವಾಲ್ಗರೆವತುರುಗಳನೂ ||೫೪|| ಕೊರತೆ
ಯಿಲ್ಲದಸಿರಿಯುತೊಲಗದ | ಪರತರದಧನಧಾನ್ಯವಸ್ತ್ರನಿ | ಕರವತಣಿ
ವ್ಪೋಲ್‌ತೋರ್ಪ್ಪನುಡಿಪಪ್ಪಡಲೆನಿಜಗುರುವೆ || ಕರುಣದಿಂನೀನಡೆತರಲು
ಮುದ| ವೆರಸಿಕರದೊಯ್ವುತ್ತೆಪಾಲ್ಕೆನೆ | ಪರಿಮಳಿಪತಿಳಿದುಪ್ಪಬೆಣ್ಣೆ

ಯಮುಗಿಣ್ಣ ಫಲೊಕ್ಕಿಸರು ||೫೫|| ತೆಂಗುಬಾಳೆಯಹಣ್ಣುಗಳುದ್ರಾಕ್ಷಿ| ಧಂ
ಸಳಿಂದಿಹಜೇನುತುಪ್ಪವ | ಮುಂಗುಣಾಧಿಕದ್ರವ್ಯಸಂತತಿಪಾನಕಪ್ಪು
ಷ್ಟ || ಕಂಗಳೂರಾಗ್ಗಮ್ಪೇಳೆಹಪ್ಪಳ | ವುಂಗರಿಲ್ಸಂಡಿಗೆಗಳುಂಮೋದ
ಹೊಂಗಿಲುಂಪರಮಾನ್ನಮಂಡಿಗೆಗಳೀವೆನತಿಶಯದೀ ||೫೬|| ಎನುತಲೀಸ
ಸಿದ್ಧರಾಮಂ | ಚಿನುಮಯಾತ್ಮನನೆಸನೆನಮುಮತಿ | ವಿನಯಯುತಮ
ಗ್ಧಾಸುಲಾಪವನಾಡಿವಸಮಯದೊಳೊ || ಅನಘಶ್ರೀಗಿರಿಮಲ್ಲಿಕಾರ್ಜುನ
ನೆನಿಪಸ್ವಾಮಿಯುಸತ್ಕೃಪೆಯೊಳಪ| ನನುವಿನಿಂಚರವರ್ಯರೂಪದಿಬಂದು
ಹತ್ತಿರದ ||೫೭|| ಆರುನೀನೆಲೊತಮ್ಮಒಬ್ಬನೆ | ಘೋರತರದಾರಣ್ಯದೊ
ಳಗೇಂ ! ಕಾರಣದೊಳಳಲುತ್ತೆ ಸಂಚರಿಸುವಭಯಂಕರದಾ || ಕ್ರೂರ
ಕೇಸರಿಗಂಡಕಸಮಹ | ವಾರಣಾದಿಮೃಗಾಳಿಗಳುಸಂ | ಚಾರಗೈಯು
ತ್ತಿರುವವತುಲಿತಭೀಕರದಿನಿರುತಂ ||೫೮|| ಗುರುಗುಡುತ್ತಿಹನಿನ್ನನಾವ
ಪ್ರರುಷನಿಳುಹಿಸಿಪೋದನೆಮಗಾ | ಪರಿಯವಿಪರಿಸುಮಗನೆಯನಲಾಬಾ
ಲಕಂನುಡಿಪಂ || ಪರಮಗುರುವೇಸೊನ್ನಲಾಪುರ | ದಿರುವೆಮುದ್ದಯ
ನೆಂಬುವಾತನ | ತರಳನೆನಿಸಿರುತಿರ್ದ್ದನಾಂಕರುಗಳನುಕಾಯ್ವಾಗ ||೫೯||
ಚರವರಾಧಿಪನೋರ್ವಶ್ರೀಗಿರಿ | ಪರನತೋರುವೆನೆಂಪುಕರತಂ | ದೊರ
ಪನುನಿನ್ನ ದೇವರಂತೋರಿಸದೆಕಾಸ್ಥಲದಿ|| ಮರುಕವಿಲ್ಲದೆವೆನ್ನಬಿಟ್ಟತಿ
ಭರದಿಪೋದನುದೇವ ನದಾ | ಪರಿಯಕಾಂಬುವೆನೆನುತೆತಿರುಗಿದೆನೆಲ್ಲಿ
ಯಿರುತಿಹನೋ ||೬೦|| ತಂದೆಯೇನೀವಾದೊಡಾತನ ! ಮುಂದಿರವತೋ
ರಿಸುತೆದೇವರ | ಸುಂದರವನೋಡಿಸಲುವೋಲಿರ್ಪೆನ್ನಗೋವರ್ಧನ ||
ಇಂದುಕುಡುತಿಹೆನಿದನುನಿಶ್ಚಯ| ವೆಂದುನಂಬುವುದೆನಲುಮಗುಳ್ನಗೆ|
ಯಿಂದಬಾಲಕನೊಡನೆಮುಗುಳ್ದಿಂತೆಂದಚರವನೂ ||೬೧|| ಚದರಧಿರು
ತುಂದಿಪಿಸುಳಿಸು | ವುದನುಬಿಡುಜಂಗಮನುಪೇಳಿದ | ಹದನದಿಂಮೃ
ನಾಕೃತಿಯದೋರುವೆಮನದಿನಂಬೀ || ಪದುಳದಿಂದೇಳಯ್ಯಘನತರ |
ಮುದದಿಬಾರಾಎಂಬುಮಾತನ | ಪದಪಯೋಜಂಗಳಿಗೆಶಿರವಂಬಾಗಿಭಕ್ತಿ
ಯೊಳೊ ||೬೨|| ನಮಿಸಿತರಳಂತನ್ನಮನದೊಳು | ಪ್ರಮದವೆಸೆಯಲ್ಕಾ
ಮಿತಪುಳಕ | ಗಮರ್ದ್ದೈನಿಮ್ಮವನಗಲಡಲೆಕಾಂಚಿಹರನಂಘ್ರಿ ||ಕಮ

ಗಳತೋರಯ್ಯಾಎನಲಾ | ಕ್ರಮದಿಬಾಲನನೊಡನೆಕರದೊ | ಯ್ದುಮಿತ
ಕರುಣಾನ್ವಿತನೆನಿಪಮಲ್ಲೇಶ್ವರನಹೃದ್ಯ ||೬೩|| ಭವನಸಾವಿರಾಪ್ಪದೊ
ಳುನಿಂದಲೆ | ಕುವರಬಳಗಿರುತಿರ್ಪನೋಡೈ | ಶಿವೆಯುಮಾನಸರಾಜಹಂ
ಸ್ರಾಗಿರೀಶ್ವರನೂ || ಇವನೆಯೆಂದೆನಲೊಡನೆನುಡಿದನು | ಸುವಿನಯಾ
ಬ್ಧಿಯೆನಿಪ್ಪರಾಮಯ್ಯ | ಶಿವಶಿವಾಪ್ಪೂರ್ವದೊಳುಜಂಗಮವರನುತೋರಿ
ಸಿದಾ ||೬೪|| ಸ್ಥಲವಿದ್ಯೆಯಿಲ್ಲಿಲ್ಲದೇವರು | ಒಲಿದುಕರತಂದಾತನಂದವೊ
ಳಲಿನಪದಿಚನಮಲ್ಲಿಕಾರ್ಜುನನಡಿಯತೋರಯ್ಯ || ಫಲಿತಕಾರುಣ್ಯದೊ
ಳನಲುಚರ | ನೆಲವ್ರೊನಂಬುವುದೆನ್ನವಾಕ್ಯವ | ನಿಲಿಸಿಹೃದಯಾಂತರದಿ
ಧ್ಯಾನಿಸುಯಿಲ್ಲಿಇರುತಿಹನೂ ||೬೫|| ಕಂಗಳಂನೀಂಮುಚ್ಚಿತೆರೆಯಲು|
ಮಂಗಳಾತ್ಮನನರಿವೆನೀನೆನು|ತಂಗಣಾಧೀಶ್ವರನುಪೇಳ್ದದೃಶ್ಯಸಾಗಲ್ಕೆ ||
ಇಂಗಿತವಿದೇನೋಎನುತೆನೇ | ತ್ರಂಗಳಂಮುಚ್ಚುತ್ತೆಬಾಲಕ | ಸಂ
ಗಳಿಲನತಿಕಾಂಕ್ಷೆಯಿಂತೆರೆವನಿತರೊಳಗೆಶಿವಂ ||೬೬|| ಅನಘನವ್ಯಯ
ನಪ್ರಮೇಯನ | ಜನನನಾದ್ಯಂತಾಪ್ರಮಾಣನು | ತನುರಹಿತನಾನಂ
ದಮಯನುಮಗಮ್ಯನಖಿಲಾಢ್ಯಂ || ಅನುಪಮಾನನಚಿಂತ್ಯನುಂವಾ |
ವನನುಮದ್ವಂದ್ವನುಮನಾಮನು | ಘನಪರಂಜ್ಯೋತಿಸ್ವರೂಪಂಮಲ್ಲಿ
ಕಾರ್ಜುನನೂ ||೬೭|| ಚರಪರೇಣ್ಯಂಪೇಳಿದಂದದಿ | ಸ್ಫುರಿತಸಗುಣಾ
ಕಾರನೆನ್ನಲು | ಹರನುಕಂಗೊಳಿಸಿರಲುಮಾಕ್ಷಣಸಿದ್ಧರಾಮಯ್ಯಂ ||
ಜರನುಹರುಷದೊಳೀತನೇಗಣ | ವರನುಪೇಳಿದದೇವರೆನುತಂ | ಅರಿದು
ತನ್ನಂಟಂಗಗಳುಭೂವಿಾತಲವನೊರಸೇ ||೬೮|| ಪೊಡಮಡುತಲಿಂತೆಂಪ
ನಾನ್ಮೃಡ | ನೊಡನೆಎನ್ನಾಳ್ದಾತನೀವಾ |ವೆಡೆಯೊಳಡಗಿರುತಿರ್ದಿರೋಇ
ದಕೇನುಕಾರಣವ್ರೋ || ಅಡವಿಯೊಳಗೆಲ್ಲಾಕಡೆಯೊಳುಂ| ಹುಡುಕಿದೊ
ಡೆನೀಂಕಾಣಬರಲಿ | ಲ್ಲೊಡೆಯನೇಇನಿತರೊಳಗಾಗಳ್‌ಬಂದೆಯ್ಯಗು
ಡುವೇ||೬೯||ಭೀಕರಾಟವಿಯೊಳಗೆಸಿಲ್ಕಿಯು| ನೇಕವ್ಯಥೆಯೊಳಳುತಿರೆಸ
ಕ್ಕೃತದ | ವಾಕವ್ರೊಬ್ಬ್ಪಳಿಯಾಗಿಮೂರುತಿಗೊಂಡುಬಂದಿರುವ || ಈಕ
ತದೊಳಭಯುವನೆನಗೆನೀ | ನೇಕರುಣದಿಂದೀಯಬಾರಾ | ಲೋಕಪಾವ
ನಮೂರ್ತಿಜಂಗಮನ್ನೈದುತಂನಿಮ್ಮ ||೭೦|| ಪಾದಪದ್ಮಂಗಳನುತೋರಿದ|

ನಾಧರಿಸಿಯಿಂತಾಗವಿರಲೇಂ। ವೇದನೆಗೊಳುತಲಿರ್ದನೋ ಚರವರನನೋ
ಡಲ್ಕೆ ॥ ವೇಷಮೂರ್ತಿಯುಕಾಣವಿರ್ದಂ । ಖೇದವಂ ಪರಿಹರಿಸಿದವನೇ ।
ನಾಡನೋ ಬಲುವೋಸವಾಡುಡುಕಳ್ಗಳಂ ಮುಚ್ಚು ॥೨೧॥ ಎನ್ನ ಲೊಡನೆ
ಯ್ಯೆಮುಚ್ಚಿ ದೆನುನಾ । ಮುನ್ನ ವರಿಯುವಮೂಢನಂದದಿ । ಎನ್ನ ನುಂಕಡೆ
ಗೈದಿಸಿದಮಾಹೇಶ್ವರಾಗ್ರಣಿಯೂ ॥ ಇನ್ನ ದಾವೆಡೆಗೈದನೋ ಎಂ।ದೆನ್ನು
ತ್ತಾಕ್ರಮಿಸಿರ್ಪಡುಃಖದಿ । ನಿನ್ನ ರೂಪವನೆಂತುಕಂಡೆನೊತತ್ಸಮಯ್ಯು
ದೊಳಗೇ ॥೨೨॥ ಪೋಗಲೀಯ್ಯುದತೆರದೊಳುಂಗ । ಟ್ಯಾಗಿ ಕಿರಿಬೆರಳಿಂಪಿ
ಡಿಘುದಾಂ ।ಪೋಗೆಡುಃಖಿಸಲಾಡುದೆಂಪಳಲುತ್ತಿರಲುಕರುಣಾ ॥ ಸಾಗ
ರಂಹತ್ತಿರಕೆತಾಂಬಂದಾ । ಗಳಾಲಿಂಗಿಸುತೆತೊಡೆಯೋ । ಳಾಗ್ರದಿಂ
ಕಣ್ಣೆರಿಸಿಮುಂಡೆಯನೆವರಿಮನ್ನಿಸುತೇ ॥೨೩॥ ಇದ್ದುವೈಕುಂಠಾಸ್ತ್ರ
ನೆಂದಂ । ಮುದ್ದುಮೊಗಮುಂತೋರುನಿನ್ನಯು । ಶುದ್ಧಭಾವಕೆಮೆಚ್ಚಿ
ನೀನಾತ್ರಾಣದೊಳಗಿರ್ಪಾ ॥ ಸುದ್ದಿಯಂತಿಳಿಯಲುರೆನಾಂಕಳ್ತು। ಹಿದ್ದೆನ್ನಾ
ತನುಕಾಣಬಾರದೊ । ಲಿದ್ದುದಕೆಚಿಂತಿಸದಳದಿರೆಂದವನಮೇಲಿರ್ಪಾ
॥೨೪॥ ಗೋರುಪಡವಂನ್ಯೆಜಕರವಂ । ಕೇರುಹದಿಸ್ಪರ್ಶನವಮಾಡಲು ।
ಸಾರವಜ್ರಕವಚವದಾಗೆಸುಯೋಗವೇಗಗಳ ॥ ಘೋರತರನಿಟಿಲಾಂಬಕ
ವನುವಮು । ದಾರಸ್ಪರ್ಶನವೇದಿಗಳನುಪ್ರ । ರಾರಿಕೃಪೆಯಿಂದಿತ್ತುಮಗ
ನೇನಿನ್ನಭಿಮತಾರ್ಥಂ ॥೨೫॥ ಏನುಬೇಕಾಗಿರ್ದ್ದುಪಂಕುಡು । ವೇಂನಿಖಿ
ತ್ತದಿಕೇಳ್ವುದೆಂದೆನೆ । ಮೌನಿನುತಗೌರೀಮನೋಹರಎನ್ನ ವಾಂಛೆಯ
ಪು ॥ನೀನುಧರಿಸಿಹರೂಪದಿಂದಲು । ನೂನಶೋಭಾಲಯುಸಹಿತವಿಂ। ದೀ
ನಿಮಿಷದೊಳೆಂನ್ನ ಚೆಂಬಳಿವಿಡುತಲೈತರಲು ॥೨೬॥ ಲೀಸಿನಿಂದೊಪ್ಪಿರು
ವನಪ್ಮಾನಿ । ವಾಸವೆನಿಸುವನಗರಿಯೊಳೆಸುವಿ । ಲಾಸದಿಂನೆಲೆಗೊಳಿಪೆ
ನಾವಾಗಳುವಿಭವವೆಕೃಪಾ ॥ ರಾಶಿಯೋ ನೀನೈತರುವವಾಂ । ಭಾಶಯುವು
ಮನಪೊಳಗಿಸುಪುವು । ತ್ತೀಸಮಯುವೊಳದೇನುನಿಲ್ಲನೆಕೇಳೆಲೈಮಗ
ನೇ ॥೨೭॥ ಆವಪರಿಯಿಂಬಯಸಿದೆಯೊತ । ದ್ಭಾವದಿಂದನುಕೂಲಿಸುವೆನೆ
ತಿ । ಸಾವಧಾನಿಯೆನಿನಗೆಮತ್ತೊಂದೊರವೆನ್ನೈಕೇಳೂ ॥ ಈವಿಶಿಷ್ಟಜನ
ರಿಗೆನೋಡಲು। ಪಾವನಾತ್ಮಕನಾದಜಂಗಮ। ಸೇವನೊಲುಕಾಣಿಸುವೆಕೇ

ಗೊಳಿಸುವೆನುನಿನಗಾಗೀ ||೭೪|| ಈಸವನಾಕೃತಿಯಿಂದೆನಿಸತನಿ | ವಾಸ
ಮಾಗಿಹೆನೆನಲುಕೃತ್ತಿಸು | ವಾಸನಾಣತಿಗೊಪ್ಪಿಹರ್ಷಾವೇಶಯುತನಾಗಿ||
ಭೂಸುರಾತ್ಮಕನತಿಶಯುಸುಮೋ | ಧಾಸವಾಹಿತನಾಗಿಶ್ರದ್ಧೆಯೊ | ಳಾ
ಸದಾಶಿವನಡಿಗಳಂಸಂಸ್ತುತಿಸಿದನುಮುದದೀ ||೭೯|| ಫಾಲಸಂಗತಕೀ
ಲಭವಭಯ | ಜಾಲಮೋಚನಶೀಲಸನ್ಮುನಿ | ಲೋಲಕಾರುಣ್ಯಾಲವಾ
ಲಹಿತಾಳಿಸುರಸಾಲ || ಕಾಲಕಂಧರಕಾಲಕಾಲಿೋ | ನ್ಮೂಲಸಂಸ್ಮೃತಿಭೀ
ಲಕಬರ್ಬರ | ಶೈಲಚಾಪವಿಧುಪ್ರಮುಖಸುರಪಾಲಸಲ್ಲೀಲ ||೮೦|| ಚಾರು
ಹಿಮಗಿರಿಜಾಮನೋಬ್ಜ ವಿ | ಹಾರಶ್ರೀಗಿರಿಮಲ್ಲಿಕಾರ್ಜುನ | ಧೀರಬಣ್ಣಿ
ಪೆನಯ್ಯನಿಮ್ಮಪದಾಬ್ಜಕೀರ್ತಿಯನೂ || ಘೋರಸಂಸಾರಾಂಬುಜಾತತು|
ಷಾರದುರಿತಾಂಬುದತತಿಘನಸ | ಮೀರಭಕ್ತೋದ್ಧಾರಮಹಿಮಾಗಾರವಿ
ಷ್ಣುಶರಾ ||೮೧|| ಪಾರದಾಮಳಹಾರವರಮಂ | ದಾರತಾರಕಶಾರದಾಭ್ರ
ಸ| ಮೀರಭುಗಿನಸುರೇಂದ್ರವಾರಣಹಿಮಕರಶರೀರ || ನಾರದಾದಿಕಸ
ನ್ಮುನೀಶ್ವರ | ವಾರಸನ್ನುತಚರಣಸಾರಸ | ವಾರಿಜಾಂಬಕವಿಧಿಸುರೇಂ
ದ್ರಮುಖಾಮರಾಳಿನತ ||೮೨|| ಪನ್ನಗೇಂದ್ರಾಭರಣನೀನೆಂ | ದೆನ್ನು
ತೆಂನುತಿಸುವಸಮಯದೆಕ್ರ | ಪ್ರೋನ್ನತಂನೋಡುತ್ತೆಶ್ರೀಗಿರಿಮಲ್ಲಿಕಾ
ರ್ಜುನನೂ || ನನ್ನವರಸುಕುಮಾರಬಾರಾ | ಮುನ್ನನೀಂನಡೆಯುವುದು
ತೀವ್ರದಿ | ನಿನ್ನಬರವಾರೈಸುತಿಹರುಪಿತೃಪ್ರಮುಖಜನರೂ || ೮೩ || ನಿ
ಮುಷವೊಂದಂವತ್ಸರವೆನುತ | ಲಮಳಚರಿತನೆಕಳೆವುತಿರ್ಪರು | ಸಮ
ಯುಮುಂಪೋಗೊಳಿಸದತಿಬೇಗದೊಳುನೀಂಪೋಗು || ಸುಮುದದಿಂನಾಂ
ಬರುವೆನೆನೆಶಮ | ದಮುಗುಣಾಸ್ಪದಸಿದ್ಧರಾಮಂ | ನಿಮುಷಮಾತ್ರದೆ
ಸೊನ್ನಲಾಪುರಕೈದಿಸದ್ಗ್ರಾಮ ||೮೪|| ವೆನಿಪಸುಸ್ಥಲದಲ್ಲಿನೂತನ ! ಕ
ನಕಮಣಿಮಯಗೇಹಮಂಬೇ | ಗನೆರಚಿಸೆತದ್ಭವ ||| ನದಂತಸ್ಥಲದಿ
ಸ್ಥಾಪಿತನೂ || ತನಮಹಾಲಿಂಗವಿದೆನಲುಮಾ | ವನನುತಾನೆನಿಮಾ ಸ
ಮಾಗಿರ | ಲನುಪಮಾನನಮೋಯುನತಿಶಯಭಕ್ತಿಭಾಜನನೂ ||೮೫|| ಸಿ
ದ್ಧರಾಮೇಶ್ವರನುನಿಜಸಾ | ನ್ನಿಧ್ಯದಲ್ಲಿರುತಿರೆಮಹಿಮೆಯುಸ | ಮಿದ್ಧವಿ
ಸ್ಮಯಭರಿತಜನಕತಿರಂಜನವದಾಗೇ || ಬದ್ಧಕಾರುಣ್ಯದೊಳುಶ್ರೀಗಿರಿ|

ಸದ್ಧರಿತ್ರಿಯೊಳಿರ್ಪತೆರದೆಪ್ರ| ಸಿದ್ಧದಿಂದಿರೆಮಲ್ಲಿಕಾರ್ಜುನನಲ್ಲಿಪುರದೊ
ಳಗೇ||೮೬|| ಇರುವವಮಾನವರೆಲ್ಲನೋಡುತೆ | ಅರರೆಯಿಾಸ್ಥಲದಲ್ಲಿಮೊದ
ಲಿ | ಲ್ಲಿರದದೇವಾಲಯವನೋಡಿದೆವತಿವಿಚಿತ್ರವಿದೂ || ವರಪ್ರಕಾಶವದೇ
ಣ್ದಿಶೆಯೊಳುಂ | ಭರಿತವಾಗಿರುತಿಹುದೆನುತೆನಿ| ರ್ಭರಪ್ರಮೋದೋಪೇ
ತಮಾನಸರಾಗಿನೋಡುತ್ತೆ ||೮೭|| ದೇವರಾಲಯವುಂಪ್ರವೇಶಿಸಿ | ಪಾವ
ನಾತ್ಮಕಲಿಂಗಮುಂನೆರೆ | ತೀವಿದಾಸದ್ಭಕ್ತಿಯಿಂಕಾಣುತ್ತೆಯೊಳಗಿರು
ವಾ || ಕೋವಿದನಶ್ರೀಸಿದ್ಧರಾಮನ | ಭಾವವನುನೋಡುತ್ತಲದ್ಭುತ |
ಸ್ವಾವಲಿಪ್ತಾಮೋದಸ್ವಾಂತಾಂಬುಜಗಳೊಂದಾಗೀ ||೮೮|| ಜನರಿರಲ್ಕವ
ರೊಳಗೆಕೆಲಬರು | ನಯವಿಭೂಷಣನೆನಿಪಮುದ್ದಯ | ನೆನಿಸುವಾತಗೆ
ತಿಳಿಸಿನಿನ್ನಾತ್ಮಜನುಬಂದಿರುವ || ನೆನಲುತತ್ಕ್ಷಣಮಾತ್ರದೊಳೆತ | ನ್ನಿನೆ
ಯಳೊಡಗೂಡುತ್ತೆಮಂದಿರ | ವನುಬಿಡುತ್ತಾಜನರುತೋರಿದದಾರಿಯಂ
ಹಿಡಿದೂ ||೮೯|| ಬಂದಿದಿರಿನೊಳುನೂತ್ನರತ್ನ | ಬೃಂದಖಚಿತದಿಮೆರೆ
ಯುತಿಹಘನ | ಸುಂದರಾಭವಗೇಹಮುಂಕಂಡದರೊಳಗೆಹೊಕ್ಕು || ನಿಂ
ದುನೋಡಿದನೆರಡನೆಯಬಾ | ಲೇಂದುಶೇಖರನಂತೆತೋರುವ | ನಂದನ
ನಸಾವಿಾಪ್ಯವೈದಲುಜನಕಜನನಿಯರಾ ||೯೦|| ಪದಪಯೋಜಂಗಳಿಗೆ
ನಮಿಸುತೆ | ಮುದದಿನಿಂದಿರೆಜನಕನುಂಪ್ರಿಯ | ಪ್ರೊದವಿಯಾಲಿಂಗಿಸು
ತೆಎನ್ನ ಕುಮಾರಸತ್ಕೀರ್ತಿ || ಸವನಕುಲಪಾವನನಖಿಲಶ್ರೀ | ಯುದನಿದಾ
ನವೆಮುತ್ತಪಃಫಲ | ಪದಪ್ರಕಾಶಕಪರಮನೇನೀನೀಸುದಿನವೆನ್ನ ||೯೧||
ನಗಲುತಾವೆಡೆಗೈದಿಪ್ಪೆಯಾ | ಬಗೆಯೊಳಿಲ್ಲಿಗೆಬಂದೆಯೋತ್ಯೈ | ಜಗ
ದೊಡೆಯನುಹಲಿಂಗಮೂರುತಿಗುಡಿಯಿದೆಲ್ಲಿಯುದು || ಸುಗುಣನಿಧಿಪೇಳ
ಯ್ಯಯೆನಲತಿ | ಮುಗುದಬಕುತಿಯುಪಟ್ಟಬದ್ಧನು | ಮಿಗೆಮನೋಜ್ಞಾ
ಕ್ರಮದೊಡನೆಶ್ರೀಗಿರಿಗೆತಾಪೋದು ||೯೨|| ದಡುವೊದಲುನಗರಪ್ರವೇ
ಶದ | ತುದಿಯೊಳುನಡೆದತನ್ನವೃತ್ತಾಂ | ತದವಿಭಾಗವನೆಲ್ಲಕೇಳಲುಸಿ
ದ್ಧರಾಮಯ್ಯ || ಮುದದಿಪೇಳದಮಾತ್ರದೊಳೆಸಾಂ | ಪ್ರದಿಕೇಳುತೆವಿ
ಸ್ಮಯಾನ್ವಿತ | ಪದಮನೋನಾಳೀಕದೊಳಗಾನಂದಮುಜ್ವಲಿಸೇ ||೯೩||
ಭಬರೇಭಲಜಿತಕಾಮಶಂಭುವಿ | ನೊಲುಮೆವಡೆದಿಹಭಕ್ತಿದಾಮಾ ! ನಲಿ

ನಸುಖಪ್ರೋದ್ದಾಮಸಮಪ್ರಕಾಶವಂಹೇಮ ॥ ಮಲಹರಾತ್ಮಕಶರಣ
ಪ್ರೇಮಾ । ಸುಲಭಸದ್ಗತಿಹೇತುನಾಮಾ । ಫಲಿತಸೇವಕಭವವಿರಾಮಾ
ಸಿದ್ಧರಾಮಯ್ಯಾ ॥೯೪॥ ಬಾಲಕನುಮಾಗಿರ್ದ್ದನೆನ್ನಹಿ ! ಮಾಲವಾಲನೆ
ನಿಷ್ಪಭಕ್ತಿಸು । ಶೀಲನೆಂಬುವುದರಿದೆಮಯ್ಯಾಸ್ವಲ್ಪವಾದೊಡೆಯು ॥ ಕಾ
ಲಕಂಧರತಾನೆಬಲ್ಲನಿ । ಕಾಲವಹತ್ರೈಲೋಕದೊಳಗಿದು । ಮೇಲೆನಿಪ
ಸುಚರಿತ್ರವೆನಿಸುವುದೆನುತಕೊಂಡಾಡೀ ॥೯೫॥ ಈಮಹಾಲಿಂಗವನು
ಕರೆಯಲು । ನಾಮವೇನಿಡಬಹುದೆನುತೆಸ । ದ್ಧೀಮಹಿತರೆಲ್ಲರುವಿಚಾರವ
ಮಾಡಿಶ್ರೀಸಿದ್ಧ ॥ ರಾಮತಂದೆಯೆತಂದಿರುತ್ತಿಹ । ನೇಮವಿಡಿದೀಮಲ್ಲಿ
ಕಾರ್ಜುನ । ಸ್ವಾಮಿಯುದರಿಂಸಿದ್ಧಮಲ್ಲೇಶ್ವರನೆನುತಕರೆದೂ ॥ ೯೬ ॥
ನಿಷ್ಟೆಯಿಂಷೋಡಶವಿಧಾರ್ಚನೆ । ಯಷ್ಟತೀರ್ಥವೆಂದುವಾದ್ಯೋ
ತ್ಕೃಷ್ಟರಾವವಿನೋದದಿಂದಾಸ್ಥಾನದೊಳಗಿರ್ದು ॥ ಅಷ್ಟರೊಳಗಾಸಿ
ದ್ಧರಾಮನ । ಇಷ್ಟರುಗಳುಸಮಸ್ತಜನಗಳು । ಶ್ರೇಷ್ಠವೆನಿಸುವನು
ದ್ವಯಾಖ್ಯಾನಸದನವಂಸೇರೀ ॥ ೯೭ ॥ ಸಾತಿಶಯದಾಸನದೊಳೆಲ್ಲರು ।
ಪ್ರೀತಿಯಿಂಕುಳ್ಳಿರ್ದ್ದಮವನಿಂ । ಭೂತಿತಾಂಬೂಲಸುಮನಸದಕ್ಷಿಣೆಗ
ಳಂಕೊಂಡೂ ॥ ಖ್ಯಾತನಶಮಲ್ಲೇಶ್ವರನನತಿ । ಪ್ರೀತಿಯಿಂನೋಡುತ್ತ
ಸುಜನ । ವ್ರಾತವಾಗಳ್ಪೊಗಳಿದುದುಮುದ್ದಯನಭಾಗ್ಯವನೂ ॥೯೮॥
ಸಿದ್ಧರಾಮಯ್ಯನಸುಕೀರ್ತಿಯೆಸ । ದ್ಧಕಾಮಲಯದೊಳುತಿಳಿವಪ್ರ ।
ಬುದ್ಧನಾವಂಸೊನ್ನಲಾಪುರಸುಕೃತಮಯವಾಗ ॥ ಲುದ್ಧರಿಸಿದಂಪುರ
ದೊಳಿಹಸಂ । ಸಿದ್ಧಜನರುಗಳುಂನಿರಂತರ । ಶುದ್ಧಸೌಖ್ಯೋಪೇತರಾ
ಗಿಹುದೇನರಿದುಮುನ್ನಂ ॥೯೯॥ ಧೀರಸೊಡ್ಡಳಬಾಚಿದೇವನು । ಸೌರ
ಸೌರಾಷ್ಟ್ರಾಧಿನಾಥನ । ಚಾರುಮಂದಿರದೊಡನೆತಂದಿಹನೀತನತ್ರಿಭ
ಕ್ತಿ ॥ ಪೂರನೆನುತಂಮೆಚ್ಚಿಕರುಣಾ । ವಾರಿಧಿಯೆನಿಪಪರಮಶಿವನುಮ ।
ಹಾರಯದಿಬಂದಿಹುದಕಂಡೆವುನಾವ್ಗಳಲ್ಲದೆಯುಂ ॥೧೦೦॥

ಅಂತು ಸಂಧಿ ೧೬ಕ್ಕಂ ಪದ ೧೦೪೪ಕ್ಕಂ ಮಂಗಳಮಹಾ.

## ಮೈದುನರಾಮಯ್ಯನವರ ಕಥೆ.

ಸೂಚನೆ ॥ ಚಿಕ್ಕರಾಮಂಶ್ರೀಗಿರಿಯೊಳಾ । ಯಕ್ಕಭಾವನರಕರೆದು ನಿಜಪುರ । ದಿಕ್ಕಿಗಂಬಾಮಲ್ಲಿಕಾರ್ಜುನರುಗಳನೈದಿಸಿದಂ ॥

ಪದ ॥ ಶ್ರೀಮಹಿತನಾದೊಡಲುಮೈದುನ । ರಾಮಯಂನಿಟಿಲಾಕ್ಷ ಭಕ್ತ । ಪ್ರೇಮನಗಜಾಪತಿಯಪಾದವನರ್ಥಿಯಿಂಭಜಿಪಾ ॥ ನೇಮದಿಂ ನಗಧಾಮನಂನಿಜ । ಧಾಮಕೈದಿಸಿದುಪನುಮಿಗಿಲೆನ । ಲಾಮಹಂತರೊಳೋರ್ವನುಸುರುತ್ತಿರ್ದನೆಂತೆನಲೂ ॥೧॥ ಹೇಮಮಯಪ್ರಾಸಾದವಿಚರ । ತೋಮಮುಖಿಯರಕಚದಿರಾಜಿಪ । ಸ್ತೋಮಸುಮನೋದಾಮನಕ್ಷತ್ರಾಲಿಯಂತಿರಲೂ ॥ ಭೀಮವತಿಯೆಂದೆಂಬಪಟ್ಟಣ । ವೀಮಹೀತಲದಲ್ಲಿಮೆರೆದಿಹು । ದಾಮಹಾಕೋವಿದರುಬಣ್ಣಿಸಲಾರರುನ್ನತಿಯಾ ॥೨॥ ಪ್ರಕಟನಿಜನಂಶಾಬ್ಧಿಜೈವಾ । ತೃಕನೆನಿಸುವಾಸೋಮಯಾಜಿಯು।ಸಕಲರರಿಯಲುತಪವಮಾಡಿನಿಜಾಂಗನೆಯುಸಹಿತಂ ॥ ಮುಕುತಿಗಾಸ್ಪದನೆನಿಸುವಾಶಂ । ಭುಕರುಣಾನ್ವಿತನಾದಸತ್ಪು । ತ್ರಕನಮೈದುನರಾಮಯನತಾಂಪಡೆದನಲ್ಲಿಯೊಳೂ ॥೩॥ ಪೂರ್ವದೊಳುಹಿಮವಂತನೆಂಬುವ । ಪರ್ವತಂಮೈನಾಕನೆಂಬನ । ನೋರ್ವನಂಪಡೆದಿರ್ದುಸಂತಸದಿಂದಸತಿಯೊಡನೇ ॥ ಸಾರ್ವಕಾಮ್ಯಫಲಾನುವಾಪ್ತಿಯ । ಪೂರ್ವದಿಂಪಡೆದಿರುವೊಲಿವಂ । ಪುರ್ವಿಭೋಗಾಯುತ್ತಸುಖಸಂತುಷ್ಟನಾಗಿನ್ನೂ ॥೪॥ ಅಕ್ಷಯನನವ್ಯಯನಪ್ರಮಥಾ । ಧ್ಯಕ್ಷನಂಧ್ಯಾವದೊಳುಕಂಡೆಸ । ಮಕ್ಷಮದೊಳಾವಿಮಳಪಗ್ರಹವರಿಯದಿರ್ಪನುಪ್ರ ॥ ತ್ಯಕ್ಷದಿಂನೋಡುವೆನೆನುತಲಾತ್ಯ್ರಕ್ಷನಾವಾಸಿಸುವಸಾಹ।ಸಾಕ್ಷಮುಖಸುರಚಯವಿನುತವಹಶರ್ವಲೋಕವನೂ ॥೫॥ ಹೊಂದಲಿತ್ತಲ್ಬಳಿಕತಾಯಿಗ । ಳಿಂದೆಪ್ರೋಷಿತನಾಗಿದಿನದಿನ । ಸಂದುರಾಮಯ್ಯಂಗೆಸಪ್ತಾಬ್ದಂಗಳಾಗಿರಲೂ ॥ ಒಂದುದಿನತಾಸಾಡುತಿರ್ದವ । ರಿಂದೆನಕವಿಪಿನಕ್ಕೆಪತ್ರ । ಬೃಂದವಿಂಧನಗಳನು

ಸಂಗ್ರಹಿಸಲ್ಕೆ ಪೋಗಿರಲೂ ||೬|| ಸಕಲರಕ್ಷಿವಿತಾನಶೋಭಾ |ಪ್ರಕಟವ
ಹವಟವೃಕ್ಷಛಾಯೆಳೋ | ತ್ಸುಕನಿಜಾತ್ಮವಿನೋದದಿಂನೆಲಸುತ್ತ ಬಾಲಕ
ರಾ || ನಿಕರವೊಬ್ಬುಳಿಯಾಗಿತವುತಮ | ಯುಕುತಿಗೂಹಿತವಪ್ಪಭಾ
ಷಾ| ಪ್ರಕರಮಂಬೀದುತ್ತೆದೀಪಾವಳಿಯಹಬ್ಬಕ್ಕೆ |೭|| ಅಂತುದಶವಾ
ಸರದೊಳಗೆಯೋ | ರಂತೆನಮ್ಮಮನೆಯೊಳುವಾಡುವ | ರಂತವಿಲ್ಲದವ
ರರಸಾಯನಗಳನೆನುತಲೋರ್ವಂ || ಮುಂತೆನುಡಿಯುವನೋರ್ವಚಲು
ವೆಸೆ| ವಂತಿರುವದುಪ್ಪಟವಪೂತಳೆ | ದಂತಜರೆಕಟ್ಟನದುವೂಲುಗಳಂ
ತರುವನೆಮ್ಮ ||೮|| ತಂಧೆಹಬ್ಬಕ್ಕೆನಲದೋರ್ವನು | ಮೆಂದನಮ್ಮಕ್ಕಗಳ
ಭಾವರ | ನಿಂದೆಕರೆಯಲ್ಪೋಪರೆಮ್ಮವರುಗಳುಬಂಧುಗಳೂ || ಹೊಂ
ದಿರುವವರನೆಲ್ಲಕರಸುವ | ರೆಂದವಾತನುಕೇಳಿರಾಮಯ | ನೆಂಥ
ನೆಲ್ಲರಮುಖವನೋಡುತವಂದಿರುಗಳೊಡನೆ ||೯| ಅಕ್ಕಭಾವಂದಿರನು
ಕರೆತಂ | ದಕ್ಕರದೊಳಾದೊಡ್ಡಹಬ್ಬಕೆ | ಚಿಕ್ಕಹೂರಣಗಡು
ಬುಹೋಳಿಗಿಹುಗ್ಗಿಗಿಲಿಗಂಚಿ || ಅಕ್ಕಿಹಪ್ಪಳಶೆಂಡಿಗೆಗಳುಂ | ಲೆಕ್ಕವಿ
ಲ್ಲದಶಾಕಪಾಕವ | ತಕ್ಕಸದ್ಯೋಘೃತವುದಧಿಯುಕಾ ದಿಗಳನೆರವೀ
||೧೦|| ಸಾಲುಪಂಗ್ತಿಯೊಳುಂಕುಳಿತುವು | ದ್ವೇಲದಿಂಭೋಜನವ
ಮಾಡಿದ | ಮೇಲೆಯುಡುಗೊರೆವಸ್ತುಗಳನೀಡುವೆನೆನಲ್ಕವರು || ಪೂ
ಲನುಂಪೇಳುತ್ತೆಹಾಸ್ಯದಿ | ಬಾಲಕರುವಿಪರೀತವಹವಾ | ಗ್ಜಾಲದಿಂದೆಲ್ಲ
ವಖಿಮೆಂದರುಎಲವೊರಾಮಯ್ಯ ||೧೧|| ನೀವುಗುಳೆನುಡಿಯದಿರದೇಕೆ
ನೆ| ಗ್ರಾಮವಿಲ್ಲದಿರಲ್ಕೆವೊದಲೇ | ಸೀಮೆಯೆಲ್ಲಿಹುದೆಂದುಜನರಾಡುವ
ತೆರನಿದಾಯ್ತು || ನೇಮಯುತಸದ್ಬ್ರಹ್ಮಚಾರಿಯೆ | ಪ್ರೇಮಯುತ
ಸುತರೆನಿತ್ತರೆಂಬೊಲು | ಭ್ರಾಮಕನೆನಿನ್ನೊಡನೆಹುಟ್ಟಿದವರವೊದಲೆಕ್ಕಾ
ಣೆ || ೧೨ || ವಾವಬಗೆಯೆರ್ಯಾದುನುಡಿದೆಯೊ |ಭಾವನುನಿನಗಿರ್ಪುದ್ವಿಧವ
ನುಸ್ವಭಾವದಿಂದೆವುಗೊರೆಯೆಕೇಳುವೆವೀಗನಿಜವಾಗೀ ||ಶೀವಿರುವನ್ನೈ
ಸಿಕನ್ನುಡಿಗಳಿಂ | ಹೇವರಿಸದೆಲ್ಲರೊಲುಕರತಂ | ದೇವ್ವುಎನ್ನುವೆಎಂದು
ಬಂದಿರ ತಿರುವಳ್ಳೈಮುನ್ನ ||೧೩||ನಿಮ್ಮವಿಧವರಿಥಿರ್ಪವೆಲ್ಲರು| ಹೆಮ್ಮೆಯಿಂ
ಸುಳ್ಳುಡಿದೊಡೆಯೋ | ನೆವ್ಮಲೆಲೊಕ್ಕೇಳಲ್ಕೆ ಯೋಗ್ಯವೆಪ್ಪೊಸವರಿಯು

ಪಾತಂ || ತಮ್ಮಭಾವಾಕ್ಕಗಳವೆಸರೇಂ | ನಿಮ್ಮಇರುವಸ್ಥಲವದೆಲ್ಲಿಹು
ದೊಮ್ಮೆಪೇಳವರೂರುದೂರವೊಂದಂಡೆಯೊಳಿರುವುದೋ || ೧೪ || ಬಡವ
ರೋದ್ಯೈವುಳ್ಳವರುಗಳೊ | ಒಡೆಯರೋಭಿಕ್ಷುಕರೊವೇಣವ | ರೊಡ
ನೆಬಾಂಧವ್ಯವನುಪೂರ್ವದೊಳಾರುಮಾಡಿಹರು || ಹುಡುಗರಿರುವರೊವ್ವೊ
ದಲಿನಿಂದಂ | ಕಡುಮುಮತೆಯಿಂನಿಮ್ಮಮನೆಗಾ | ವೆಡೆಯಿನಾದರುಬಂದಿ
ರುವರೋಇಷ್ಟರುಗಳಾರೋ ||೧೫|| ಓದಿರುವರೋನಾವುಕೇಳದ |ಭೇ
ದವೆಲ್ಲವನೊರೆಯೆಸುತ್ತವಿ | ಚಾರಿಸುತೆಗುದಿಗೂಡಿಹತ್ತಿರಶೇರಿಮೇಲ್ಮೇ
ಲೆ || ಮೂಪಲಿಸುತೊಡನೊಡನೆನುಡಿಡುಮು | ನಾದರದಿಜರೆಜರೆದುಝುಂ
ಕಿಸೆ | ಖೇದವಿಭ್ರಮದಿಂದೆವೊಗವಡುಬಾಡಿಬಾಲಕನೂ || ೧೬ || ಮತ್ತೆ
ಯೇನುಂನುಡಿಯದಲೆಯುವ | ರತ್ತಪ್ರೋಗದೆಯುಳಿಬಾಷ್ಪವು | ಮು
ತ್ತಿಕಂಗಳೊಳುಂಸುರಿವುತಿರ ಲೆತ್ತತೋರದಲೇ || ಚಿತ್ತದೊಳುಪುಗು
ಡವದುನಟ್ಟರೆ | ತತ್ತರಿಸುತಂಮೆಲ್ಲನೇನಡೆ | ವುತ್ತಲವನತನಾಗಿಬಂದಾ
ಮಗನರೀತಿಯನೂ || ೧೭ || ಆರಯಿದುನೋಡುತಿಹತಾಯಿಯು | ಪೋ
ರೆಯುಂನೋಡುತ್ತದುಃಖವ | ಪಾರವಾಗಲುಕುವರನಾಕ್ರಂದಿಸುತೆರೋ
ದನದಾ || ನೀರಧಿಯೊಳುನಿಮಗ್ನನಾದಕು | ಮಾರನಂನೋಡುತ್ತೆಹೆದರಿ
ಮು | ಹಾರಯುದೊಳವನಪ್ಪೆಬೆನ್ನಂತಡಹಿನೇವರಿಸೀ || ೧೮ || ಕಂಗಳೊ
ಳುಸುರಿವುತಿಹನೀರಂ | ಸ್ವಾಂಗವಸ್ತ್ರದತುದಿಯುಶರಗಿಂ | ದಂಗವಿಸಿ
ಯೊರಸುತ್ತಲೆನ್ನಕುಮಾರಯೇನಯ್ಯ || ಹೇಂಗೆಮೂಡಲಿಕೂಸೆಬಳಲಿ
ಕೆ | ಪಿಂಗದಳಲುವುದೇನುವಿಪಿನದಿ | ಸಿಂಗವೊದಲಾಗಿಹಮಿಗಗಳಂಕಂ
ಡುಹೆದರಿದೆಯೋ ||೧೯|| ಅಲ್ಲದೇಯೋರ್ವನನುಸಹಚರ | ರೆಲ್ಲವಿಪಿನದಿ
ಬಿಟ್ಟುಬಂದರೊ| ಖುಲ್ಲರೊಡನೇತಕ್ಕೆನಿನ್ನಂಕಳುಹಿದೆನೊತ್ತಿಲಿಯು ||ಲಿ
ಲ್ಲಕಿಡಿಗೇಡಿಗಳುಮಾರ್ಗದೊ | ಳೆಲ್ಲರೊಬ್ಬುಳಿಯಾಗಿಬರುತಿಧು | ವಲ್ಲಿದು
ರುಳನುಮಾವನಾದೊಡುಬಡಿದನೋಪೇಳು ||೨೦|| ಅವನತಡೆಯುದೆಸಿಕ್ಷೆ
ಗೈಯುವೆ | ವಿವರಿಸುವುದೆನ್ನೊಡನೆಮಾಜದೆ | ಕುಮರನೀನೆನಲೊಡನೆ
ದುಃಖಿಸುತೆಂದಬಾಲಕನೂ || ಅವಧುನಾನುಮರಣ್ಯದೆಡೆಯೊಳು | ತವಕ
ದಿಂಕ್ರೀಡಿಸುತಲಿರುತಿರ ! ಲವರೊಳೋರ್ವಂಅಕ್ಕಭಾವಂದಿರನುಕರಸು

ವೆವ್ಪೂ ||೨೧|| ಎನಲುಕೇಳ್ದಾದಿಮಾತನೆಲ್ಲಡು | ಮನಕೆಬಂದವ್ರೊಲಂತೆನುಡಿ
ಯಲು | ಅನಿತರೊಳುನಾನೆಂದೆನಮ್ಮಕ್ಕಗಳಭಾವರನೂ || ಮನೆಗೆಹ
ಬ್ಬಕೆಕರತರುವೆವೆನೆ | ನಿನಗೆಒಡಹುಟ್ಟಿದವರುಂಟೀ | ಇನಿಸುಕಾಲದೊ
ಳಿಲ್ಲದವರ್ಗ್ಗಳನೆಂತುಕರತರುವೇ || ೨೨ || ಎಂಡುನುಡಿವುತ್ತೆಲ್ಲರುಂನಗು |
ತಂದುಪರುಹಲ್ಕೆಳಿವಿುನದೊಳು ! ನೊಂದುಚಿಂತಿಸುತಿವನರೋದನವೆಂ
ತಡಗಿಸಲಿತಾ || ನೆಂಪುಸಾಧ್ವಿಯುಮನದೆತನ್ನೊಳ | ಗೊಂದನುವನೂ
ಹಿಸುತೆಸ್ವಾಪ್ರಿಯು | ನಂದನನವೊಗವೀಕ್ಷಿಸುತೊತ್ತಡನೆಂದಳೆಲಿಮಗನೇ
||೨೩|| ಅಡವಿಯೊಳುನಿನ್ನಣಕಗೈವುತೆ | ಹುಡುಗರೆಂದುದುದಿಟವಹು
ದೆನೀಂ | ಖಿಡುಕದಿರುಮಾನಸದೊಳದರನಿಮಿತ್ತದಿಂದೀಗಾ || ಬಿಡದೆ
ಪೇಳುವೆನಯ್ಯಶ್ರೀಗಿರಿ | ಯೊಡೆಯಮಲ್ಲೇಶ್ವರನೆಭಾವನು | ಕಡುಮು
ದದಕಡಲೆನಿಪಭ್ರಮರಾಂಬಿಕೆಯೆನಿಮ್ಮಕ್ಕಾ ||೨೪|| ಅಮಿತದೂರದೊಳಿ
ರ್ದ್ದೈಶ್ವ |ರ್ಯಮುಮನೆಣಿಸಲದಾರ್ಸಮರ್ಥರು |ಹಿಮವದಾದ್ಯರುಬಂಧು
ಗಳುಮೇಣ್ಸುತರುಗಣನಾಥ || ಪ್ರಮುಖರಖಿಲಾಜಾಂಡಸಂಭರ | ಣ
ಮಹಿತಾಧ್ಯಕ್ಷತ್ವಮಿರುತಿಹು | ದೆಮಗಳವೆಯಿಲ್ಲಿಗೆಯವರುಗಳಕರಸಲೆಲೆ
ಮಗನೇ || ೨೫ || ಶ್ರೀದನಾಭಾವಂಗೆಸ್ನೇಹಿತ | ನಾಡವನುಮಂತವರಪ್ರ
ಜ್ಞಾ | ಮೋದುರತೆಯುವಿಚಾರಿಸಲುಸರ್ವಜ್ಞಮೂರ್ತಿಗಳೂ || ಆದಕ
ತದಿಂದವರ್ಗ್ಗಳಿಗೆಸಮ | ವಾದಸತ್ಪ್ರಭುವರರೊಳರೆತ | ತ್ಪಾದವೇಶ್ರೀ
ಗಾದಿನಿನ್ನಪರೀಕ್ಷಿಸಿದಹೀನ ||೨೬|| ವಿಪ್ರಬಾಲಕರೆಲ್ಲಿಯೆನಲತಿ | ಕ್ಷಿಪ್ರ
ದಿಂಸಂತೋಷಪೂರ್ಣ್ಣತ | ರಪ್ರಮಾನಸನಾಗಿರಾಮಯನೆಂದನಿದೊಮು
ನ್ನ || ವೇಪ್ರಯತ್ನದಿತಾಯಿನೀನುಮ | ತಿಪ್ರಮೋದದಿಕರಸದಿರ್ಪುದ|
ದೇಪ್ರಮಾದವದಾಗೆಇನ್ನಾದೊಡೆಯುಮೆನ್ನುವನೂ ||೨೭|| ಕಳಿಸಿದೊಡೆ
ಯವರುಗಳನೆಲ್ಲರ | ನಿಳಯಪೂರ್ಣವದೆನಿಸೆಕರೆತಹೆ | ನಿಳೆಯೊಳಳಿಯ
ರನಾಮಗಳುಮಂಕರಸೆಹಬ್ಬವ್ರುನುಂ || ಗಳಕರವದಂತಾಗದಿರ್ದೊಡೆ |
ಗೆಳೆಯರುಂಹೇವರಿಸಿನಗರೇ | ಬಳಗಕೋಟಿಸಮಾನರುಗಳುಮಳೀಕ
ನೆಂಬುವರೂ ||೨೮|| ಎನಲವಗೆಬಳಿಕೆಂದಳಾಗಳ್|ಜನನಿಯೆಲೆಸುಕುಮಾ
ರನೇಸ| ಜ್ಜನಮನೋಹರನೀನುಪುಟ್ಟಿರುವನಿತರೊಳುನಿನ್ನ ||ಜನಕನಾ

ಪರಲೋಕಗತನಾ | ದನುಬಳಿಕಬಡತನದೊಳಿರುತಂ | ಮನಕೆಸಂಕಟ
ವಾಗುತಾರಂಕಳುಹಪುದರಿಂದೇ || ೯ || ಅವನ್ಗಳಿಲ್ಲಿಗೆಬಂದುದಿಲ್ಲವು |
ಕುವರನಿನ್ನಂಕಳುಹಿಸೈರಿಸ | ಲವಗಡವುನಾಂಸ್ತ್ರೀಯುಪೋಗುವುದಂ
ತರಣ್ಯದೊಳೂ || ವಿವರಿಸುವೆಭಾವಂಸುಸಂಪ | ನ್ನಿವಹದೊಡಗೂಡಿ
ರುವನಾಗಳು | ತವೆಮುಹತ್ಸೌಭಾಗ್ಯಪೂರ್ಣನುಇಲ್ಲಿಗೇತಕ್ಕೆ || ೩೦|| ಬ
ರುವನೋರ್ಮೆಯುಬಂದನಾದೊಡೆ | ಪರಿಚರರುಬಾಹುಳ್ಯವಾಗಿಯೆ | ಬ
ರುವರೆಲ್ಲರನುಣ್ಣಿಸಲ್ಕಾದಪುದೆನಮ್ಮಿಂದೇ || ತರಳನೇವುಧ್ಯಾನ್ಹಕಾಲಕೆ|
ದೊರೆವುದೇಸಂಕಷ್ಟವಿಳೆಯೊಳು | ನರರುಗಳಕಿವಿಗಳನುಬೆಳಸಲ್
ಬಹುದುಕಂಗಳನೂ ||೩೧|| ಬೆಳಸಲಹುದೇಲಹಾಪರಿಯೊಳೀ |ಮಿಳೆಯೊ
ಳಗೆಕರಿಕಾಲಜೋಳನು | ಅಳತೆಖಂಡುಗತಂಡುಲವುನುನ್ಸ್ಮರುಮುತವ
ತ್ತುಂ || ಬಳಿಕಸಮುಸಾಮುಗ್ರಿಯುಗಳಿಂ ! ವಿಳಿತಪಾಕವರಚಿಸಿಭೋಜ
ನ | ಗಳನುನಾಡಿಸಿಮೆಚ್ಚಿಸಿದನಮ್ಮಾಳಿಯದೇವರೂ ||೩೨|| ಅದುವೆಕಾ
ರಣವಾಗಿಸೌಭಾ | ಗ್ಯದಿವಿರಾಜಿತರಾಗಿಮುಹಿಮಾ | ಸ್ಪದಯುತರ್ಗೆಸ
ಮಾನವಾಗಲ್ಬರುವುದೇನೀನೂ || ವೊದಲುದೊಡ್ಡವನಾಗುತಂಗಳಿ | ಸಿ
ಪಬಳಿಕಲವರುಗಳೆಸರಕೊಂ | ಬುದುವಿಹಿತವಹುದೀಗಕರಸಲ್ಕೂಡದೆಂ
ದೆನಲೂ ||೩೩! ಜನನಿಯುನುಡಿಯುಕೇಳಿಶಂಕಿಸಿ |ಮನದಿವಿಪ್ರಕುಮಾರರಾ
ಡಿದ | ವಿನಯಹೀನಕಠೋರವಾಕ್ಯಗಳನ್ನುಭಾವಿಸುತೇ|| ಅನುವಿನಿಂರಾ
ಮುಯನುಳಕ್ಕನ | ಳಿನಯನನುಮುನರುಗಳಹೊಂದಿರು |ನನಿಬರಂಕರತಂ
ಮುಸಬ್ಬವನೂಡವೇಕೆಂದೂ ||೩೪|| ಒಂದೆನುನದಿಂದಾದಿವಸಕಳೆ| ಪಂ
ದುಪೂರ್ವೋದಯದೊಳೆದ್ದಾ | ರಿಂದೆಪೇಳದೆನುರುಳನಂದದೆಪುರವಪೊ
ರಮಟ್ಟು || ಮುಂದೆಕರಿಚಮುರೀಮೃಗಾವನ | ದಂಪಕೂಕನ್ಯತಪ್ರಗಂ
ಡಕ | ಬೃಂದಮುರುಭಲ್ಲೂಕಕೇಸರಿಪುಂಡರೀಕಕಿಟಿ ||೩೫|| ಕಪವಲೀಮು
ಖಘೂರಿ ಮೊಯ || ಪ್ರಸರಕಂಬರರಾಮುರುಕ್ಯಾಮ | ಹಿಷಕರಭಕಾಸರಗ
ವಯಶಾಕ್ವರಮೃಗಾದಿಗಳ|| ವಿಸರವತಿಕ್ರೌರ್ಯಸ್ವಭಾವದೊ | ಳೆಸೆವಭೀ
ಕರವಿಪಿನದೊಳುಸಾ | ಹಸವಚುಂಬಿತವೆನಿಪಲೋರ್ವನನೆಯತಿಕಯುಚ
ದೂರ ||೩೬|| ವೆನಿಪನರ್ಗ್ಗವನಡೆಮುತ್ತಾ | ತನುಮಪೋನ್ನತವಾಪ

ವೆನಿತುದೂರದೊಳಿಹುದೆನುತ್ತವರವರಕೇಳುತ್ತ॥ ಅನಿತರೊಳು ಪರ್ವತ। ಧರಣೀಸುರಾತ್ಮಜ । ನೆನಿಸುವಾತಂಕಂಡನಾಗಳ್ । ಘನತರಶ್ರೀಶೈಲವ ನುದುಸ್ಕಲುಷವಿಪಿನಾಳಿ ॥೩೭॥ ಕೀಲವನುಮಹಾದಿತ್ಯತರುಣೀ। ಜಾಲವ ನುಸನ್ಮುನಿಗಣಾಲಯ। ಮೂಲವನುನಿಖಿಲೈಕತೀರ್ಥಸುಜಾಲವನುಮೋ ಕ್ಷ॥ ಶ್ರೀಲಸಿತಪರಮೋತ್ಸುಕಾಲಾ। ವಾಲವನುಜನಿತೇಷ್ಟಕಲ್ಪಕ। ಸಾ ಲವನುಸ್ಮರವೈರಿನೈಜವಿಶಾಲಕ್ಷೇತ್ರವನು ॥೩೮॥ ಕಂಡುಸಂತೋಷಾತಿಶ ಯಪ್ಪು। ತ್ಪುಂಡರೀಕದಿತನ್ಮಹೀಧರ। ಮಂಡಿತಸುಶಿಖರಾಗ್ರವನುಮಧಿ ಗಮಿಸಿಯುಗ್ರಜಿಯಾ ॥ ಗಂಡನೆಲ್ಲಿರುತಿಹನೋನಾನೋಡ। ಗೊಂಡುಪೋ ಗವೆನೀಗಹುಡುಕು । ತ್ತಂಡಲೆವುತಂನಮ್ಮಮನೆಗಿಂತೆಂದುಹಂಬಲಿ ಸೀ ॥೩೯॥ ಮೊದಲುಶಿಖರೇಶ್ವರದಿನಿಟ್ಟಿಸಿ। ಸದಮಳಾಂಚಿತಹಾಟಕೇ ಶ್ವರ। ನುದಪಸಿತದೊಳುನೋಡಿಗಣಪತಿಮಂದಿರದೊಳರಸೀ॥ ಚದುರತ ನದಿಂಪಂಚಮಠಗಳೊ। ಳೊದವಿಯೋಗಿಗಳೆಡೆಯೊಳಾರಿಸಿ। ವಿದಿತವಹ ಪಾತಾಳಗಂಗಾತೀರದೋಳ್ಹುಡುಕೀ ॥೪೦॥ ವರಸುನಿರ್ಮಲಸಲಿಲಕುಂಡನಿ ಕರಪ್ರದೇಶದೊಳಗೆನಿರೀಕ್ಷಿಸಿ। ಸುರುಚಿರಾಂಕಿತಕೋಟಿಲಿಂಗಾಸ್ಥಾನಗ ಳಪೊಕ್ಕು॥ ನಿರುಪಮೋಜ್ವಲಚಂದ್ರಗುಪ್ತನ। ಪುರದೊಳೀಕ್ಷಿಸಿಶಂಖ ಚಕ್ರಸು! ಧರಾಪರಾಡುಸರಸ್ವತೀನರಸಿಂಹವರಬಿಂದೂ ॥೪೧॥ ವಾಮತೀ ರ್ಥನಿಚಯದೆಪರಿಕಿಸಿ। ಹೇಮಮಯಮಣಿಖಚಿತಸಾಲದ। ಭೀಮಗೋ ಪುರವೆಲ್ಲತಿರುಗಿದನಾಗರಾಮಯ್ಯಂ॥ ಕೋಮಲಸುತಂತ್ರಿಪುರಸಂಹರ! ಧಾಮದೊಳಗೆಯಲಂಪುರೀವರ। ಸ್ವಾಮಿಬಾಲಬ್ರಹ್ಮಸಿದ್ಧಮಹೇಶವೀ ರೇಶ ॥೪೨॥ ಸ್ಕಂದಸೋಮೇಶ್ವರಪ್ರಸೂನಾ। ನಂದಶಿಖರೀಸಂಗಮೇ ಶ್ವರ। ದಿಂಡೆಬಾಹುರ್ದ್ವಾರದುಪದ್ವಾರಗಳಮಧ್ಯದೊಳೂ॥ ಸಂದಿರುವ ತೀರ್ಥಂಗಳೊಳುತಾಂ। ನಿಂದುಪರಿಕಿಸಿಸಾಲದೊಳಗಿಹ। ಸಂದುಗೊಂ ದುಗಳೆಲ್ಲತಿರುಗುತೆತಮ್ಮಭಾವನವಂ ॥೪೩॥ ಎಲ್ಲಿರುವನೆಂದೆನುತೆಕಂಡವ ರೆಲ್ಲರಂಕೇಳುತ್ತಲವರಾ। ಮಲ್ಲಿಕಾರ್ಜುನನನ್ನು ತೋರಿಸಲಾಲಯದೊಳಿ ರುವಾ॥ ಸಲ್ಲಲಿತಲಿಂಗಾಕೃತಿಯುಕಂ। ಡೆಲ್ಲಿನಮ್ಮಗ್ರಜಿಯುಭಾವರು ಇಲ್ಲಿಯಿರುತಿಹರೆಂದುಪೇಳಿದರಿಲ್ಲವೆಂಡುಶ್ರಮಂ ॥೪೪॥ ಹೊಂದಿದವನವ

ನಾದಕಾರಣ | ದಿಂದದೊಂದೆಡೆಯಲ್ಲಿಕುಳಿತುಮ | ಮಂದಭಕ್ತಿವಿಶೇ ಷವಿಂದಾದೇವರನಕುರಿತೊ || ಮುಂದುಗೊಂಡುಮುದನ್ವಿತದಿಬಾ |ಲೇಂ ದುಧರನೇದೀವಳಿಗೆಗಾ ! ನಂದದಿಂನಿಮ್ಮನುಕರೆಯಲ್ಕೆಮ್ಮಬುದ್ಧಿಯೊ ಳೂ ||೪೫|| ಮಿಸುಕದಿಷ್ಟೆಯುನೆಲಸಿರಲುನಾಂ | ಬಿಸಿಲುಮಳೆಗಳಲೆಕ್ಕಿಸ ದೆಈ | ವಸುಮತೀತಳದಲ್ಲಿಕಾಲೂರುತ್ತೆನಿಂದಿರದೇ || ಪೊಸಗೆಳೆಯ ರಾಗಿರುವಬಾಲಕ | ವಿಸರವಗಲುತತಿಶಯಪ್ರೀತಿಯೊ | ಳೊಸೆವಜನನಿಗೆ ತಿಳಿಸದಂತೀಶಿಖರಿಯಂಶೇರಿ ||೪೬|| ಎಲ್ಲೆಡೆಯೊಳಾರೈದೆದೇವರ |ಮೆಲ್ಲ ಡಿಗಳಂಕಾಂಬಕಾಂಕ್ಷೆಯು |ಪಲ್ಲವಿಸಿಸೂರ್‍ಯೋದಯಾನಂತರದೆತಂಗಳಿ ನಾ || ನಿಲ್ಲುದುತ್ತುಗಳುಂಡುಪುಸ್ತಕ| ವೆಲ್ಲಮಲಗಿರುತಿರ್ದವಾಳಿಗೆ | ಯ ಲ್ಲಡಗಿಸುತೆಪಾಠಶಾಲೆಗೆಪೋಗದೋರುವನೇ ||೪೭|| ಬಂದೆನಿಲ್ಲಿಗೆಯೇನ ನುಡಿಯಪೆ | ಕಂದನೊಳುನಿರ್ದಯವಗೈವುದು | ಚಂದವೇಮುದ್ದಿಸುತ ಬರುವುದುಇಂದಿನೊಳುಭಾವಾ || ಹೊಂದಿದವರುಸಮಾನಜನಗಳು | ಇಂ ದುದೀಪಾವಳಿಯವಾಸೆಗೆ | ನಂದನೆಯುರುಮನಳಿಯರಂನೆರೆಕರಸಿಕೊ ಳುತಿಹರೂ ||೪೮|| ಅದಕೆನೀನುಲ್ಲಾಸದಿಂಬ|ರ್‍ಪುದೆಮಹಾವೈಭವವುನೀಂ ಬಾ | ರದೊಡೆಗಾಶಿಯನಾಳ್ವನಿಮಗಿದುಧರ್ಮವೇನಂಬಿ || ಮುದದಿತಾವಿ ಪ್ಪೆಡೆಗೆತವಮತಮ | ಬದಿಯವರುಬಾಂಧವರ್ಗಳಾದರು | ಒದಗಿದೊಡೆಮ ನ್ನಿಸುತೆಮೇಣವುತಣವಬಿಡದುಣಿಸೀ ||೪೯|| ಪ್ರೀತಿಮಾಡುವರಾದನಾದೊ ಡು | ಮಾತೆರದೊಳಾನಲ್ಲಸ್ನೇಹೋ| ಪೇತಬಂಧುವುಮನೆಗೆಬಂದಿಹೆನೋ ದಿಪಾತಾಡ || ದೀತೆರದಕಠಿಣತನವಾಳ್ವದೆ | ಭೂತಪತಿಶ್ರೀಗಿರಿಯೊಡೆ ಯನೇ | ಈತರಳನೇನೋದಿನಕೆಬಾರೆನುತೆಕರೆಯಲ್ಕೆ ||೫೦|| ಬಂದನೆ ನುತೆಂಮನದಿಕೋಪವ | ಹೊಂದಿಕಂಗಳಕೆಂಪಮಾಡುತೆ | ಕಂದನಂ ನೀಕರಿಸಿಬಿಡುವರೆತಂದೆನೀಬಾರಾ || ಎಂದುನೋಳ್ಪೆನೊಮಗಳನಳಿಯ ರ | ನೆಂದಪೇಕ್ಷಾಪೂರ್ಣಮಾನಸ | ದಿಂದಿರುವೆಳೆನ್ನಯಜನನಿಗುರುತಂದೆ ನೀಬಾರಾ ||೫೧|| ಪ್ರಿಯವನಾಂಮಾಡುವೆನುನೀನತಿ | ಶಯಬಡವನೆನ್ನ ದಿರುನಿನ್ನಯ | ದಯದಿಸಕಲಪದಾರ್ಥಗಳುತುಂಬಿಹವುಮನೆಯೊಳಗೇ|| ರಯದೊಳಗೆಬಾರಯ್ಯನೇನಿ | ರ್ದಯದಿಬರುವುದಕಾಗದೆನೆನಿ | ಶ್ಚಯದಿ

ಬಿಡುವವನಲ್ಲನಾಲಸವೇತಕಿದಕೆನುತೇ ||೩೦|| ಭೂಸುರಸುತಂತನ್ನಬುದ್ಧಿವಿ | ಕಾಸವೆನಿಸುವತೆರದೊಳಾದಿ | ಗ್ರಾಸನಾಕೃತಿಯಿಾಕ್ಷಿಸದೆವಾನಸದಿಭ್ರಯುಗೊಂಡೂ || ಓಸುದಿಶೆಗಳನಾರಯಿದೆನಿಜ | ದಾಸಭಾವದಿನೀನಿರುತ್ತಿಹ | ವಾಸಕ್ಕೆದಿರಲೆನ್ನಕಡೆನೋಡದಿಹೆನಾಂಮುನ್ನ ||೩೩|| ಏನೊತಪ್ಪಿಹೆನೆನುತೆಚಿಂತಿಸು | ತಾನಿಲಕಡೆಯೊಳಂಬಿಕಾಮಳ | ಧ್ಯಾನದಿಂದಾಮೂರ್ತಿಮನದೊಳುದಯಿಸಿತನ್ನೊಳಗೇ || ತಾನೆತೋರಲುದೇವಿಯೇಬಮ | ಮಾನಿತಳೆನಿಘ್ಮ್ರವನುನೋಡಲು | ಮಾನಸದೊಳಾಶಿಸುತೆಬಂದಿರೆನೀವನಾದರಣಂ ||೩೪|| ಮಾಡಲೊಳಿತೇ ಗಂಡನೆಂತಹ | ಗಾಢಭಾಗ್ಯೋಪೇತನಾದರು | ನಾಡಿನೊಳುನಾರಿಯರುಪುಟ್ಟದತವರುಮನೆಯಾಶೇ || ಮಾಡದಿರುವರೆತಾಯಿಕರುಣವು | ಮೂಡಿಭಾವನುನೀನು ... ಡ | ಗೂಡಿದೀಪಾವಳಿಯಹಬ್ಬಕೆಬರುವುದೆಂದೆನುತೇ ||೩೫|| ಬೇ... ಕರೆದುಕರೆದಾ | ಕೂಸುವವರಾಕೃತಿಯಕಾಣದೆ | ಗಾಸಿಯಹುದಿವರ್ಗಳನುಕರೆದೊಯ್ಯದಲೆಪ್ರೋಗುವುದು || ವೋಸವೆನ್ನಯಸರಿಯಹುಡುಗರು | ಹಾಸಿಸುತ್ತೆನಗುತ್ತಿಹರುವಾರಿಗ | ರೋಸರಕೆನಾಂಗುರಿಯಹುದರಿಂಮರಣವೇಲೇಸು ||೩೬|| ಎನುತೆತಟ್ಟಿಖರಾಗ್ರವೇರುತೆ | ಮನದೊಳಗಜಿಭಾವಗಳಪಾ | ವನಸುಮೂರ್ತಿಗಳಂನಿಲಿಸಿತಾನಾತ್ಮಬಂಧುಗಳಾ || ಜನನಿಗೃಹಪಟ್ಟಣದವಾಂಛೆಯು | ದಿನಿತುಮಿಲ್ಲದೆನಿಂದುಮತಿಶಯು | ವೆನ್ನಿಪನಿಮ್ನನದಿಯನೆವರಿಕಿಸಿನೋಡನಿಶ್ಚಲದಾ ||೩೭|| ಮತಿಯ ... ಂದಾಮಯಯನುಬೀಳುವ | ನಿತ್ತರೊಳಗೆಶಂಕರನುಮುಂಬಾ | ಯುತದಿಬಂಧುಭಯರುಗಳೆರಡುಕರಂಗಳಂಪಿಡಿಯೇ || ಪ್ರತಿರಹಿತಧೈರ್ಯಾಢ್ಯನಾಗ... | ...ಕತಿಗಳಾಕೃತಿಯುನೋಡುತೆ | ಅತಿಶಯಾಶ್ಚರ್ಯಾನ್ವಿತಂಸುತನೆಂದನವರೊಡನೇ || ಆರುನೀವೆಲ್ಲಿಂದಬಂದಿರಿ | ಕಾರಣವದೇನೆನ್ನಪಿಡಿಯಲು | ಬಾರದೋದರುನಮ್ಮಭಾವಕ್ಕಗಳುಹೃದಯದೊಳೂ || ತೋರದಿರುವುದುಕರುಣವವರಿಗೆ | ಸಾರತರವೋಹಾತಿಶಯದಿಂ | ಶೇ...ವ್ಗಳುಪಿಡಿಯಲೇಂಕಾರಣವೋತಿಳಿಯದಿದೂ ||೩೮|| ಬಿಡುವುದೆನ್ನಯಪ್ರಾಣವನು . | ... ಡೆಯೊಳಾಂಸಂದೇಹವಿಲ್ಲಪೆ| ಬಿಡುವೆನೆನಲವನೊಡನೆಸರನಾದರದೊಳಾಗಿರಿಜೆ||

ಬಿಡದೆನುಡಿದಳುತಮ್ಮನಾನಿ । ನ್ನೊಡನೆಹುಟ್ಟಿರ್ದವಳುತಿಳಿಯೈ । ಕಡು
ಸಡಗರದಬೆಡಗಭ್ರಮರಾಂಬಿಕೆಯುನಾನಿವರೂ ॥೬೦॥ ನಿಮ್ಮಭಾವಂದಿ
ರುಇದೆನೆಲೆಯು। ತಮ್ಮನೀಂಪುಟ್ಟಿದಬಳಿಕನಾ। ನೊಮ್ಮೆಯಾದರುನೋ
ಡಲಿಲ್ಲದುಕಾರಣವೆನಿನ್ನಂ ॥ ಗಮ್ಮನೇಗುರುತರಿಯದಾದೆನು । ಸಮ್ಮದ
ಸುತಂಸೋಮಯಾಜಿಗೆ । ಸಮ್ಮತದೆಭೀಮಪತಿಯಿಂನೀಂಬಂದನೆನೆಕೇ
ಳೀ ॥೬೧॥ ಭ್ರಮಿಸಿಸಣ್ಣಪನೆತ್ತಪ್ಪೋದನೊ । ಕ್ರಮವಿದಲ್ಲೆನುತರಸಿಬಂ
ದೆವು ! ವಿಮಳಮಾನಸನಾಡನುಜನೇತಂಟೆವ್ವೆನಿನ್ನಂ ॥ ಪ್ರಮದದಿಂದೆನೆ
ಕೇಳಿಬಾಲಕ । ನುಮೆಯನಿಸುವತ್ಯಗಿಸುಪಾಲೆಯ । ಉಮಣನಹಭಾವ
ನವದಂಗಳಿಗತಿಮುದದೊಳಿರಗೇ ॥೬೨॥ ನಗುತೆಪರಮಾದರದೊಳೆತ್ತುತೆ।
ಬಿಗಿದುತೆಕ್ಕೆಯೊಳಪ್ಪಿಶೀತಲ । ನಗಜೆಭಾವಗೆನಮಿಸುತುತೆರ್ರೆತ್ತಿವ್ಮೆಯೆನೆ
ಸಾಷ್ಟಾಂಗಂ ॥ ಮಿಗಿಲೆನಿಪಭಕ್ತಿಯೊಳುನಮಿಸಿದ। ಮುಗುವನಾಹಸಿತಾ
ನನದೆತ್ತಿ । ಜಗಬೊಡೆಯನಾಲಿಂಗಿಸುದಿಕಾರುಣ್ಯದಿಂಗವನಾ ॥೬೩॥ ಸ
ರ್ವದೇಹವಪೂರ್ಣಕರುಣಾ । ಪೂರ್ವಕದೆಹಸ್ತಾಬ್ಜದಿಂಪೇ। ದಾರ್ವನು
ಸ್ಪರ್ಶಿಸುತನುಡಿದಂಪತ್ಸನೀಂತಾಯಿ ॥ ಗೋರ್ವನೇಮುಗಸಾದಕತದಿಂ!
ದುರ್ವರೆಯೊಳರಸುತ್ತಲಿರ್ಪಳು । ಗುರ್ವಿನಿಂಪೇಳದೆಬರುವುದಿದುಪೊಪ್ಪಿ
ತವೆನಿನಗೇ ॥೬೪॥ ಬಂದುಬೆನಗಾನಂದವಾದುದು। ಸ್ಕಂದನಿವನಿನ್ನಳಿಯ
ನದೊಬಹ । ನುಂದುರಾರೂಢಾಗ್ರಜನುಮುವಮುಂದುಗೊಂಡಖಿಳ ॥ ನಂ
ದನರಪ್ರಮಥಾಳಿಪಾರ್ಶ್ವದ । ಬೃಂದವುತ್ತಿಪ್ರಯಕೋಟಿಗಳಬಲು । ಚಂ
ದದಿಂಪೆಮ್ಮವನುಕಂಡೆಯೊವಾಂಛೆತೀರಿತಲಾ ॥೬೫॥ ದುರ್ಗಮದಕರ್ಕಶ
ದಕಂಟಕ । ಮಾರ್ಗಕ್ರಮವಂಕಳೆಯೆನಿಲುವುದು । ದುರ್ಗಮಚ್ಯುತಪ್ರಮ
ಥಗಣಸಂಭಾವಿತಾಂಚಿತಸಂ ॥ಸರ್ಗವೆನಿಸಿಹುದಿಲ್ಲಿಸೌಖ್ಯಸು ।ವರ್ಗಗಳಕೆ
ಲಕಾಲವನುಭವಿ । ಸರ್ಗಳಗುಣೋತ್ತಮನೆಮ್ಮೈದುನನೇಎನಲುಕೇಳಿ ॥
೬೬॥ ಭಾವನಾನಿಲ್ಲಿರಲುಬಂಡೆನೆ ! ದೀವಳಿಗೆಗೆಲ್ಲರಸಹಿತವು। ದ್ಭಾವದಿಂ
ಹಬ್ಬಕ್ಕೆನಾಂಕರೆದೊಯ್ಯುವದಕೆಬರಲೂ ॥ ತಾವುಬಾಲಕನೆಂದುಎನ್ನಂ
ಭಾನಿಸದೆನಮ್ಮಕ್ಕಅಳಿಯರು ! ದೇವಪ್ರಮಥರುಸಹಿತಪಯಣವಮಾಡ
ಬೇಕನಿತ ॥೬೭॥ ಪ್ರಮದದಿಂಮದಾಜಧಾನಿಗೆ । ಸುಮನಸಂಸೇವಿತನೆ

ಪಾಮುಕ | ವಿಮಳವಂಶಜರುಗಳುಬಾಂಧವರುಗಳುಕುಲಕೋಟಿ || ತಮ
ಪ್ರಿಯಾತ್ಮಜರುಗಳನಳಿಯುರ | ನಮಿತವಿಭವದೆಕರದುತರಲೀ | ಕ್ರಮುವ
ನತಿಗಳೆಯುವಲೆಬರುವುದುಕರುಣದಿಂದೆನಲೂ ||೧೮|| ಅವಧಿಯಿಲ್ಲಪ್ರಯಾ
ಣಗೈಯಲು | ದಿವಸಗಳುನಡುಮಾರ್ಗದೊಳಗಾ | ಗುವುವುದೀವಳಿಗೆಯ
ನುನೀನೀವತ್ಸರದೊಳುಬಿಡೂ || ಕುವರನೇಮುಂಬರುವಹಬ್ಬಕೆ|ಯಿವರ
ನೆಲ್ಲರಕೂಡಿನಾನುಬ| ರುವೆನೆನುತಪೇಳಲುಗಿರಿಶನದಕೇಳಿದಿಗಿಲ್ಗೊಂಡೂ||
೧೯|| ಗೋಷ್ಟಿಯಂಬಿಡುತೋರ್ಸ್ವಪೋಗೆನಿ | ಕೃಷ್ಟವೈಬಾರದಿರೆಬಾಂ
ಧವ | ರಿಷ್ಟರಿಂದಣಕವನೆಮಾಡಿಸಿಕೊಳ್ಳಲಹುದಾಗೀ || ಕಷ್ಟಭಾಜನನ
ಪ್ಪೆನೆನುತಂ | ವಿಷ್ಟರಶ್ರವಸಾಯುಕಾಂಘ್ರಿಗೆ | ನೈಷ್ಟಿಕದೊಳೆರಗುತ್ತೆ
ನಿಮ್ಮವನಾವಬಗೆಯಿಂದಾ ||೨೦|| ಲಾದೊಡೆಯುಕರದೊಯ್ಯುದೇಬಿಡೆ|
ನೈದಯೂನಿಧಿಎನಲುನಗುತೆಪ್ರ | ಮೋದಮಾನಸನಾಗಿಯಂತಾಗಿರಲುನಿ
ನ್ನಮುಹ || ತ್ತಾದವಾಂಛೆಯುಸುಮ್ಮನೇಕೆಡ| ಲಾದಕಾರಣವೇಕೆಬಾರೆಂ
ದಾದರಿಸಿಪ್ರಮಥಾಳಿಪುತ್ರರುಗಳುಸಹಿತವಾಗೀ ||೨೧|| ನಾನುಬರುತಿಹೆನೆಂ
ದುಪೇಳಿದ|ಯಾನಿಧಿಯುಶಿವನಿತ್ತಭೀಮಪ|ಶೀನಗರದೊಳುತನ್ನ ತನುಜಾ
ತನನುಹುಡುಕುತ್ತೇ || ಮಾನಿನಿಯುಭಯಗೊಂಡುಚಿಂತಿಸಿ| ತಾನುಪುರ
ದ್ವಾರಪ್ರದೇಶದಿ | ಕೂನನಾರೈವುತ್ತೆಬಾಲರಕೂಡಿಯಾಡುವನೋ ||೨೨||
ಬಾರದಿರುವನೆನುತ್ತೆಬರುತಿಹ | ದಾರಿಗರಕೇಳುತ್ತೆಲರಸುತೆ | ಕೇರಿಕೇರಿ
ಗಳಲ್ಲಿನೋಡುತೆವ್ಯಾಕುಲದಿನಿಂತಾ || ಪೂರುಷರುಗಳನೆನ್ನ ತನುಜನ|
ತೋರಿರೈನೀವುಗಳೆನುತಖಿಳ | ಪೌರಜನರಂಕೇಳಿಬಹುಸಂತಾಪದೊ
ಳಗಾದ || ೨೩ || ಮಾನಸದಿನೇತ್ರೋದಕಗಳವಿ | ತಾನದಿಂತೊಡರುವ
ನಡಿಗೆಯಿಂ | ದಾನಿಖಿಳಶರೀರದೊಳುಸ್ವೇದವದುಸುರಿವುತಿರೇ || ಏನು
ಮಾಡಲಿಎನುತೆತನ್ನೊಳು | ತಾನೆಚಿಂತಿಸಿನೆಲದಿಬೀಳುತೆ | ಮಾನಿನೀ
ಮಣಿಯೇಳುತತಿಶಯದಾರ್ತಿಯಿಂದಯ್ಯೋ || ೨೪ || ಎನ್ನಘನಧನರಾಶಿ
ಯೇಸುಕೃ | ತೋನ್ನತದಸತ್ಪುಣ್ಯವೇನೀ | ನೆನ್ನನಗಲ್ವುದಕೇನು
ಕಾರಣವೆನುತೆಕರಕರದೂ || ತನ್ನಮನೆಗಾಗಮಿಸಿಬಹುಳಾ | ಪನ್ನ
ಹೃದಯದೊಳನ್ನಪಾನಗ | ಳನ್ನುವರ್ಜಿಸಿದಿನವದೊಂದುಯುಗಾಂತ

ವೆಂಬವ್ರೊಲೂ ॥ ೭೫ ॥ ಇಂತುದಿನಗಳ್ ಕಳೆವುತಂನಿಜ । ಸ್ವಾಂತದೊಳುಶ್ರೀಗಿರಿಯಧೀಶನ । ಚಿಂತಿಸುತೆತನಯನನುಸಮ್ಮತಗೈಯಲೋಸುಗವೇ ॥ ಅಂತರಂಗದಿನೆನೆದುನುಡಿದಾ । ಭ್ರಾಂತಿಸಂಚಿತಗೋಷ್ಟಿಯದುನಿ । ಶ್ಚಿಂತಮಾನಸದೊಳಗೆನಿಜವೆನ್ನುತ್ತೆನೆರೆನಂಬೀ ॥೭೬॥ ಶಿವಮಾರ್ಗದಿಪ್ರೋದನೊಮಗನು । ದೇವರೇನಾನೆತ್ತಹುಡುಕಲಿ । ಜಾವಜಾವದೊಳುಂಬುವನೆನಿತುಹಸಿದನೋಬಳಲೀ ॥ ಭೂವಿಶಿಷ್ಟಾರಣ್ಯದೊಳಗೆಷ್ಟು । ಗಾವಳಿಯಕಂಡಂಜಿದನೊನಾ । ನೇವೆವೋಸದೊಳರಿಯದಾದೆನುಮಲ್ಲಿಕಾರ್ಜುನನೇ ॥ ೭೭ ॥ ನಿರತಭಾವನುನೀನೆಕರುಣಾ । ಕರನುತನಗೆಂದೆನುತೆನಂಬೀ । ಪುರದೊಳಗೆತಾನಾಡುತಿರ್ದನುಪ್ರೂರ್ವಮಿತ್ರರೊಳೂ ॥ ಮರುಳತನದಿಂಪಂಥವೆಸಗುತೆ । ಯರೆವುರುಳನೆಂದವಿಯುವಾಸೆಗೆ । ಗುರುತರದದಂಪತಿಗಳೇನಿಮ್ಮುವನೆಕಡತರಲೂ ॥೭೮॥ ಬಂದನೋಶ್ರೀಗಿರಿಯಧೀಶ್ವರ । ಕಂದನವನೇವೈದುನನುಮದ । ರಿಂದೆಕೂರ್ವುದುಸನ್ನಿಧಿಗೆಕರಕೊಂಬುವುದುದಯದೀ ॥ ಹಿಂದೆಪ್ರಿಯನನಗಲ್ದುಬಡತನ । ದಿಂದೆನಿಧಿನಿಕ್ಷೇಪವಿವನೇ । ಎಂದುಸಂತಸದಿಂದೆದುಃಖಂಗಳನುನೆರೆಮರೆದೂ ॥ ೭೯ ॥ ಇರ್ಪನಾರಿಗೆಬಾರದಿಹವ್ಯಥೆ । ಬರ್ಪುದೆಂಬುದನೆರಿಯೆರಕ್ಷಿಸ । ಲಾರ್ಪದೀನಶರಣ್ಯನೆಂದೆಂಬುವಬಿರುದುನಿಜದೀ ॥ ಇರ್ಪವಂನೀನೆನ್ನಶ್ರೇಯದ । ಕೂರ್ಪುಮತ್ಕುಲದೀಪಕನಮಿಗೆ । ತೋರ್ಪುದೈಮಾನಸದಶೋಕವುತೊಲಗುವಂದದಲೀ ॥೮೦॥ ನೀನೆಗೈಯುವುದೆನುತೆಕಂಗಳ । ತಾನೆಮುಚ್ಚಿರಲಂತರಂಗದಿ ! ಧ್ಯಾನಕದೀಂತತ್ಸುದತಿಗಾಯೆಡೆಯೊಳೇಸ್ವಪ್ನ ॥ ವೇನೊಎಂಬುವತೆರದೊಳಂಬಾ । ಮಾನಿನೀಸಹಶ್ರೀಗಿರೀಶ್ವರ । ನೂನೆಜಂಗಮರೂಪದಿಂದಾಯುವತಿಚಿತ್ತದೊಳೂ ॥ ೮೧ ॥ ಸನ್ನಿಧಿಯನೈದುತ್ತೆಸಾಧ್ವಿಯೆ ! ನಿನ್ನಪರಿತಾಪವನುಕಳೆಯು । ಳ್ಕಿನ್ನುಕಾರಣವೆಸಗುವೆನುನಾಂದಕ್ಷಮುಖಧ್ವಂಸಂ ॥ ಮುನ್ನಮಾಡಿಸಿದಾತನೀಕೆಯು । ಸನ್ನುತೆಯೆನಿಪಮತ್ಪ್ರಿಯೆಯುಸಂ । ಪನ್ನೆನೀಂಪೂರ್ವದೊಳುಪೇಳಿದತೆರದಿರಾಮಯುಗೆ ॥ ೮೨॥ ಪ್ರೀತಿಯಿಂಭಾವಾಗ್ರಜೆಯರಾ । ಗೀತೆರದರೂಪಿಂಪೆಕಾಣಿಸು । ತಾತ

ವಕದಿಂನಿನ್ನ ಸುತನೊಡಗೂಡಿಬರುತಿಹೆವು ॥ ಸಾತಿಶಯುವೆನೆಕಣ್ಗಳಂ ತೆರ। ದಾತರುಣಿನೋಡುತ್ತವರ್ಗಳ । ನಾತಳದಿಕಾಣದತಿವಿಸ್ಮಯವಾತ್ಮದೊಳುಪರ್ಬಿ ॥ ೮೩ ॥ ನಾನದೆಂತುಕೃತಾರ್ಥಳಾಗಿಹೆ । ನೀನಿಜದಿ ಪರಮೇಶ್ವರಾಂಘ್ರಿಯ।ನೂನದಿಂದರ್ಶಿಸಿದೆನಿಂದಿಗೆಚಿಂತೆಯುಂಕಳೆಯೆ॥ ಆನಿಪಾನನೆನಿಪ್ಪಶಂಕರ । ನಾನೆಬರುತಿಹೆನೆಂದುದಕೆಯಾ । ಮಾನಿನಿಯು ತದ್ಭ್ರಾಂತಿಯಿಂದಿರಲಲ್ಲಿಹೇವಾದ್ರಿ ॥ ೮೪ ॥ ಚಾಪನುಂಬಾಲಕನಕಂಡಪ । ರೂಪದಿಂಸತ್ಪ್ರೀತಿಕುತುಕದೊ । ಳೇಪರಿಗ್ರಹಿಸುತ್ತಕರದಿಂಕರವನಿಜಪುರಕೇ ॥ ಪೋಪುವವರುಗಳಾಗಬೇಕೆನು । ತಾಪರಾತ್ಪರ ಪ್ರಮಥಪುಂಗವ । ಪಾಪಕದಿನಿಜತನಯಭಾರ್ಯಾಪರಿವೃತನುವಾಗೀ॥ ಆಸಮಯದೊಳುಸುಕರುಣದಿವಾ । ಯಾಸಹಿತಮುಂಮಾಡಿಮಸಥೋ ; । ಗಾಸಮಾಹಿತವೆನಿಪನಿಸ್ಸಂದೇಹದಿಂದವನ ॥ ಲೇಸೆನಿಪಪಟ್ಟಣವಸೇರಿಸಿ। ಕೂಸೆನೀವಿರುತಿರ್ಪಸ್ಥಲವಿದು । ವೇಸಹಜವೋಎನಲು ಇದುವೇ ನಿಜವೆನಲುಶೂಲೀ ॥ ೮೬ ॥ ಎಂದನೆಲೆನಡೆಕಂದನಿಮ್ಮಯ । ಮಂದಿರಕ್ಕೆನುತವನಪಾಣ್ಯರ । ವಿಂದಮುಂಬಿಡಲವನುತವಕದಿಪೋಗಿಜನನಿಯುಳಾ॥ ದ್ವಂದ್ವಪದಕೆರಗಲುಸಮಾದರ । ದಿಂದಲಾಶ್ಚರ್ಯಾತಿಶಯದಾನಂದಮಾನಸಳಾಗಿಕಂಡನನಪ್ಪಿಮುದ್ದಿಡುತೇ ॥ ೮೭ ॥ ಎನ್ನಘನಧನರಾಶಿಬಂದೆಯ । ಎನ್ನಕುಲಪಾವನನೆಬಂದೆಯ । ಎನ್ನವವಳೊಡದೆಂಡಬಂದರುಅಕ್ಕಭಾವಗಳೂ ॥ ಮನ್ನಿವೇಶಕೆನೋಡೆನುವಬಹು । ಳೋನ್ನತಸುವಚನಾಮೃತವದೇ । ತನ್ನಕಿವಿಯುಂಸೋಂಕೆತಕ್ಷಣತೆನುಮನಗಳುಬ್ಬೀ ॥ ೮೮ ॥ ನಾನುಕಂಡಿಹಕನಸುನಿಜವಾ । ಯ್ತೇನುಸುಕೃತವೊಈಶನಡಿಯುದು । ತಾನೆಬಂದುದೆನುತ್ತಲವರ್ಗಳಿಗೆದುರುನಡೆತಂದೂ ॥ ಮಾನಿನಿಯುಳಾಶಂಕರನನುಭೆ । ವಾನಿಸುತರಂಕಂಡುಭಕ್ತಿನಿ। ದಾನೆಪೇರ್ಮೆಯೊಳೆರಗಿಸದ್ವಿನಯೋಕ್ತಿಸಂಚಯದೀ ॥ ೮೯ ॥ ಸನ್ನುತಿಸಿಕರತರಲುಕಾರು । ಣ್ಯೋನ್ನತಾಕ್ಷಿಸುಪಾತಮಾತ್ರದಿ । ತನ್ನಿವೇಶಾಂತರದಿಸಂಪದವತುಳವಾಗೆಸೆಯೇ ॥ ಠನ್ನಚೆನ್ನಗಳಾಭರಣವ । ತ್ಯುನ್ನತಡಘನರಾಶಿಯುದುಸಲೆ । ತನ್ನಮನೆಯೊಳುತುಂಬಿರಲ್ಕುಚಿತಾಸನಗ

ಳಿತ್ತು ||೯೦|| ಭರ್ಗನಿಗೆಬಾಲಾಕ್ಷಸುತರಿಗೆ | ದುರ್ಗಿಗಾಪ್ರಮಥರಸುವ
ರ್ಗಕೆ|ನಿರ್ಗುಣಾಂಚಿತಭಕ್ತಿಯಿಂದಭ್ಯಂಜನಂಗೈದೂ|| ಭಾರ್ಗವೀಧವನಕ್ಷಿ
ಸುಮವನಿ | ಸರ್ಗದಿಂಧರಿಸಿರುವಪಾದಕ | ನರ್ಗಳವೆನಿಪ್ಪವಯವಂಗ
ಳಿಗೆಲ್ಲುರುಟನಿಡುತೆ ||೯೧|| ಜಳಕವರಚಿಸಿಧೌತವಸ್ತ್ರಂ | ಗಳನಳವಡಿ
ಸಿವಿಭವದಿಂಮಂ | ಗಳಕರಸದುಪಚಾರದಿಂತಣಿಸುತ್ತೆಪಂಚಕನಿ || ರ್ಮ
ಳಸುಭಕ್ಷ್ಯಾನೀಕಪಾಯಸ | ಗಳನುಷಡ್ವಿಧರಸರಸಾಯನ| ಮಿಳಿತ
ವಾಗಲುಭರ್ಮಪಾತ್ರಂಗಳಲಿನೀಡುತ್ತೆ||೯೨|| ಎಲ್ಲರರ್ಪಿಸೆವೀಳ್ಯಗಂಧಪ್ರ|
ಪುಲ್ಲಸುಮಮಾಲ್ಯವಿತಾನಗ | ಳಲ್ಲಿಕಾಂಚನರತ್ನಭೂಷಣರಾಜಿಯಿಂ
ತಣಿಸೇ || ಬಲ್ಲಿದರುಮೆನಿಸಿರ್ಪಗಣವರ | ರೆಲ್ಲರತಿಸಂಮುದದೊಳಿಹು
ದಂ | ಮೆಲ್ಲನೇಪೂರ್ವದೊಳುಕಾನನದಲ್ಲಿರಾಮಯನಾ ||೯೩|| ಕನಲಿನು
ಡಿದಾವಿಪ್ರಬಾಲಕ | ರನಿಬರುಂತಮತಮ್ಮೊಳೀತನ | ಮನೆಗೆಬಂದಿ
ರ್ಪುದನುಕರ್ಣಾಕರ್ಣಿಯಪ್ಪಂತೇ || ಜನರಮುಖದಿಂಕೇಳಿದೆವುನಿ |ನ್ನಿ
ನದಿವಸದೊಳಗಕ್ಕನಂಭಾ | ವನನುಕರತಂದಿದ್ದೆಯಾನೀನೆನುತೆಮೂದ
ಲಿಸೀ ||೯೪|| ಬರುವೆವೆಂದವರುಗಳುತನ್ಮಂ ! ದಿರಕೆಬರೆಕಮನೀಯ
ಕಾಂಚನ | ವರಸುರತ್ನಮಯಾಂಚಿತೋತ್ಸೌಧಪ್ರಕೋಷ್ಠದೊಳೂ||
ಮೆರೆವತೋರಣಗಳವಿತರ್ದಿಯ | ಸುರುಚಿರವನವಲೋಕಿಸುತನಂ |
ತರದೊಳತಿಶಯಜನದಕಲಕಲವಾಲಿಸುತೆಬಾಹ್ಯ ||೯೫|| ದ್ವಾರದಕ
ವಾಟವದುಮುಚ್ಚಿರೆ | ಸೇರಲೊಳಗಳವಲ್ಲದಿರುತಿರೆ | ಸಾರಿಭರದೆನಿಜಾ
ಲಯಕೆವೃತ್ತಾಂತವೆಲ್ಲವನೂ || ಪೂರಯಿಸಿನಿಜಜನಕಬಾಂಧವ ! ವಾ
ರಸಭ್ಯರ್ಕಳಿಗೆತಿಳುಹಲ | ಪಾರಕಾಂಕ್ಷೆಯೊಳೀಕ್ಷಿಸುವೆವೆಂದಾಲಯ
ಕೆಬಂದೂ ||೯೬|| ಸತ್ಯವಾಗಲ್ಕಂಡವರಿದೇಂ | ಕೃತ್ಯವ್ರೋಕೇವಲದರಿ
ದ್ರರಿ | ಗತ್ಯಧಿಕವೆನಿಸಿರುವಭಾಗ್ಯವುಲಭಿಸಿರುವುದೆಂತೂ || ಪ್ರತ್ಯಯ
ದೊಳನುವೂನದಿಂದಿಹ | ಕೃತ್ಯವೆನುತೆತ್ರಿಕಾಲವೇದಿತ |ವೃತ್ತ್ಯವೋ
ಘನೆನಿಸುವಶಾಂಭವಯೋಗಿಪುಂಗವನೂ||೯೭|| ರಾಮಯಂಬಾಲಕರಕೂ
ಡೆವಿ | ರಾಮಕಾರಣವೆನಿಸುವಾಯೂ|ರಾನುಷ್ರಂಗಣವಿಟಪಿವಿಪ್ರಭ್ಯಾಯೆ
ಯೊಳುನಿಜಸಹಜಾ || ರಾಮೆಯಂತತ್ಪತಿಯಕರೆವಭಿ|ರಾಮವಚನವನು
ಸುರುಪ್ಪಭ್ರಮುರಾಂ| ಬಾಮಹಾದೇವಿಯರದೇವರನತಿಶಯದಿಕರೆದೂ||೯೮||

ತಂದುಭಾವಂಗಕ್ಕನಿಸುವಾ । ನಂದದಿಂಹಬ್ಬುಟವುಣಿಸಿದ । ನಿಂದುನಂ
ದಿಮುಖಪ್ರಮಥಸುತಬೃಂದಸಹವಾಗೀ ॥ ಇಂದುಧರನುಮಿವಂದಿರುಗಳ
ಸು । ಮಂದಿರದೊಳಿರುವಂಡವರಿವುತ । ಮಂಡಮೋದಾಶ್ಚರ್ಯಮಾನಸದಿಂ
ಪ್ರಖಿಲರಪರೂ ॥೯೯॥ ಧ್ಯಾನಪೂರ್ವಕದಿಂದೆಮಹಿತಭ । ವಾನಿಶಂಕರರಂ
ಸ್ತ್ರಿಗಳಿಗಸ । ಮಾನಭಕ್ತಿಯೊಳೆರಗಿನ್ಯೆಜಿವಾಸವ್ಯೆದಿರಲೂ ॥ ಮಾನಿನೀ
ಮಣಿಗಾಢಪುಲಕಿತ । ಸಾನುರಾಗಾನಂದಬಾಷ್ಪವಿ । ತಾನಪೂರಿತನೇತ್ರ
ಳಾಗಿವಿಶೇಷಶ್ರದ್ಧೆಯೊಳೂ ॥೧೦೦॥ ಚಿತ್ತಜಾರಿಯಪಾದಕಮಲವ । ಚಿತ್ತ
ದೋಳ್ಸ್ಮರಿಸುತ್ತೆನಮಿಸಿನಿ । ಜೋತ್ತಮಾಂಗವಸಾರ್ಚುತಂಚರಣದೊ
ಳುಪರಶಿವನಾ ॥ ಮತ್ತೆವಿನಯುನಿಯುಕ್ತಮೃದುಮಧು । ರೋತ್ತರದಿಬಿನ್ನ
ವಿಸಿದಳುಲೋ । ಕೋತ್ತರನೆಶಿವಯೋಗಿಹೃದಯಾಲಯಮಹಾದೇವಾ ॥
॥೧೦೧॥ ಪರಮಪಾವನಪಾರ್ವತೀಧವ । ಗುರುವೆಶ್ರೀಗಿರಿಮಲ್ಲಿಕಾರ್ಜುನ ।
ಸುರನಮಿತನೀನೆಂತುಭಕ್ತಿಗೆಸುಲಭನ್ಯೆಯುಮಿತ ॥ ಕರುಣದಿಂಚಾಲಕನು
ಬಯಸಿದ । ತೆರದೊಳೀಯವಸರದಿನೀನೇ । ಭರಿತಪ್ರಿಯದಿಂದೆನಗಳಿಯ
ದೇವರೆನಿಸಿದೆಲೋಕ ॥೧೦೨॥ ಮಾತೆಭ್ರಮರಾಂಬಿಕೆಯುಪುತ್ರಿಯು । ಮಿಾ
ತೆರದೊಳ್ಯೆಟಪ್ಪಮತ್ಸುಕೃ । ತಾತಿಶಯವೇನೆಂಬೆಸುರರಿಂಗಾದೊಡೀವಿಧ
ದಾ ॥ ಪ್ರೀತಿಯಿಂನಿಜರೂಪುದೋರ್ಪುದು । ಭೂತನಾಥನೆನೂತನವೆನಿಪು ।
ದೈತರುಣಶಶಿಶೇಖರನೆನೀನೆಂದುನುತಿಯಿಸಲೂ ॥೧೦೩॥ ಆಸತಿಯಳೆಂಪರ
ಶಿವಂಕರರು । ಈಾಸಮುದ್ರದೊಳದ್ದಿತೇಲಿಸು । ತೇಸದರ್ಥನೆನಿಪ್ಪವ್ಯೆ
ದುನರಾಮಯನಸುಗುಣ ॥ ರಾಶಿಯನಿಸುವವಿನುತಶೀಲಪ್ರ । ಕಾಶಕನ
ದಿವಿಜರುಗಳಾಶ್ಚ । ರ್ಯಾಸಮೇತರುಮಾಗಿನೋಡಲುನ್ಯೆಜದೇಹಗಳಿಂ॥೧೦೪॥
ಬರುವಪ್ರಿದ್ಯೆಸುಖದಾಯುತದೆಸು । ಸ್ಥಿರವೆನಿಪಮತ್ಪದವಸೇರಲು । ತ್ವರಿತ
ದಿಂಪುಷ್ಪಕವುಬಂದಿಹುದೆನುತಲೀರ್ವರನೂ ॥ ಹರುಷದಿಂದೊಡಗೂಡಿಪ್ಯೆ
ಭವ । ಭರದಿಕೊಂಡೊಯ್ದಂಶಿವನುತಾ । ನಿರುವಪಟ್ಟಣವ್ಯೆದಲಾಗಮವೇ
ದ್ಯನದ್ಭುತದೀ ॥೧೦೫॥ ಈಮಹೀತಳದಲ್ಲಿವ್ಯೆದುನ । ರಾಮಯನಚರಿತೆ
ಯನುಭಕ್ತಿಸು । ಕಾಮದಿಂದೋದಿದಡೆಕೇಳಿದಡಾಗಿರೀಶನಹಾ ॥ ಸ್ವಾಮಿ
ಯನಿತಕೃಪಾಕಟಾಕ್ಷದಿ । ಶ್ರೀಮಹಿತವ್ಯೆಭವದೊಳಿಹಪರ । ನಾಮಫಲ

ತಾರತಾರಕಹೀರಗೌರಶ | ರೀರಮಾರಮದಾಪಹರಘನ | ಶೂರಗರಳಾಹಾ
ರಸಾರಸುಧೀರವಾರನುತಾ ||೨೦|| ಪರ್ವತಾಧಿಪಜಾಮನೋಹರ | ಊರ್ವಿ
ರಥಪತಗಾರ್ವಬಾಣಸು | ಪರ್ವಸೇವಿತಪೂರ್ವನಿರ್ಜರಪೂಗಸಂಹರಣಾ ||
ಶರ್ವಶಾಶ್ವತಶಂಕರಾಭವ | ಸರ್ವಸತ್ವಾಂತರನಿಧಾನಕ | ನಿರ್ವಹಣಸನ್ಮೌ
ನಿಗಣಸಿರ್ವಿಷಯನಿಷ್ಕೃತ್ಯ ||೨೧|| ಎನುತೆನುತಿಸಲುಶಂಭುಮೂರ್ತಿಯ |
ಘನದಯಾಮತಿಯಿಂದೆಬೇಡೌ | ತನುಜೆಯೇನಾಂನಿನ್ನಭಿಮತವನೀವೆನೆಂ
ದೆನಲೂ || ಇನಿಯನಂನೈಜಾನುಜನ್ಮಳ | ನನುನಯದೊಳೊಡಗೂಡಿತವ
ಪದ | ವನಜಸೇವೆಯೊಳೆಂದಿಗಗಲದೆವರ್ತಿಸುವವಾಂಛೆ ||೨೨|| ಎಂದುಬಿನ್ನ
ವಿಸಲ್ಕೆಪುಷ್ಪಕ | ಬೃಂದದೊಳಗಿರಿಸುತ್ತವರನಾ | ನಂದದಿಂನಿಜಮಂದಿರ
ಕೆಕೊಂಡೊಯ್ದಕಾರಣದಿಂ || ಸಂದಪೂರ್ವಸತೀಸುಮಣಿಗಳ | ಮಂದಮ
ಹಿಮಾತಿಶಯವದುವೆ | ಮ್ಮಿಂದಪೇಳಲ್ಕರಿದೆನುತಲಾಮಾರಭಕ್ತನಿಗೇ ||
||೨೩|| ಗುರುವರಂಪೇಳಲ್ಕೆಲಜ್ಜಾ | ಭರಪ್ರವಿಸ್ಮಯಮಾನಸಾಬ್ಜದಿ | ಪರ
ಮಸಾಧ್ವೀಸಹಿತನಾತತ್ಪದಯುಗಕೆನಮಿಸೀ || ಶಿರವಬಾಗಿಸಿಸಂಭ್ರಮದಿ
ನಿಜ | ಕರಗಳಂಜೋಡಿಸುತಲುಂನಿಂ | ದಿರುವಶಿಷ್ಯನಸತ್ಕೃಪೆಯೊಳೀ
ಕ್ಷಿಸುತಲಾಚೆನ್ನ ||೨೪|| ಬಸವರಾಜನಬಳಿಗೆಪೋಗೆಂ | ದುಸುರಿಸ್ವೇಚ್ಛಾ
ವಶದಿನಡೆದನು | ಸಶಿವನಹಗುರುಮೂರ್ತಿಯದುಕಾರಣದೊಳಿವರುಗಳಾ ||
ಅಸಮಮಹಿಮೆಯದಿಂತೆನುತೆಚೆ | ದ್ರಸಭರಿತವಾಕ್ಯಂಗಳಿಂಚೆನ | ಬಸ
ವದಂಡಾಧೀಶ್ವರರಿಗಾಮಾದಿರಾಜಯ್ಯ ||೨೫|| ಪೇಳುತಿರಲಾಸಭ್ಯರೊಳಗೆ
ದ | ಯಾಳುವಹಚೆನಬಸವರಾಜನು | ನೀಳತೋಳ್ಗಳೊಳಪ್ಪಿಯಾನಂದಿ
ಸುತಲವರುಗಳಾ || ಬಾಳಲೋಚನಭಾವದಿಂಪ್ರಮು | ಥಾಳಿಸಂತೈಸುತ್ತಿ
ರಲುತ್ರೈ | ಕಾಲದೊಳಗರ್ಚಿಸುತೆಪರಮಾನಂದದಿಂದಿಹನೂ ||೨೬|| ಕೂ
ಕದಾಮಾರಯನಚರಿತೆಯ | ಪ್ರಕಟಿತಸದ್ಭಕ್ತಿಯುಕ್ತರಿ | ಪಾಕಮಾನ
ಸದಿಂದಲಾಲಿಸಿಪಠಿಸಿದಜನರುದ || ವೀಕರಾಭರಣನಕೃಪೆಯೊಳ | ಸ್ತೋ
ಕವೈಭವಸಂತತಿಯನಿ | ವ್ಯಾಕುಲದಿಪಡೆಯುತ್ತೆಶಿವಸಾಯುಜ್ಯವೈದುವ
ಗೂ ||೨೭|| ಎನುತೆರೇಣುಕದೇಶಿಕೇಂದ್ರನು | ಘನದಯಾಮತಿಯಿಂದೆಪೇ
ಳಿದ | ನನಘಚಾರುಚರಿತ್ರನಹಕುಂಭಜನುಕೇಳುತ್ತೆ || ಮನದೊಳಗೆಸ

ಮ್ಮೋದವೆಂಬುದು । ಘನವೆನಿಸಿಸದ್ಭಕ್ತಿಯಿಂ ಪಾ । ವನಸ್ವಭಾವಂಮುಂ ದಣಕಥಾಂತರವಜೆಸೆಗೊಂಡಂ ॥೭೯॥ ಶರಜನನನವತಾರಮ್ಮ್ಯದುಪದ । ಶರ ಜನನಸಂಸೇವಕಾವನ । ಶರಜನನಶರಗುಣವಿದಾರಣಶರಣಗಣಪಕ್ಷ ॥ ಶರಜ ನನಸಂಜಾತಲಿಪಿಧೀ । ಕರಣಮಂತ್ರಶರೀರಸುಶ್ರೀ । ಕರಣಕಾರುಣ್ಯಾ ಮೃತಾರ್ಣವಕಾಲಭೀಕರಣಾ ॥೭೯॥ ಇದುವೆರೇಣುಕಸಿದ್ಧಸದ್ಗುರು । ಪದಪಯೋರುಹಜನಿತಶಿಷ್ಯಸ । ಮುದಯದೊಳುನಿಜಮತಸುದೇಶಿಕರುಗ ಳಕಾರುಣ್ಯ ॥ ವದವಿದುವಶ್ರೀಸಿದ್ಧರಾಮಂ। ಮುದದಿಸೇಳಿದಚೆನ್ನಬಸವಾ। ಭ್ಯುದಯವೆನಿಪಪುರಾಣದೊಳಗಿದುಚತುರ್ಥಾಶ್ವಾಸಂ ॥೮೦॥

ಅಂತು ಸಂದಿ ೩೨ಕ್ಕಂ ಪದ ೨೦೭೮ಕ್ಕಂ ಮಂಗಳಮಸ್ತು.



## ಪಂಚಮಾಶ್ವಾಸ ಪ್ರಾರಂಭವು.

### ಮೂವತ್ತುಮೂರನೆಯ ಸಂಧಿ.

### ಮಲ್ಲಬ್ರಹ್ಮಯ್ಯರುಗಳ ಕಥೆ.

ಸೂ॥ ಮಲ್ಲಬ್ರಹ್ಮಯ್ಯಗಳಿಂತ । ನ್ನಲ್ಲಿದಿವಟಗೆಹಿಡಿಸಿದೊಡೆತನು । ವೆಲ್ಲಉರಿಯಲುನೃಪತಿಯವರಂಕಳುಹೆಶಮನಿಸಿತು ॥

ಪದ॥ ಅಬ್ಜಭೃತ್ಪಾದಾಬ್ಜನಿಜಸ್ವಾಂ । ತಾಬ್ಜಷಟ್ಕವಿರಾಜಿತಂತ್ರಿಜ । ಗಜ್ಜನಕಶಂಕರಸುಭಕ್ತಶರಧಿಶಶಾಂಕನಿಭಂ ॥ ಅಬ್ಜನಯನದೃಗಬ್ಜಧೃತ ಪಾ । ದಾಬ್ಜನಿಜರೂಪಂವಿಮಲಪ್ರಮು । ಥಾಬ್ಜಹಂಸಂಚೆನ್ನಬಸವೇಶಂ ಪೊರೆವುದೆಮ್ಮಂ ॥೧॥ ಅವಧರಿಸುಕುಂಭಜನೆವಿನ್ನು ತೆ । ವಿವರಿಸಿದನಾರೇ ಣುಕೇಶ್ವರ । ನನಿಚಲಿತಭಾವದೊಳುಮುಂದಣವಾರ್ತೆಯಂಮುದದೀ ॥ ಶಿವನಿರೂಪವನಾಂತುಬಂದಿ । ರ್ದವರುಮಲ್ಲಬ್ರಹ್ಮದೇವರು । ಭವವಿದೂರ ಪ್ರಭಾವಕರೆನಿಸುವವರುಶ್ರೀಚೆನ್ನ ॥೨॥ ಬಸವಸಚಿವಾಗ್ರಣಿಸಮೀಪದೊ ಳಸಮಕೌಶಲವಿಧಿಯನುರೆಪ್ರಕ । ಟಿಸುತೆದೀವಟಿಗೆಯುಪಿಡಿಯುತಿರಲೋ ರ್ವದುರ್ಮಂತ್ರೀ ॥ ವಸುಮತೀಶ್ವರನೊಡನೆವಿಜ್ಞಾ । ಪಿಸಿದನೆಂತೆನೆಭೂಪತಿ

ಯಕೇಳ್ । ಬಸವದಂಡಾಧೀಶನಲಿಯನಬಲಿಯೊಳಿರ್ವರತಿ ॥೩॥ ಧೀರ
ಮಾನಸರುಗಳಪಾರವಿ । ಚಾರವಿಕ್ರಮರುಗಳುದಿವಟಗೆ । ಮೇರೆಯಿಂಪಿಡಿ
ವಸಮಹಾತ್ಮ್ಯೆಯದೆಂತುಬಣ್ಣಿಪುದು ॥ ಆರಿಗಾದೊಡಸಾಧ್ಯವದರಿಂ । ಪೂರ
ವಾಗಿಯೆಚಿತ್ತವಿಸುಗಂ । ಭೀರಹಸ್ತದಿಪಿಡಿದವಿವಟಗೆಬೆಂಕಿಯಿಲ್ಲಪಲೇ॥೪॥
ಹತ್ತಿಸುತೆತ್ತೈಲವದಿರದೆಬೆಳ । ಗುತ್ತಲಿರ್ಪ್ಪುತೇಜಗುಂದದೆ । ಯೆತ್ತಬೆಳ
ಗಿನಮೊತ್ತವಿಹುವತ್ತತ್ತಚೆಲುಗುಂಪು ॥ ಮುತ್ತಿರುತ್ತಿಹುದೆನಲುಕೇಳಿನೃ
ಪೋತ್ತಮನುಚೆನಬಸವರಾಜನ । ಹತ್ತಿರಕೆಕರೆವುತ್ತನಘಭವದೀಯಸನ್ನಿ
ಧಿಯೊಳ್ ॥೫॥ ಇರುವದಿವಟಗೆಯವರುಗಳನೀ । ರ್ವರನುಎಮ್ಮಂಸೇವಿಸ
ಲುಸ । ತ್ವರದಿಕಳುಹೆನಲಂತಸಂಗದಿಚೆನ್ನಬಸವೇಶಂ ॥ ಪರಮಪಾವನ
ಮೂರ್ತಿಗಳನುರು । ತರದುರಾಗ್ರಹವೃತ್ತನೆನಿಸುವ । ಧರಣಿಯೊಡೆಯನ
ನಿವನವರುಮೋಲೈಸಲೆಂತಹುದು ॥೬॥ ಕಳುಹಬಾರದುಅವರನಿಲ್ಲಿಗೆ ।
ಕಳುಹದಿರ್ದೊಡೆಮಾವನಂಭೂ । ವಲಯಪಧಿಪತಿಕೇಳಿದೊಡೆದುಸ್ತರವೆನಿ
ಪುದಕಟಾ ॥ ಅಳಿವಕಾಲವುಬಂದುದೋಬಿ । ಜ್ಜಳನೃಪಾಲಗೆನುತ್ತೆಚಿಂ
ತಾ । ಕುಲದಿನಮ್ರಾನನದೊಳಿರ್ದಂತಾದೊಡೆಯುಮವರಾ ॥೭॥ ಕಳುಹ
ಬೇಕಾದುದುಗಡಾಮುಂ । ತಿಳಿಯಬಪ್ಪುದುತನ್ಮಹಿಮೆಯಿಾ । ಖಳಗೆನುತೆ
ನಿಶ್ಚಯಿಸಿಮಲ್ಲಬ್ರಹ್ಮಿನೇವರನೂ ॥ ಥಳಿಲದೇಕರತರಲುಚಾರರು । ಗಳನು
ಕಳುಹಲುಬೇಗದಿಂಭೂ । ತಳದಧೀಶನಸಭೆಗೆಬರಲಾನೃಪತಿಭಾವವನೂ ॥
॥೮॥ ಅವರೊಡನೆತಿಳಿಸುವುದಕೂಹಿಪಿ । ಭವವಿದೂರನುಹೆದರುತಂನ ।
ಮ್ರವದನನುಮಾಗುತ್ತಲಿರೆತನ್ಮನದವ್ಯಾಕುಲವ ॥ ಅವಿಚಲತೆಯಿಂದರಿ
ದುಎಮ್ಮುತ್ತವ । ನಿವನಿಗೊಪ್ಪಿಸಲಪ್ಪುದೆಂದೆಂ । ಬುವುದರಿಯಲುಪ್ರಸಾದ
ಭಾವದಿಭೂವರನಿಗಿವರ ॥೯॥ ಮಹಿಮೆತಿಳಿಯುವುದೆಂದೆನುತೆನಿಜ । ಗೃಹ
ವಸಾರಲುಚಿಂತಿತಾಸ । ನ್ನಹಿತಮಾನಸದಿಂದೆಚನ್ನವೃಷಾಧಿನಾಯಕ
ನೂ ॥ ಮಹಿತಧೀವೈಭವಸಮನ್ವಿತ । ನಹಬಸವಸಚಿವಾಗ್ರಗಣ್ಯನು । ಮ
ಹಿಯೊಡೆಯನಚರಿತೆಯಕೇಳಿದವಮಾತ್ರದೊಳಗೀತಂ ॥೧೦॥ ಇಂತುಮಾಡಿ
ಪನೀದಿನದೊಳಿ । ನ್ನೆಂತಹುದೊನಾಳೆನುತಿರಲ್ಕಿಯ । ನಂತೆಯೊಡೆಯಂ
ದುರ್ಮದದಿಮಲ್ಲಯ್ಯಬೊಮ್ಮಯಮಾ ॥ ಹಂತರೆಂಬೀರ್ವರನುದಿವಟಗೆ ।

ಯಂತಳೆದುಬಳಿಯಲ್ಲಿನಿಲ್ಲ್ದ । ಲ್ಕಂತುಕರಸಲುಘನವಮಹಿಮರುನಿಜಪ್ರಭಾವವನೂ ॥೧೧॥ ತೋರಬೇಕೆನ್ನುತ್ತೆಸಡೆದರು । ಧೀರರುಗಳವನಿದಿರಿನಲ್ಲಿಯ । ಪಾರಮನುಜರುನೋಡುತಿರೆಸತ್ವರದೊಳಾಗ್ನೇಯ ॥ ಸ್ಫಾರದಿವೆತ್ತಗೆಗಳನುಕೈಪಿಡಿ । ದಾರವಿಪ್ರಭೆಯಂತೆಬೆಳಗಿಸ । ಲೇರಿತಖಿಳಾಂಗದೊಳ್ಗುರಿಕೋಟ್ಯವಧಿದಿವಟಿಗೆಯು ॥೧೨॥ ಒಬ್ಬುಳಿಸಿದುರಿಯಾತ್ಮದೇಹವ । ಪಬ್ಬಿನಿಜತನುತಾಪವೈದ । ಲ್ಕಬ್ಬರಿಸಿಬಿಜ್ಜಳಧರಾಧಿಪನಾಗತಲ್ಲಣಿಸೀ ॥ ಎಬ್ಬಿಸಿರೆನುತ್ತತಿಕಳವಳದಿ । ಬೊಬ್ಬೆಗಳನಿಡುತೆದ್ದುಕುತಲದಿ । ದಿಬ್ಬನಲ್ಬೀಳುತ್ತಹೊರಳುತಧೀರವರ್ಗವನೂ ॥೧೩॥ ಮೇಲೆಮೇಲ್ಕರಸುತ್ತಗಾಢಿಯ । ಮೇಲೆಸೋಲುತೆಹೆದರಿದಿಕ್ಕುಗ. । ಳಾಲಿಚಲಿಸದೆನಿಟ್ಟಿಸುತೆಕಣ್ಣುಗಳಮುಚ್ಚುತ್ತೆ ॥ ಕೀಲಿಸಿದಪುರ್ವ್ಯಥೆಯೊಳುಂಯಿದೆ । ಮೇಲೆಕೈಗಳನೀಡುತಂಶೀ । ತಾಳವಕುಡಿದುತಂಪುಸೀಮೆಗೆತೆರಳಿಯರಚುತ್ತೆ ॥೧೪॥ ಇರುವಸಮಯದಿಬಸವಧೀಮಣಿ । ಯೊರೆದನವನೀಶನಶರೀರವ । ದುರಿಯುತಿಹಪರಿತಾಪವೇದನೆತೊಲಗುತಿಹವಿಧವಂ ॥ ಅರಿಯುಬಂದಿಹುದೊಂದುಪರಿಕಿಸ । ಲರಿದಪೆಂತೆನೆಮಾಧವಾಸ್ತ್ರ । ಪರಶರೀರಿಗಳಭವಭಕ್ತೇತರಘನಾಬುಗರೂ ॥೧೫॥ ಅತುಲಮಹಿಮಾನ್ವಿತರೆನುತೆನಿಜ । ಮತಿಯೊಳರಿದುಂಡುಷ್ಟಬೋಧಾ । ಯತದಿದಿವಿಟಗೆಗಳನುಪಿಡಿಯಲುವಲ್ಲಯಬ್ರಹ್ಮಾ ॥ ಮಿತಪರಾಕ್ರಮಿಗಳನುಕರಸಿದ । ಕತದೊಳುರಿನಿನಗುದಯವಾಯಿತು । ಅತಿಶಯದೊಳದರಿಂದೆತದ್ವಿಧಿಯಂಬಿಡಿಸೆನಿನಗೇ ॥೧೬॥ ಶಾಂತಿಯಾಗುವುದೆಂದೆನಲುಭೂ । ಕಾಂತಕಳವಳವಮಾನಸದಿಹ । ಸ್ವಾಂತದಿಂಕಳುಹೆಂದವರಸಂಜ್ಞೆಯನುಮಾಡಲ್ಕೆ ॥ ಸ್ವಾಂತದಾಶಯವರಿಯದೇನ್ನೃಪ । ಗಂತನಿಲ್ಲದಕೋಪವೈದಿಹು । ದಿಂತೆನುತೆಚೆತ್ತಗಳಪಿಡಿದಿರ್ದವರುಗಳುಭರದಿ ॥೧೭॥ ಅವರನಾಗಳ್ಪೋಗಿರೆನ್ನು । ತ್ತವಿನಯದೆಕಳುಹಿದೊಡೆಸುಮ್ಮೇ । ರವದನರುಮಾಗುತ್ತೆನೈಜಾವಾಸಮಂಸೇರೀ ॥ ಶಿವನಿರೂಢಾಂಚಿತಮತಿಯೊಳಿರ । ಲವನಿಪನಪರಿತಾಪವತ್ತಲು । ಅವಿಕಲದಿಮಂತ್ರಿಸಿದವಿಧದಿಂಮಾಣ್ದುದಾಬಸವ ॥೧೮॥ ಧೀರನೊಡನಿಂತೆಂದಸೇನುಪು । ರಾರಿತುಲ್ಯನುಮಾದಕತದಿಂ । ಮೇರೆಯಿಲ್ಲದಬಾಧೆಯಕಳೆದುಮರಳಿಬದುಕಿಸಿದೆ ॥ ಆರುನಿನಗೆಣೆಯಧಿಕ

ಕರುಣಾ। ಪೂರಪುಣ್ಯಶರೀರಮಹಿಮಾ । ಗಾರನಿನ್ನುಪಕೃತಿಗೆಸರಿಯಿಲ್ಲೆನು
ತೆಸಂತಸವಡೆ ॥ ೧೯ ॥ ಸಭೆಯವರಿಗಾಣತಿಯನಿತ್ತಾ । ವಿಭುವುನಿಜಭವನ
ದೊಳಗಿರ್ದಂ । ಶುಭಸಮಾಹಿತನಾದಬಸವೇಶ್ವರನುಪರಮಪದಾ ॥ ಸುಭ
ಪಕಾರಣಮಂಟಪವನತಿ । ವಿಭವದಿಂದಪ್ರವೇಶಿಸುತೆಚಿ । ತ್ಪ್ರಭೆಯೊಳಿರೆ
ಧರಣೀಧವನುಪ್ರತ್ಯೂಷಸಮಯದೊಳೂ ॥ ೨೦ ॥ ಅನಘಮೂರ್ತಿಯನಿ
ಪ್ಪಹರಳಯ್ಯನನುಮಧುವರಸಾರ್ಯರೆಂಬುವ । ರನುತರಿಸಿಯಪರಾಧವಿಲ್ಲ
ದಕಂಗಳನುತೆಗಸೇ ॥ ವಿನುತಬಸವೇಶ್ವರನುಕೇಳುತೆ । ಮನಸಿಜಾರಿಯೆ
ಎಂತುಗೈಸಿದ । ನನುಪಮಿತಪಾತಕಿಯುಬಿಜ್ಜಳನೀಶದ್ರೋಹವನೂ ॥ ೨೧ ॥
ಮಾಡಿಕೆಡುತಿಹನೆನುತಕೋಪವು । ಮೂಡಿತೀವ್ರದಿಕರಸಿಕಂಗಳ । ಸೀಡಿಸಿ
ದನವರೆಂದಿನಂದದೊಳಭವನನುಮತದೀ ॥ ಕೇಡುಬಂದಿತುಪಟ್ಟಣಕೆಯೇ
ನಾಡಬಪ್ಪುದುಭಕ್ತರುಗಳೊಡ । ಗೂಡಿಯಿಲ್ಲಿರಬಾರದಿರ್ದೊಡೆತಪ್ಪಹುದು
ನಿನ್ನೆ ॥ ೨೨ ॥ ಅಂತುಮಾಡಿದನೀದಿವಸದೊಳ । ಗಿಂತುಸಂಘಟಿಸಿತ್ತೆನುತ್ತೆ
ಮ । ಹಂತನೆನಲೆಸೆದಿರ್ಪವರಜಗದೇವಮಂತ್ರಿಯನೋ ॥ ರಂತೆತೀವ್ರದಿಕ
ರಸಿಯುವನೊಡ । ನಿಂತುಸುರಪ್ರಮಥಾಳಿಕೇಳಲು । ಕಂತುಮರ್ದನಮೂ
ರ್ತಿಗಳಿಗಪಕಾರಕೃತ್ಯವನೂ ॥ ೨೩ ॥ ಮಾಡುವರಖಂಡಿಸುವನಿಯಮವ ।
ನೋಡಿರುವೆಪರಮಾರ್ಥದಿಂದೀ । ಬೇಡಿನೊಳಗಿನ್ನ ಭವಶರಣರದ್ರೋಹವೆಂ
ಬುದನೂ ॥ ಕೂಡೆಮಾಡಿದನಾವನಂತಹ । ಕೋಡಿಗನಪರಿಹರಿಸಿದೊಡೆ ।
ಕೊಂಡಾಡುತಿಹುದುಸಮಸ್ತಸಜ್ಜನಸಂತತಿಯುಪೂರ್ವ ॥ ೨೪ ॥ ದುರಿತ
ಪ್ರಾಯಶ್ಚಿತ್ತವೆಂದೊರೆ । ದಿರುವುದದುಕಾರಣದೆಧರಣೀ । ವರನುಭಕ್ತದ್ರೋ
ಹಗೈದಿರುತಿರ್ಪನೀಕತದಿಂ ॥ ಚರವರೇಣ್ಯರನುಜ್ಞೆಯಿಂದಾ । ದುರುಳ
ನನುಈಸಮಯದೊಳೆಸಂ । ಹರಿಸುಪಿಡಿದುಸಕಲಶರಣತತಿಹರಸುತಿರೆಶೈಲ
॥ ೨೫ ॥ ಚಾಪನನುಕಂಪಾಮೃತಾರ್ಣವ । ಪ್ರಾಪಕನುಮಾಗೆಂದುನಿರವಿಸಿ ।
ಪೋಪುದಕ್ಕನುವಾಗೆನುತ್ತೆಪ್ರತಾಪನಹಪಶುಪ ॥ ರೂಪಸಾಪ್ರಮಥಾಳಿ
ಕೇಳೆನಿ । ರೂಪಿಸಿದನುರೆಶಮುದಮಾದಿಗು । ಣೋಪದಿಷ್ಟನೆನಿಪ್ಪಶ್ರೀಚೆನ
ಬಸವಧೀಮಣಿಗೆ ॥ ೨೬ ॥ ಹಲವುಬಗೆಗಳತಿಳುಹಿತತ್ಕ್ಷಣ । ಮಲಹರಾತ್ಮಕ
ಮೂರ್ತಿತೆರಳಿದ । ನಲಘುವಿಕ್ರಮಮಡಿವಳಂಮಸಣಯ್ಯಮಾದರಸಂ ॥

ಕಲಹಕೇತನುಬೊಮ್ಮಿದೇವನು । ಕಲಿಯನಿಸುವೇಕಾಂತರಾಮಯ್ಯ । ಮ
ಲಯರಾಜನುಮಿಂಡಸಂಗಯ್ಯನವನಿಪುರದಿಮೆರೆವ ॥೨೭॥ ಶಂಕರಯ್ಯನುಮ
ಧುವರಸುಗಣ । ಸಂಕುಲಾಪ್ತನೆನಿಪ್ಪವನಿಮಿಷ । ಬಂಕಯ್ಯನುಬಳ್ಳೇ
ಶಮಲ್ಲಯಬಾಚಯ್ಯನುಡೋಹ ॥ ರಾಂಕಕಕ್ಕಯ್ಯವೀರಬೊಮ್ಮನ । ಲಿಂ
ಕಕನ್ನದಬೊಮ್ಮಯ್ಯನುನಿ । ಶ್ಯಂಕಕಿನ್ನರಿಬೊಮ್ಮಿದೇವನುಪ್ರಬ್ಬಿತಯ್ಯ
ಗಳು ॥೨೮॥ ಸುರಗಿಚೌಡಯ್ಯಭಾಸ್ಕರನುಕೊ । ಟ್ಟುರದಸೋಮಯ್ಯಸಾತ್ಮ
ದೇವನು । ಹರನಿಭನುಇಳಿಹಾಳಬ್ರಹ್ಮಯ್ಯಮುಸುಡಿಚೌಡಯ್ಯ ॥ ಉಪ
ಮಹಿಮಶಿವನಾಗಮನುವದು । ಮರಸಶೂಲಾಯುಧನುಮುಂತಹ । ಶರಣಸಿ
ಹ್ಮಸ್ತೋಮವದುಮುದದಿಂಬರಲುಪುರವ ॥೨೯॥ ಬಿಟ್ಟುಘನಕಲ್ಯಾಣಕಾ
ರಣ । ಶ್ರೇಷ್ಠಕಪ್ಪಡಿಸಂಗಮೇಶ್ವರ । ನಿಷ್ಟದಾಜ್ಞೆಯಬಂತೆನುತೆಬಸ
ವಾಧಿಪನುಮಧಿಕ ॥ನಿಷ್ಠೆಯಿಂದೇಶಿಕನಿಕಾಯವ । ರಿಷ್ಟಹೊಕ್ಕುಪ್ರಸನ್ನ
ತೆಯಪಡೆ । ದಿಷ್ಟಬಾಂಧವರೆನಿಪಸತ್ಪ್ರಮಥಾಳಿನೋಡುತಿರೆ ॥೩೦॥ ಗು
ಗುವರನುನ್ನೈಜೋದರವನತಿ । ಕರುಣದಿಂಬಿಜ್ಜಳತ್ತೆತೆಕ್ಕೈಯೊ । ಳಿರದೆ
ಯಾಲಿಂಗನವಮಾಡುತ್ತಾಗಧುರ್ಯನಹಾ । ಹರಭಕುತಿಕಾರಣನೆನಿಪಬಸ
ವರಸನನುಬಳಕೊಂಡುನಿಜಮಂ । ದಿರದೊಳಯ್ಯಕ್ಕೈದಿದನುತತ್ಸಮಯಾಂ
ತರದಿದೇವ ॥೩೧॥ ದುಂದುಭಿಗಳಾರವವೆಸೆದುದುಮ । ರಂದಭರಪ್ರಸವಪ್ರ
ವೃಷ್ಟಿಯ । ಮಂದದಿಂಕರೆದುದುತ್ರಿದಶಕಾಮಿನಿಯರಾಡಿದರೂ ॥ ಇಂ
ದುಮೌಳಿಧ್ಯಾನವಿಭವಾ । ನಂದಮಗ್ನತೆಯಿಂದೆನಿರ್ಜರ । ಬೃಂದವಿರೆಭೂ
ಲೋಕದಲ್ಲಿಹಬುಧವಿತತಿಯಾತ್ಮಾ ॥ ೩೨ ॥ ಭರಿತಚಿಂತಾಕುಲದಿಚೆನಬ
ಸ। ವರಸನನುಕಂಡಾರ್ಯಸನ್ನುತ । ಚರಿತನಾಗಿಹನಿಮ್ಮಮಾವನುಸಂಗಮ
ನೊಳಾದ ॥ ನಿರತವೆಮ್ಮನುಪಾಲಿಸುವುದಿ । ನ್ನುರುಮಹಿಮಭವದೀಯ್ಯ
ಕೃತ್ಯವು । ಹರನಿರೂಪದೊಳೆಮ್ಮಭಾರಾವಾಹಕನುನೀನೆ॥೩೩॥ ಎನಲುಗ
ಣಸಂಕುಲದವಚನವ । ಮನಕೆತಂದಾನೆನಿತರವನಿ । ವ್ಮನುಮತದಿನಡೆ
ಯಂದವೊಲುನಡೆಯುವೆನೆನುತಲಾತ್ಮ ॥ ವಿನಯಭಕ್ತಿನಿಯುಕ್ತದಿಂತ ।
ಢ್ಢನಮಹಾತ್ಮರಿಗಾನತನುಮಾ । ಗನಿತರೊಳಗವರುಗಳೊಡನೆಯಾಸ್ಥಾನ
ವಂಬಿಟ್ಟು ॥೩೪॥ ಬಂದರತಿರಮ್ಯತರವಾಗಿಹ । ನಂಪನಕೆಪ್ರತಿಯೆನಿಪವನ

ದೊಳು । ನಿಂದುಲಿಂಗಾನಂದವೈಭವದಿಂದೆಬಸವಗುರು ॥ ತಂದೆಸಚ್ಚರಿತ
ಪ್ರವಾಹದಿ । ಮಿಂದುಪ್ಪೃಷ್ಟತೆಯೊಂದಿರಲುಪುರ । ದಿಂದೆಪ್ರಮಥರುತೆರಳ
ಲಾಕ್ಷಣಪೊಡವಿನಡುಗಿತ್ತು ॥ ೩೫ ॥ ಸಾಮಜಂಗಳಮದವುಡುಗಿದುದು ।
ವ್ಯೋಮದಿಂತಾರೆಗಳುಮರಿದವು । ಭೂಮಿಪನಪ್ರಾಸಾದನಿಕರವುಕೂಲಿ
ಮುದುಗೃಹದಾ ॥ ರಾಮಗಳುಬಣಗಿದವುಸೈಂಧವ । ಸ್ತೋಮಪುಷ್ಪವುದ
ಗ್ಧವಾದುದು । ಗ್ರಾಮದೋಣಿಶ್ರೇಣಿಯೊಳುನರಿಗಳುಪೊಕ್ಕುಕೂಗಿದವು॥
॥೩೬॥ ದಿಶಿಗಳೊಳುತೇಜವಡಗಿತುದ್ವಾ । ದಶತನುಗಳೀರ್ವರುದಯಿಸಿದರು।
ವಿಶದವೆನಲಂತಕನಕಂಡನುವೀರಬಿಜ್ಜಳನು ॥ ಪಶುವಿತತಿಯರಚಿತುವಿಷದ
ಮಳೆ । ಯೆಸೆಯೆಸಿಡಿಲ್ಗಳುಬಿದ್ದುಗೋಪುರ । ಸಸಿನೆಗೆಟ್ಟುದುಸಾಂಪ್ರತ
ದಿಸಸ್ಯಂಗಳೊಣಗಿದವು ॥೩೭॥ ನರಶಿರೋನಿಕರದೊಳುಕಾಗೆಗ । ಳಿರದೆ
ಬಂದಾಡಿವುವನ್ನಿಯು । ಸುರಿದುದಾಗಸದಿಂದೆಕತ್ತಲೆಮುಸುಕಿಡುದುಧಾ
ನ್ಯ ॥ ಪರಿಕರವುಹುಳಿತುದುಸುಭಕ್ಷ್ಯವ್ರ । ಕರವುಹಳಸುತೆನಾರಲಾನಿ ।
ರ್ಭರದೆಮೃತ್ಯುವುಕಾಣಬಂದುದುಬೆಂಕಿಯೂರಿತ್ತು ॥೩೮॥ ಮನೆಗಳೊಳು
ಭೂತಗಳುಪೊಕ್ಕವು। ಘನರಜವಡಸಿತ್ತುನಭದಿಪ। ವನವದಾವರ್ತಾಕೃತಿ
ಯೊಳೆದ್ದುದುನರರಮುಖದಿ॥ಇನಿತುಕಾಂತಿಯುಮಿಲ್ಲವಿಂತಿಂ। ತನವಧಿಕತ
ರದುರ್ನಿಮಿತ್ತಗ । ಳೆನಿಪುವವುಪುಟ್ಟುತ್ತಮಿರಲಾಕೇಡುಗಳನರಿದೂ ॥೩೯॥
ಸಕಲಜನರತಿಭೀತಿಹೃದಯದಿ । ಯುಕುತಿಯೇನುಂತೋರದೇಕಡು। ವಿಕ
ಳತೆಯೊಳಿರಲನಿತರೊಳೆಜಗದೇವನಸಚಿವವಿಭು ॥ ಸುಕರದಿಂಹಸ್ತಾವಸಿತ
ಲಿಂ । ಗಕೆಸದುಪಚಾರಗಳಸಲ್ಲಿಸಿ । ಸಕಲರಾಲೋಕಿಸಲುಶೀಘ್ರದಿತತ್ಪ
ರಾಧಿಪನ ॥೪೦॥ ಶಿರವತಾಂಛೇದಿಸಲುಪೋಗುವ । ಭರದಿನೈಜಾಲಯುವ
ಸೇರಲು । ವರಕುಮಾರನಕಂಡುಜನನಿಯುಳಾವಿಧವರೂಡಿ ॥ ಸ್ಫುರಣ
ಮಾತ್ರದಿಕೇಳಿಕೋಪಾ । ತುರದಿಶರಣದ್ರೋಹವನುಕೇ । ಳಿರದೆತತ್ಕಾಲ
ದೊಳೆಯಾಚಂಡಾಲನಂಪಿಡಿದು ॥ ೪೧ ॥ ಪರಿಹರಿಸದೇಬರಬಹುದೆಪುರ ।
ಹರಪ್ರಮಥರಾಣತಿಯುಗೊಂಡತಿ । ಕರಕನಿಷ್ಠನವೋಲ್ವಿಳಂಬವಮಾಡಿ
ದೆಲೆಯಧಮ ॥ ಗಿರಿಶನೀವಿಧಿಗೆಂತುಮೆಚ್ಚುವ । ದುರುಳಶೌರ್ಯವಿಹೀ
ನನಿಂದೆಗೆ । ಗುರಿಯುಹರೆನಡಿತೊಲಗೆನುತೆಗರ್ಜಿಸಿಜರೆವುತಿರಲೂ ॥೪೨॥
ತಲೆಯಬಾಗಿಸಿತಪ್ಪಿದೆನೆನು । ತ್ತಲಘುಲಜ್ಜಾಕ್ರಾಂತನಾಗುತ । ಮಲಹ

ರಾರ್ಚನೆಯನ್ನು ತೀರಿಸಿಮಾತೆತನಗಿತ್ತ ‖ ಫಲಿತಪರಮಪ್ರಸಾದವನುಸರಿ
ಸಲಿಸಬೇಕೆಂಬನಿತರೊಳೆನಿ । ಸ್ತುಲಮಹಿಮರಹವುಲ್ಲಬೊಮ್ಮಯ್ಯಗಳು
ಬರಲವರಾ ‖೪೩‖ ಕೊಡೆಯೂರೋಗಣೆಯುಮಿಗೆತಾಂ । ಮಾಡಿಸಂತಸದಿಂ
ಮಹಾದು ತ । ವ್ರೂಡೆವೀರರಸಾತಿರೇಕವಿನಿಯುತಮಾನಸದೀ‖ ಕ್ರೀಡಿಸು
ತೆಮೂವರುಕಲತುಮಾ । ತಾಡಿದರುಈದಿವಸದೊಳಗಾ । ಹೇಡಿಯನುಕೊ
ಲ್ಲುವೆವೆನುತ್ತಾತ್ಮದೊಳುನಿಶ್ಚೈಸಿ ‖ ೪೪ ‖ ರಕ್ತಚಂದನವಸನಕುಸುಮಾ
ಸಕ್ತವೇಷವಧರಿಸುತಂಸ । ದ್ಭಕ್ತಿಭಾವನೆಯಿಂದಮಾತ್ಯನುತನ್ನ ಮಾತೃ
ವಿಗೇ ‖ ಶಕ್ತಿಯಂಕುಡುನಮಗೆಸದ್ಭ್ಯೋ । ನ್ಮುಕ್ತರೂಪಳೆಎನುತೆನಮಿಸ
ಲು । ಸೂಕ್ತಿಮುಖದಿಂಹರಸಿಯತಿಬಲವೀಯಲವರುಗಳು ‖೪೫‖ ಭರದಿತೆ
ರಳಿದರಾಣತಿಯಗೊಂ । ಡುರುಭಯಂಕರಮಂಡಲಾಗ್ರ । ಸ್ಫುರಿತಹಸ್ತವಿ
ರಾಜಮಾನೋನ್ನತಸುಮೂರ್ತಿಗಳೊ ‖ ಧರಣಿಪನಸಭೆಗೈತರಲುಸಂ ।
ಭರಿತವಾಂಶಿಕವೈಣಿಕಾಬಂ । ಧುರನಟನಲೀಲಾವಲೋಕನರಾಗಿಕೌತುಕ
ದೀ ‖೪೬‖ ಕಲಿತಕರದೀಪಪ್ರಸರೆರಸ । ದ್ವಿಲಸಿತಪ್ರಭೆಪಬಿಿರಲುಸಿ । ದ್ವಿಮ
ಲಸುರತ್ನಸ್ಥಗಿತಸಿಂಹಾಸನದಿನೆಲಸುತ್ತೆ ‖ ಲಲಿತನರವಿತತಿಪ್ರಸೇವಾ । ಕ
ಲನದಿಂನೃಪನೊಪ್ಪಿರಲುನಿ । ಸ್ತುಲಭಯಾನಕವಸ್ತ್ರಕಣಗಳುಸೂಸುತಿರೆ
ಸಮದ ‖ ೪೭ ‖ ಕೇಸರಿಯನಾದಗಳೆಸೆಯಲು । ಲ್ಲಾಸದಿಂಸಕ್ಷತ್ರನಾಲೆ
ಯು । ವಾಸವನುಬಿಟ್ಟಟಮುಟದೊಳುದುರುತಿರೆಹೆಜ್ಜೆಗಳಾ‖ ಓಪರಿಸದೋ
ಲ್ಮೆಟ್ಟಿತೆಲ್ಲರ । ವೋಸಗೊಳಿಸುತೆವಿೂರಿವಿಕ್ರಮ । ಭಾಸದಿಂಪಲ್ಲಿಯ
ಲಾಸಭಿಕಾಳಿಬೆರಗಾಗೀ ‖ ೪೮ ‖ ಕಾಣುತಿರೆಪ್ರಳಯೈಕಸಮಯಃ ಕ್ಷೋ
ಣಿರಥನಾಭೀಲನಿಭಸ । ತ್ರಾಣದಿಂರಾಜಾಧಮನಸೇರುತ್ತೆವೀರರಸಂ‖ ಉ
ಣುತಂಹಾಯ್ದಿರದೆಹಸ್ತಕೃ। ಪಾಣಗಳಪಿಡಿವೆತ್ತಿಮೂವರು। ಕ್ಷೋಣಿತಲ
ದೊಳುಪ್ರಬಲಸಿಂಹಕಿಶೋರಮರ್ಪಿತದಾ ‖ ೪೯ ‖ ವಾರಣದವ್ರೋಲಿಳೆಯ
ಮೇಲೆಶರೀರಬೀಳಲ್ಕಳ್ಳಿರುವಜನ।ವಾರಭಯಕಂಪದಿಪರಾಜಿತರಾಗುತಿಗಲಿಂ
ತು ‖ ಧಾರುಣೀವಲ್ಲಭನನುರೆಸಂ । ಹಾರವಂಗೈಯುತ್ತವರುಕಡು । ವೈರ
ದಿಂದಾಸ್ಥಾನವನುನೆರೆಬಿಟ್ಟುಸತ್ವರದೀ ‖೫೦‖ ಧೀರನಹಜಗದೇವಸಚಿವ

ನು । ದಾರಮಲ್ಲಯ್ಯಬೊಮ್ಮಿಮ್ಮದೇವರ । ಭೂರಿಪ್ರಿಯದಿಂದೀರ್ವರನುಪಮು ಚಿತವಚನದೊಡನೆ ॥ ಸಾರಸನ್ಮಾನದಿಕಳುಹಿತಾಂ । ಸೇರಿಸಿದನವನವಿ ಸಿತಾಯ್ಗಳ । ನಾರಯಿದುಬಿನ್ನವಿಸಿನಿಜಜನನಿಯಳೆಸತ್ಕೃಪೆಯಂ ॥೫೧॥ ಪಡೆದುಭೂಪನುಶರಣದ್ರೋಹವ । ಬಿಡದೆನಾಡಿಸವಿಭವವರಿಯಬರ। ಲೊಡ ನೆಯವನಂಕೊಲ್ಲದೇವೈಳಂಬನುಂಮಾಪಿಃ ॥ ತಡೆದತಪ್ಪಿಂಗಾತ್ಮದೇಹವ । ಮೃತನಪ್ರೀತ್ಯರ್ಥದಿತ್ಯಜಿಪುದೇ । ಒಡೆಯರಿಗೆಬಪ್ಪಾದಪ್ರಾಯಶ್ಚಿತ್ತವೆಂ ದೆನುತೇ ॥೫೨॥ ಗಂಡುಗತ್ತರಿಗಳದಿಕೀಲಿಸಿ । ಕೊಂಡವಮಾತ್ರದೆಕಡುದಯ ದಿಶಃ । ಖಂಡಮುಂಡನಪಾರ್ವತೀಶಪರಾತ್ಪರಾಖಿಲಬ್ರಂ ॥ ಹಾಂಡಪತಿಪ್ರ ತ್ಯಕ್ಷವಾಗಿಯ । ಖಂಡಭಕ್ತಿಸಮೇತನೆನಿಸುವ । ದಂಡನಾಥನಜನನಿಯಂ ನಿಜತನುಜಜಾಯೆಯಾದನ ॥ ೫೩ ॥ ರುಗೆಳತಾರಕನಕೆಸ್ವಶರೀ । ರಗಳೊಡ ನೆಸೇರಿಸಿದವಿಭವದಿ । ಜಗದೊಳಗೆಮಿಗಿಲೆನಿಪಮಲ್ಲಬ್ರಹ್ಮಿಗಳುತ್ವರದೀ ॥ ನಗೆಮೊಗದಿಕಲ್ಯಾಣಪಟ್ಟಣ । ವಗಲುತಂಪೊರಮಟ್ಟುಚನಬಸ। ವಗುರು ನಿಂದಿಹಸ್ಥಾನವಾರೈವೃತ್ತಿನಡೆತಂದು ॥೫೪॥ ಆಮಹಿಮನಂಕಾಣುತಂಮಿ ಗೆ । ಪ್ರೇಮದಿಂನಡೆದಿರುವವಾರ್ತೆಯ । ನೇಮವರುಹಿಸುತವರುಮಲ್ಲಿಯೆ ನಿಂದುಸುಖಿಸಿದರೂ ॥ ಭೂಮಿಯೊಡೆಯಂಮಡಿದವಾರ್ತೆಯು । ತಾಮರಸ ಬಂಧೂದಯದೊಳಾ । ಗ್ರಾಮವಾಸಿಗಳಾಪ್ತಬಂಧುಗಳೈದೆಯಾರೈದು ॥ ॥೫೫॥ ಭರಿತದುಃಖಾತುರದವ್ಯಥೆಯೊ । ಪರವಶವಿತಲ್ಲಣಗೊಳುತಭೂ। ವ ರನಿಗಗ್ನಿಯಸಂಸ್ಕರಣವಂಮಾಡಿಯಿಂತಪ್ಪ ॥ ಪರಮಘಾತಕಕೃತ್ಯವನುನೆ ರೆ । ಯರಿದುಮಾಡಲುಬಸವನಲ್ಲದೆ । ಪರರಿಗೆಲ್ಲಿಯದಿನಿತುಸಾಮರ್ಥ್ಯವದು ನಮಗಿನ್ನೂ ॥೫೬॥ ಸಲ್ಲದಿದನುಉಪೇಕ್ಷೆಗೈಯಲು।ಬಲ್ಲೆವೇಈಕೃತ್ಯವೆಸಗಿ ದ । ರೆಲ್ಲರಂಧರಣೀಶನಂತೆಯೆಮಾಡದಲೆಬರಿದೇ ॥ ನಿಲ್ಲಲಾಗದೆನುತ್ತೆಸರ್ವ ರು । ತಲ್ಲಣದಿಯೋಚಿಸುತಿರಲುಯಿಂ । ಬಿಲ್ಲದೇಕೆಲದಿವಸಗಳುನಡೆಯಲ್ಕ ನಂತರದೀ ॥೫೭॥

ಅಂತು ಸಂಧಿ ೩೩ಕ್ಕಂ ಪದ ೨೦೪೫ಕ್ಕಂ ಮಂಗಳಮಸ್ತು.



# ಮೂವತ್ತನಾಲ್ಕನೆಯ ಸಂಧಿ.

## ಬಿಜ್ಜಳನ ಪರಿವಾರದ ಯುದ್ಧವು.

ಸೂ ॥ ಭೂವರನಚತುರ್ಬಲದವರುಡು । ರ್ಭಾವದಿಂಕಾದುತ್ತ್ತತಮ್ಮೊ
ಳು । ತಾವೆಮಡಿದರುಚನ್ನಬಸವಾದಿಗಳಮೇಲ್ಬಂದೂ ॥

ಪದ ॥ ಅರಿಪರಾಕ್ರಮಭಂಗಕೌಶಲ । ಪರಚತುರ್ವಿಧಬಲಸಹಂ
ಸ । ತ್ವರದಿಸೇನಾಧಿಪರುಗಳಕಳುಹುತೆಧರಾಧಿಪನಾ ॥ ಪರಮಬಾಂಧವ
ರುಗಳುಮಿತ್ರರು । ಉರುತರದಜಯಭೇರಿಕಹಳೆಯೋ । ತ್ಕರರವವುದಿಶೆಗ
ಳೊಳುತುಂಬಿರೆಸಮರಕನುಕೂಲ ॥ ೧ ॥ ಭಾಸುರಾರ್ಭಟವೇಷಗಳಸು
ವಿ । ಲಾಸದಿಂಧರಿಸುತ್ತೆಶೌರ್ಯೋ । ಲ್ಲಾಸದಿಂಪೊರಮಟ್ಟುಪಟ್ಟಣದಿಂದೆ
ನಡೆವುತಿರೆ ॥ ಶ್ರೀಸಮಂಚಿತಸ್ಯಂದನಧ್ವಜ । ವಾಸನಾಕಲಜಾತವಾತವು।
ಆಸಮಯದೊಳುಮೇಘಸಮುದಯಮಂತೊಲಗಿಸಲ್ಕೆ ॥೨॥ ಕರಿನಿಕರಪದ
ಘಟ್ಟನದೊಳಾ । ಸ್ಥಿರೆಯಭಾರಾವಾಹಶೇಷನು । ಸಿರವಬಾಗಿಸೆತಲ್ಲಣದಿತ
ತ್ಸಮಯದುರ್ವಾರ ॥ ತುರಗನಿಸಿತಖುರಪುಟಸಂಭವ । ಧರಣಿಪಾಂಸುನಿ
ಚಯವುಛಾಯಾ । ವರನರಥಪಥವಡಸಿಮುಸುಕುತ್ತಿರೆಭಟರಸಿಂಹ ॥೩॥
ಧ್ವಾನಕೆಕಕುಭಸಾಮಜಗಳವಿ । ತಾನವುಮದಕ್ಷೀಣವಾಗಿಭ । ಯಾನಕ
ದೊಳಗಘೋಮುಖದಿಭೂಭಗ್ನವಾಗಿರಲು ॥ ಯೇನಪೇಳಲಿನಡೆವುತಿರ್ದು
ದು। ಸೇನೆಯದುಘನಸಮರಕತಿಶಯ। ನೂನಖಡ್ಗಕುಂತಾರಮುದ್ಗರಪಟ್ಟ
ಸಪ್ರಾಸ॥ಭಿಂಡಿವಾಲಪರಶ್ವಥಾದ್ಯಾ!ಖಂಡಸಾಧನಗಳತತಿಯುಮುಂ।ಕೊಂ
ಡುಶೋಭಿಸುತಿರಲುವಾಹಿನಿವಾಹಿನಿಯತೆರದಿ ॥ ಮಂಡಿತಾಮಿತಲಹರಿಸೇ
ರ್ಮೆಯ । ಗೊಂಡುಪುಷ್ಪಿತವನದತೆರದಿಪ್ರ । ಚಂಡಮದವಿಭ್ರಮಿತಸಾರಂ
ಗಾದಿಕದಿಮೆರೆದು ॥೪॥ ಧರಣಿಧರಗಹ್ವರದಪೋಲ್ಪಿ । ರ್ಭರಮಹಾರ್ಭಟ
ಸಿಂಹನಾದ ।ಸ್ಫುರಣದಿಂವೈಕುಂಠದಂತದುಚಕ್ರಸಂಚಾರ ॥ ವಿರುವಕ
ತದಿಂಸತ್ಯಲೋಕಕೆ । ಸರಿಯಹುದುಲೋಕೇಶಭೂಷಾ । ಪರಿಕರೋನ್ನ
ತಿಯಿಂದೆಶಾಶ್ವತಪೌರುಷದೊಳಧಿಕಂ ॥ ೬ ॥ ವಿನುತಿಸಲುಕೈಲಾಸವೆನಲ
ಹು । ದೆನೆಸಮಧಿಗತಧರ್ಮವಾಸದಿ । ಮಿನುಪಭಾಗವತದತೆರದೆನರಸಿಂಹಬ

ಶಿಪನನ ॥ ವೆನಿಸುತಸವಾಸ್ತ್ರನಿರುದ್ಧೋ । ಧ್ಧನತೆಯರಿಭಿತ್ಕರ್ಣ ಶಲ್ಯೋ ಜ್ಝಿನತೆವೈಶೇಷದೊಳುಭಾರತವೆನಲೆಸೆದುಬಳಿಕ ॥ ೭ ॥ ಅತಿಶಯದಿರಾಮಾ ಯಣದವೆ ೞಲ್ । ಚತುರವಿಶ್ವಾಮಿತ್ರಸವನ। ಸ್ಥಿತವೆನಿಸಿಯಾಕಾಶದಂದದಿ ರಾಜಹಂಸಿಲಿ ॥ ಸಿತಪ್ರಭಾಂಚಿತವಾಗಿವರ್ಷೋ । ದ್ಧತರುತುವಿನಂತ ವಿತವೆನಿಪ್ಪೂ : ರ್ಷಿತಸುಶರಥಾರಾಪ್ರಕೃಷ್ಟತೆಯಿಂದಸೆಂಪೆಸೆದು॥೮॥ ಸೋ ರಕಾಂತಾರದವಿಧದಿಬಹು । ಕ್ರೂರಬುದ್ಧಿಪ್ರಕರಭಲ್ಲಪ್ರ । ಕಾರಥೆನತರು ಪುಂಡರೀಕಾಧಿಷ್ಟಿತದಿಮೆರೆದು ॥ ಧೀರತನದಿಬರುತಿಹಸಮಯದಿ । ಮಾರ ಮರ್ದನಶರಣಪುಂಗವ । ವಾರವಡುವನದೊಳಗೆತತ್ಕೋಲಾಹಲವನರಿದು । ॥೯॥ ಅತಿಶಯೋನ್ನತಯುದ್ಧಕಾರ್ಯೋ । ದ್ಧತರುಮಾಗುತೆತಮ್ಮಮೇಲ್ಗ ಜಿ-ತದಿಬರುವುದಕಂಡುಕೋಸ್ರೋದ್ದೀಪಿತದಿಪ್ರಮಥ ॥ ವಿತತಿಯೊಳೆಭೂ ಧರಪಚೂರ್ಣೀ । ಕೃತವನೆಸಗಿದಜೆಟ್ಟದರಸನು । ಕ್ಷಿತಿಪನತಿಶಯಮುದಕ ರಿಯುವಿಪಳಿಸಿದಮಾಚವಿಭು ॥೧೦॥ ಗಿರಿತನೂಜಾಧವನನುತಿಸಿದ । ಶರಣ ಕಿನ್ನರಬೊಮ್ಮಿದೇವನು । ಹರನಕರುಳುಗಳಿಂದಲರ್ಚಿಸುವಯ್ಯಪ್ರಬ್ಬಿ ತನು ॥ ದುರುಳಬೌದ್ಧರಗರ್ವವನುಪರಿ । ಹರಿಸಿದಾವೇಮಾರ್ಯನುಂಮಿಗೆ। ಸ್ಮರಹರನಜಿಂಹೆಯೊಳುಯಜಿಸುವಸಂತನಾಗಮನೂ ॥೧೧॥ ಇಳೆಯಧೆ ಟ್ಟಸಿಹೊನ್ನ ತೋರಿದ। ಕಲಹಕೇತದಬೊಮ್ಮಿದೇವನು । ಮಲಹರನಪ್ರ ತಿನಿಧಿಯನಿಸುವಾಮಾದಿರಾಜಯ್ಯ॥ ನೆಲೆಯನಿಸಿದೇಳ್ನೂರಯಪ್ಪ। ತ್ತಲಘು ವಿಕ್ರಮಯುತರಮರಗಣ । ಕುಲವುಸದ್ವ್ರತಯುತವಿತತಿಯುಮಪಾರ ವಾಗಿರಲೂ ॥೧೨॥ ಸಾರನಿಷ್ಠರುಲಕ್ಷತೊಂಭ । ತ್ತಾರುಸಾವಿರಜಂಗಮ ರುಹದಿ । ನಾರುಸಾವಿರಮಿಂಡಜಂಗಮರುಗಳಸಂದೋಹ ॥ ವಾರಿಜಾಂಬ ಕನಯನವಾರಿಜ । ಚಾರುಚರಣಾಂಕಿತಶರಣಪರಿ । ವಾರಸಿಂಹವರಿಷ್ಠರತಿ ಶೌರ್ಯಾನ್ವಿತದಿವೈರಿ ॥೧೩॥ ಭೀತಪೇಹಗಳಿಂದೆಕಟಬ । ದ್ಧಾತತರುಹಸಿ ತಾನನರುರುಟ್ । ಸ್ಫೀತದಿಂಹಲ್ಲುಗಳಕಡಿವುತೆಹುಬ್ಬುಗಂಟಕ್ಕಿ ॥ ಹೇತಿ ಗಳಝಳಪಿಸುತೆಗೂಢ। ವ್ರಾತಗಳತೊಟ್ಟುರವಣಿಸಿಸಮು। ರಾತುರದಿವಿಾ ಶೆಗಳತೀಡುತ್ತುಬ್ಬಿಯಬ್ಬರಿಸಿ ॥೧೪॥ ವಿತತಬಾಹುಗಳಪ್ಪಳಿಸಿವಿ । ಶ್ರುತದಿ ನಭಕೆವಿಲಂಘಿಸುತೆಕಪು । ಧೃತಿನಿಯುತವೃತ್ತದಿಶರಧಿಯೋಲ್ಭೋರ್ಗರೆವು

ತಿರಲು ॥ ಅತಿಶಯಪರವಶಾಲಿಸುತೆಸಂ। ಚಿತಮಹಿಮಶ್ರೀಚೆನ್ನಬಸವಸು।
ಗತನುಮ್ಮೈತಂದಭವಭಕ್ತತತಿಯಚರಣಗಳಿಗೇ ॥೧೫॥ ವಂದಿಸುತ್ತಷ್ಟಾಂ
ಗದಿಂಕರ । ದ್ವಂದ್ವಗಳಜೋಡಿಸುತೆವಿನುತಿಸು । ತೋಂದುವಿಜ್ಞಾಪನೆ
ಯಿದನುಚಿತ್ತೈಸುವುದುತಾವೂ ॥ ಮಂದಮತಿಗಳಮೇಲಮರ್ಷವ।ಹೊಂ
ದಿಘನತರಶಾಂತಗುಣಮಂ । ಕುಂದಿಸುವರೇಶೈವಮಾಹಾತ್ಮ್ಯವನುಪ್ರಮಾ
ನಸದೀ ॥೧೬॥ ಅರಿಯದೇವರ್ತಿಸುವದುಷ್ಟ । ಚರಿತರವರೇನಳಿಸಿಪ್ರೋಷ
ರು । ಮುರುಳನಹಭಸ್ಮಾಸುರಂಶಶಿಖಂಡಮಂಡನನ ॥ ಹರಿಸಲಾತ್ಮದೊ
ಳೂಹಿಸುತೆತ । ನ್ನುರುಮದದಿಕೆಡದಿಹನೆಯುರಿಮುದ । ಕರಿಗಳಿಗೆಕೇಸರಿ
ಯವೈರಿಕುಜಕೆಪರಶುಶತ್ರು ॥೧೭॥ ವಿಸರಘನಕೆಪವನವ್ರುರಿಪುಶಿಖ। ರಿಸಮು
ದಯಪವಿನಿಮ್ಮಶ್ರೇಷ್ಠನೋ । ಲ್ಲಸಿತಭಕ್ತಿವಿರಾಗನಿಷ್ಠೆಗಳರಿಯಲದರಿಂದೆ ॥
ಅಸಮದುರಿತೋಪೇತರಾಗಿಹ । ವಸುಮತೀಶಾನ್ವಯಜನಿತರಿಹ । ದಿಶೆಗೆ
ಪೋಗದೆನಿಲ್ವುದಾಮೇಲವರಿಗಾಗುತಿಹಾ॥೧೮॥ ಫಲವನರಿಯಿರೆನಲ್ಕೆಸಮ್ಮ
ಡ । ದೊಲುಮೆಯಿಂವೈರಿಗಳಮೇಲವ । ರುಲಿಯದಡಿಯಿಡದಂತೆನಿಂದಾಕ್ಷ
ಣವೆದುಶ್ಶ್ರೇಷ್ಠ ॥ ಕುಲಿತದಲಿಸೈನ್ಯಾಂತರಾಳದೊ । ಳಲಘುನಿಬಿಡತಮಃ
ಪಟಲವದು।ಜಲಜಸಂಭವನನುಮತಿಯೊಳಾಕಾಶಧರೆಯಡಸೀ ॥೧೯॥ ಬೆಡ
ಗಿನಿಂದೊಗೆಯಲ್ಕೆಮಧ್ಯದೊ । ಳೆಡೆಬಿಡದೆತತ್ಸೇನೆವಿಸ್ಮಯ । ದೊಡನೆನಿ
ಶ್ಚೇಷ್ಟಿತವದಾಗುತ್ತನಿಂದಸಮಯದೊಳೂ ॥ ಜಡಧರಂಗಳುಪ್ರಳಯಕಾ
ಲದಿ । ಘುಡುಘುಡಿಪನಿಸ್ವನವಿಧದೊಳಿ । ಮ್ಮಡಿಸಿಮೇಣ್ಬ್ರಹ್ಮಾಂಡವೋ
ಡ್ಮಯದಾರ್ಭಟಸಿಮೇಲೆ ॥೨೦। ಬಂದುತಮ್ಮನುಸಂಹರಿಸುತಿಹ । ರೆಂದು
ತಿಳಿದವರೋರ್ವರೋರ್ವರ । ಕೊಂದುಕೂಗುಗಳಿಡುತೆಹಿಡಿಹೊಯ್ ಹಾ
ಯ್ಕೆರೆಂದೆನುತಾ ॥ ಮಂದತಮವಾಕ್ರಮಿಸಲತಿಭಯ । ದಿಂದೆಕಳವಳ
ಗೊಂಡುಘನಶರ । ಬೃಂದಖಡ್ಗದ್ವಾಯುಧಂಗ'ನುಗ್ರದಿಂದೆತ್ತಿ ॥ ೨೧ ॥
ಭೀಮವಿಗ್ರಹರಾಗುತಂಘನ । ತಾಮಸದಿಭಟಚಯವಹೊಡೆಯುತೆ। ಸಾ
ಮಜಪ್ರಕರವನುನುಗ್ಗಾಡಿಸುತಲಂತವನೂ ॥ ಭೂಮಿಯೊಳಗೊರಗಿಸುತೆ
ಚಕ್ರಿ । ಸ್ತೋಮವಂಚೂರ್ಣೀಕರಿಸುತು । ದ್ದಾಮಕೋದಂಡಪ್ರಕಾಂಡ
ವನಳಿವುತಂವರ್ಮ ॥೨೨॥ ಜಾತವಂಛೇದಿಸುತೆಸಬುಧವ । ಛಾತಪತ್ರಪ್ರಕ

ರಪುಂಭೂ । ವಿೂತಲದಿಬೀಳ್ವಂತೆಮಾಡಿದರನಿತರೊಳುದಿವ್ಯ ॥ ಕೇತನಗ
ಳುಧ್ವಂಡರುಚಿಯಿಂ । ದಾತತದಿಬರೆಪಿಡಿದವರುಭೂ । ಪಾತವಾಗಲುನಡಸ
ಲರಿಯದೆಯಳಲುತಿಹರಧಿಕ ॥೨೩॥ ರತುಲವುಕ್ತಾತಭತ್ರಧೀಧಿತಿ । ವಿತತಿ
ಯೊಳಗಿನಿತಿನಿತುಸೇಗುತೆ । ಹತಿಸಿಬೀಳಲವನುತೊಡರುಗೊಳುತಿರುವದಂ
ತಿಗಳೂ ॥ ವಿತತವಜ್ರನಖಪ್ರಕಾಶಾ । ಯತದೊಳಡಿಗಳನಿಡುತಲಂತವು ।
ಕುತಲದೊಳುಬೀಳಲ್ಕನಿಂದಿರುತಿರುವಹರಿಬೃಂದಂ ॥೨೪॥ ಝಳಪಿಸುವಕ
ರವಾಲತೇಜದಿ । ಸುಳಿವುತಿರ್ದವರದುತೊಲಗಲಾ । ಕಳವಳದಿದಿಕ್ಕುಗಳನ
ರಸುತಲಿರ್ಪಕಾಲಾಳೂ ॥ ಗಳುಘನತಮವುಪೆರ್ಚಲಾಕ್ಷಣ । ದೊಳಗೆಯೇ
ನರಿಯದಲೆಶೌರ್ಯಾ। ಕಲನದಿಂಸಾಂಪ್ರದದಿಯಾದವರಂತೆಹೊಡದಾಡಿ ॥೨೫॥
ಭ್ರಷ್ಟರೆನಿಸಿದಜಿನರಸಂತತಿ। ನಷ್ಟವಾದುದುನಿರವಶೇಷದಿ । ಅಷ್ಟರೊ
ಳಗಾಕ್ರಮಿಸಿರುವತಮವಳಿದುದಲ್ಲಿರುವ ॥ ಅಷ್ಟಮೂರ್ತಿಸಮಾಹಿತರು
ನು । ತ್ಕೃಷ್ಟರೋಷಸಮೇತರಾಗಿರೆ । ಶ್ರೇಷ್ಠನಹಚನಬಸವದೇವನವ
ರಚರಣಕೆರಗೀ ॥೨೬॥ ಮತ್ತೆನುಡಿದಂಸತ್ಪ್ರಮಥಗಣ । ಸತ್ತಮರುಗಳ
ಕೂಡೆನಿಮ್ಮಮ । ಹತ್ತರವನರಿಯುವಸಮರ್ಥರುಮರ್ತ್ಯದೊಳಗುಂಟೇ ॥
ಸತ್ತುಬಿದ್ದಿಹರೆಲ್ಲರಿಪುಗಳು । ಮತ್ತರಾಗುತೆಮರುಳರಂದದಿ । ಹತ್ತಿರಕೆಬ
ರೆಶಕ್ತಿಯಿಹುದೇಯಧಮಮನುಜರಿಗೆ ॥೨೭॥ ಆವಕಾಲಕೆವಿಜಯವೆಂಬೀ
ಭಾವವದುಜ್ಜೈನರನಿಬಿಡದು । ಭಾರ್ಗವದೊಳಗಿರೆಶರಧಿಈಸುವತೆರದಿಪ್ರಜ್ವಲಿ
ಪಾ ॥ ಪಾವಕಜ್ವಾಲೆಗಳಕರರಾ । ಜೀವದೊಳುಪಿಡಿಯುತಿಹಪ್ರವಹಿಪ ।
ಜೀವನೋದ್ಧತನದಿಯನೇಕರದೊಳುಪಿಡಿವರಿಂಗೇ ॥೨೮॥ ಉಳಿಯಲಾರ್ಪ
ರೆವೆನುತೆಸನ್ನುತಿ । ಗಳನುಮಾಡುತೆಹರುಷದಿಂದವ । ರ್ಗಳುಸಹಿತತಾನಾ
ದಿವಸವಲ್ಲಿರ್ದುಉದಯದೊಳಾ ॥ ಸ್ಥಳವಬಿಟ್ಟುಸುವರ್ಣಮಣಿಸಂ । ಕುಲ
ಘಟಿತವರದಿವ್ಯಸೌಧಂ । ಗಳಿಗೆಸಂಭ್ರಮದಿಂದೆಬಂದರುಸಕಲರೊಡಗೂ
ಡೀ ॥ ೨೯ ॥

ಅಂತು ಸಂದಿ ೩೪ಕ್ಕಂ ಪದ ೨೧೦೩ಕ್ಕಂ ಮಂಗಳಮಸ್ತು



# ಮೂವತ್ತ್ತೈದನೆಯ ಸಂಧಿ.

## ವೀರಭದ್ರರಾಜಂಗೆ ಧರ್ಮೋಪದೇಶವು.

ಸೂ॥ ವೀರಭದ್ರನೃಪತಿಯುಪುರಜನ । ವಾರಮುಂ ಶ್ರೀಚೆನ್ನಬಸವನ । ಮೇರೆಯಿಂ ಕರತಪುತೆತಾಂ ಸತ್ಪಥವ ಬೆಸಗೊಂಡ ॥

ಪದ॥ ನಿರುಪಮಾನನೆನಿಪ್ಪ ಉಳುವೆಯ । ಪುರಕೆ ತೆರಳ್ವರೆ ತದ್ಧರಾಧಿಪ । ಚರರವಮುಖದಿಂ ಕೇಳಿಭೇರಿಮುಖಾದಿ ರಾವಗಳೂ ॥ ಉರುತರದಿ ಘೋಷಿಸುತಿರಲು ಪ್ರಿಯ । ತರಸುಬಾಂಧವರಾಪ್ತಸೇನಾ । ಪರಿಜನೋತ್ಕರದೊಪ್ಪೆಯುವರ್ಗಳಿಗೆದುರುನಡೆತಂದೂ ॥೧॥ ದೂರದೊಳೆ ಶಿವಶರಣವಿತತಿಯ । ನಾರಯಿದುದಂತಿಯನಿಳಿದು ಪದ । ಚಾರಿಯಾಗುತೆ ತವಕದಿಂ ನಡೆತಂದು ಭೂತಲವದು ॥ ಧಾರುಣೀದೇಶವನು ಸೋಂಕಲು । ಚಾರುದೇಹವನಿಕ್ಕಿ ತಚ್ಛಣ । ವಾರಪದಗಳಿಗೆರಗಲನಿತರೊಳೆ ತ್ರಿಗುಣಾಢ್ಯನಹ ॥೨॥ ಚೆನ್ನಬಸವಪ್ರಭುವರನು ಪ್ರಮು । ದೋನ್ನತದೊಳಾ ನೃಪತಿಹಸ್ತಗಳನ್ನು ಪಿಡಿವುತೆ ತೆಗೆದು ಬಿಗಿಡಪ್ಪುತ್ತೆ ಗೌರವದಿಂ ॥ ನನ್ನ ತನೆ ನೃಪಶೇಖರ ನೆಭ । ಕ್ಕೊನ್ನತನು ನೀನೆಂಬುದನುನಾಂ । ಮುನ್ನ ಕೇಳಿರ್ಪೆನು ಸುಭವ್ಯಚರಿತ್ರ ನೀ ಸಮ್ಯು ॥೩॥ ವಲ್ಲಿ ಪ್ರತ್ಯಕ್ಷದೊಳು ಕಂಡೆನು । ಪಲ್ಲವಿಸಿತ್ತೈ ಚಿತ್ತವೃತ್ತಿ ಮ । ಹೋಲ್ಲಸನವಾವಪಿಸಿತೆಂಬುವ ವಚನವಂ ಕೇಳಿ ॥ ಬಲ್ಲಿದನೆನಿಪ ನೃಪನು ನಿಜಕರ । ಪಲ್ಲವಗಳಂ ಜೋಡಿಸುತೆ ಭವ ವಲ್ಲಭನು ಕರಿಗೊಂಡ ಭಕ್ತಿವಿವಶದಿ ತಾನಿಂತು ॥೪॥ ಎನ್ನನತಿಸಾತ್ವಿಕಗುಣೋತ್ತಮ । ನೆನ್ನಲಿದು ಸಲ್ಲುವುದೆ ಚಿತ್ಸಂ । ಪನ್ನ ಶರಣವರೇಣ್ಯಧೀವರ ಚೆನ್ನಬಸವಣ್ಣ ॥ ಎನ್ನು ತಾ ಮಹಿಮಾಢ್ಯನೊಳು ತಾಂ । ಬಿನ್ನವಿಸಿ ಮಗುಳೆಂದ ಗುಣಸಂ । ಪನ್ನನೆನಿಸಿದ ವೀರಭದ್ರನೃಪಾಲನತಿಭರದಿ ॥೫॥ ಸೋಮಗೆ ಚಕೋರಕಪತತ್ರಿನ । ಭೋಮಣಿಗೆ ವರಚಕ್ರವಾಕುವು । ಶೇಮುಖಿಯು ಬರ್ಹಿಮುಖ ಘನಾಘನ ಪಟಲ ಕಾಣಿಸುವ ॥ ನೇಮದಿಂ ಭವದಂಘ್ರಿದರ್ಶನ । ವೀಮನವಿಬಯಸುತ್ತಲಿರ್ದೆನು । ಸ್ವಾಮಿ ತವ ಮಾರ್ಗವನವೆನಗತಿಸಫಲವೆನಿಸಿಹುದು ॥೬॥ ಭೂಮಿಯೊಳು ದಾರಿದ್ರ್ಯನೆಡಹುತೆ । ಕಾಮಿತವಕಂ

ಪಂತೆಭವದೀ । ಯಾವುಲಾಂಘ್ರಿಕುಶೇಶಯಂಗಳನನುನಯದಿಕಂಡೆ ॥
ಸೋಮಶೇಖರಸೆಮಯವ್ವಾರಿಧಿ । ಸೋಮಪಾವನಸಾಮಪ್ರಮಥಲ । ಲಾ
ಮಭಕ್ತಿವಿರಾಮಶಿವಗಣಪ್ರೇಮಸೀಕಾಮ ॥೭॥ ಇಂದಿಗೆನ್ನ ಜ್ಞಾನಪಟಲವು
ಬೆಂಡುಪೋಗಿಯವೋಘಸುಗತಿಯ । ಹೊಂದಿಘನಸುಕೃತಾತ್ಮನಾದೆನು
ತಂದೆಶ್ರಿತಭಕ್ತ ॥ ಬೃಂದಬಂಧುವೆಮ್ಮವನಕ್ಕೆ । ತಂದು ಎನ್ನಭಿಮತ
ನವಕ್ಕೆಸಾ । ರ್ವಂದದಿಂದಯೆಗೈವ್ರುದೆಂದಾತನುಸತ್ಪ್ರಮಥ ॥ ೮ ॥ ಸಂ
ತತಿಯನೊಡಬಡಿಸುತಿರಲ । ತ್ಯಂತಪ್ರಮುದಿತಮಾನಸದಿಪೌರಾಂತರದ
ಜನರುಗಳುವಿಸ್ಮಯಮಾನಸಿಕರಾಗೀ ॥ ನಿಂತುನೋಡುತಿರಲ್ಕೆಕರದೊ ।
ಯ್ಪಂತುಸುರುಚಿರಮಣಿಗೃಹೋಪರಿ । ಯಂತರಾಳದೊಳವರುಗಳನು
ಮಪಾರಸದ್ಭಕ್ತಿ ॥ ೯ ॥ ಯುತದಿಶ್ರದ್ಧಾಸೇವೆಗಳಮಾ । ಡುತಮುದ
ದೊಳಾರೋಗಣೆಯನೂ । ರ್ಜಿತದಿಮಾಡಿಸೆಬಳಿಕಲವರೊಂದಿವಸದೊಳು
ನೆರೆದು ॥ ಶತಧೃತಿಕ್ಷತ್ತಾನುಭವಸಂ । ಯುತರುಮಾಗಿರುತಿರ್ಪಸಮಯ
ದೊ । ಳತಿವಿನಯದಿಂವೀರಭದ್ರನೃಪತಿಯುಶ್ರೀಚನ್ನ ॥೧೦॥ ಬಸವರಾ
ಜನನೋಡುತಂಕರ । ಬಿಸಜಯುಗ್ಮವಜೋಡಿಸುತೆಪ್ರಾರ್ಥಿಸುತೆಬಿನ್ನೈಸಿ
ದನುಎಮ್ಮಮನೀಸಮಸ್ತರನೂ ॥ ಸಸಿನೆಯಿಂಪಾವನನಗೈಯ್ಯುವ । ಬೆ
ಸನದಿಂಹರಿಭೂಷನಂಶದೊ। ಳಿಸಮಭಕ್ತಿಹಿತಾರ್ಪಶಕ್ತಿಯೆನುತೆಪೆಸರ್ವಡೆ
ದಾ ॥೧೧॥ ದೇವಿಯುಕ್ಕಾನಾಗಮಾಂಬೆಯ । ಪಾವನೋದರವಪುವೆನಿಜಗೃ
ಹ । ಭಾವವಾಗಲುದ್ವಾದಶಾಬ್ದಗಳಿರ್ಪನೆವವಿಡಿದು॥ ಭೂವರನಸುಸಭಾಂ
ತರದಿಜನ । ನೀವಿಮಲತರಕರ್ಣದ್ವಾರದಿ । ತೀವಿಜನಿಸಿಖಲಾತ್ಮರಹಜಿ
ನಬೌದ್ಧರಂಜಯಿಸೀ ॥೧೨॥
ಹರಸಮಯವಂಪ್ರಬಲಿಸಿದಗುರು। ವರನೆನಿಮ್ಮಯಕೀರ್ತಿಯುಪೊಗಳೆ । ಸ
ರಸಿರುಹಸಂಭವಫಣಿಪ್ರವರಾದಿಗಳಿಗಳವೇ ॥ ನರರುಗಳಿಗಿನ್ನೆಂತಹುದು
ಚರ । ವರಸಮಾಶ್ರಿತಕಲ್ಪವೃಕ್ಷಸು । ಕರಜನಿತಕರುಣಾಕಟಾಕ್ಷನಿರೀ
ಕ್ಷಶಿವಸಕ್ಷ ॥೧೩॥ ಶುದ್ಧಮೂರ್ತಿಸುಹೃಜ್ಜನಾವನ । ಬುದ್ಧಘನನಿರುಪಾಧಿ
ಚಿತ್ಸಂ । ಸಿದ್ಧನೆನುತಂವಿನುತಿಸುವಭೂವಲ್ಲಭನಕೂರ್ತು। ಶ್ರದ್ಧೆಯನು
ಡಿಗಳಿಂದಸಾಧ್ಯಸು । ಸಾಧ್ಯರುಗಳಿಂತಪ್ಪುಜಗದಾ । ರಾಧ್ಯರಂನುತಿಸಲ್ಕೆ

ಸಾಧ್ಯಮದಲ್ಲಿ ವರಚರಣಾ ||೧೪|| ದಂತೆವಾಸಿಯನಿಪ್ಪವೆನ್ನುವ | ನೆಂತು ಪೊಗಳುವೆನೀರಭದ್ರಾ | ನಂತೆಯುರಸನೆಕಮಲಬಾಂಧವನಿಂಗೆಣೆಯೆಪಿಂಚು || ವಂತಹಪುಳುವುಸುರಕುಜಕೆಸವು | ವೆಂತುಬೊಬ್ಬಿಲಿಮರನುನಿರ್ಜರ | ಸಂತತಿಗೆವಿಹರಣವೆನಿಪಚಾಮಿಾಕರಮಹೀಧ್ರಕ್ಕೆ || ೧೫ || ಸರಿಯೆಕ್ಕರಿಬೆಟ್ಟವದುವರಕೇ | ಸರಿಗೆಶಶವುಸುರಾಪಗಾಪ್ರಲ | ಹುಗೆಶಾಲ್ಯಕ್ಷೇತ್ರಕುಲ್ಯವುಕಾದ್ರವೇಯಾಧೀ || ಶ್ವರಗೆಜಲಗವುವೈನತೇಯುಗೆ | ಕಿರಿಯುಗೀಜಗವಕ್ಕಿರತ್ನಕೆ | ಸರಿಯೆಕಾಜಿನಮಣಿಮರಾಳಕೆಬಕವುಸಮವಹುದೆ || ೧೬|| ನಿರುಪಮಾನವೆನಿಪ್ಪಶಾಂಭವ | ಶರಣಕುಂಜರವಿತತಿಗಾಂಸರಿ|ಬರುವುದೆಂತುನ್ನಪಾಲಮಣಿಸುಖಸರಣಿಯಿವರುಗಳಾ || ಪರಮಚರಿತೆಗಳೆಂತ್ತೆನಲುನಾ | ನೊರವೆಕೇಳ್ವುದುಸಾವಧಾನದಿ | ಚರವರೇಣ್ಯರುಗಳೊಳಗತುಳವಿಸಿಪ್ಪನೆನಲೆಸೆವ ||೧೭|| ಭಾವಭವಮದಹರಣಭಕ್ತಿಯ | ಜೀವವೆನಿಸುತೆಪರಸಮಯವನ| ದಾವನಾಗುತ್ತೆಸೆವಬೆಟ್ಟದದೇವರಸರಿವರ || ಶ್ರೀವಹಿತಮಹಿಮಾತಿಶಯವಂ | ಸಾವಧಾನದಿಕೇಳುಪೇಳುವೆ | ಭೂವಲಯದೊಳುಸರ್ವರರಿಯಲ್ಕೊಂದುವಾಸರದೀ | ೧೮ || ಭೂಪಬಿಜ್ಜಲನೋಲಗದೊಳುನಿ | ರೂಪಿಸಿದನಾಬಸವಕುಲಗುರು | ದೀಪನಂನೋಡುತ್ತೆಕಟಕದಿನಿಮ್ಮಶರಣರುಗ || ಳೇಪರಮಮಹಿಮಾಧ್ರರಧಿಕಪ್ರ | ತಾಪಯುಕ್ತರೆನುತ್ತೆಪೇಳ್ವುದು | ಕಾಪಥವದೆನಿಸುವುದುಇಂತಹಬೂಟಕಂಗಳನು ||೧೯|| ಮೇಲರಿಯದಲೆಪೇಳುತಿರ್ಪುದು | ಶೀಲವಾದುದುನಿನಗವರನಿಜ | ಖೇಲನೋಪ್ಪಿಖ್ಯಾತಿಯೆಂಬುವದೆಂತುಜಗದೊಳಗಾ || ಭೀಲವಿಕ್ರಮನಿಯುತರುಂಯುಗ| ಜಾಲದೊಳುಮೆರೆದಿರುವಧರಣೀ | ಪಾಲಕೌಘವನಂತವಿರುತಿಶಲರಿವುತಂನೀನು ||೨೦|| ಈವಿಧದಿನುಡಿಯುವುದುಸಲ್ಲದು | ತೀವಿದವರಪರಾಕ್ರಮಪನತಿ | ಸಾವಧಾನದಿಕೇಳ್ವುದಿದಮಾತ್ಯಾಗ್ರಣಿಯೆನೀನೂ || ಭೂವಲಯದಧಿಪತಿಗಳಹದು | ರ್ಭಾವಿಕರನೇಳ್ಬಾರಿಕೊಲ್ಲುತೆ | ಧೀವರಿಷ್ಟಂಕಶ್ಯಪಂಗಿಳೆಯಿತ್ತೆನಾಪರಶು ||೨೧|| ರಾಮಪಾರ್ಥಿವರಾಮಚಂದ್ರನಿ | ರಾಮದಿಂಜಲನಿಧಿಯಬಂಧಿಸಿ | ತಾಮಸಾತ್ಮಕರಸ್ಪದಶಗಳಮುಖದಹರಿಸಿದನೂ||ಸೋಮಧರನಂಮೆಚ್ಚಿಸಿದನು | ತ್ರಾಮಸೂನುವುವಿಕ್ರಮದೊಳೀ | ಭೂಮಿ

ಬೊಳುವಿಖ್ಯಾತಿಯಾಂಪಡೆದಂಭಗೀರಥನು ‖ ೨೨ ‖ ಅರಿಗಳಂಭೇದಿಸುತೆ ಸಾಸದಿ । ಹರಿಯಹರಿವಿಷ್ಟರದಿಕುಳಿತನು । ಉರುತರದಿವಿಕ್ರಮನೃಪನು ಮೊದಲೆನಿಸುವಿವರುಗಳಾ ‖ ನೊರೆದೆನಿನ್ನುಮಹಾಪ್ರತಾಪೋ । ದ್ಗರಿಮೆ ಯಂಮೆರೆದಿರುವವಿಶ್ವಂ । ಭರಭುಜರುಪ್ರತ್ಯಕ್ಷದಿಂದಿರ್ವವರನೀನರಿವೇ ‖೨೩‖ ಇಂದುನಿಮ್ಮವರಿರಲುತೋರ್ಕೈ । ಎಂದುಪಾಲಂಬದಿನುಡಿಯಲಾ । ನಂದದಿಂಬಸವಾಧಿಪನುನೃಪವರನೆನಿನಗೆಂದಿ ‖ ನಿಂದೆನಿನ್ನಮನಸ್ಸಿನೊಳಗಿದ । ರಂದವರಿಯುವನೆನಹುನಿಶ್ಚಯ । ದಿಂದೆಪುಟ್ಟಹುದೊಳಿತುಮವರ್ಗಳ ವಿಧವನರುಪುವೆನು ‖೨೪‖ ಜನನಿಯುಂಕೋಂದವನುತನ್ನಯ । ವನಿತೆಯುಂ ಕಳಕೊಂಡವನುನಿಜ । ಜನಹರಣರಿವರಸ್ಥಿರದಭಾಗ್ಯಾನುಭೋಗಿಗಳೂ ‖ ವಿನುತಿಸುವೆನೀನತುಲವಿಕ್ರಮ । ವನಧಿಗಳಮಾಹಾತ್ಮ್ಯವರಿದರಿ । ದೆನು ತೆಜಂಗಮನುಪ್ರತಾಪಾತಿಶಯುವನುಸಚಿವ ‖೨೫‖ ವರನೊರೆದನಾಕಾರರೇಖದಿ । ಮೆರೆವಹಾದರಬೊಮ್ಮಿದೇವನು । ಸ್ಥಿರಕಳಾವಿಸ್ಫೂರ್ತಿಸಂಡಿತಶೇಖರನುಬಳಿಕ ‖ ಗುರುಪರಮಭಕ್ತಿಯೊಳುಬಿಲ್ಲಮ । ಧರಣಿಪನುಗಾಯನದೊಳತಿಸುಂ । ದರನೊಡೆಯನಂಬೆಣ್ಣಗಳುವಿಸ್ತಾರಶೌರ್ಯದೊಳೂ ‖೨೬‖ ತುಂಗಚಾರಮಭೂಮಿಪಾಲಕ । ನಂಗಲಿಂಗಜ್ಞಾನಿಯನಿಮಿಷ । ಸುಂಗ ಣ್ಯೈಕಪಟುತ್ವಸಂಪತ್ಪ್ರಾಪ್ತನಾಂಡಾರಿ ‖ ಮಂಗಳಾಭ್ಯುದಯದೊಳುಬಲ್ಲಾ । ಳಂಗಣಾಢ್ಯವಿತಾನದೊಳಗೆಪ್ಪ । ರೇಂಗಿತಜ್ಞನುಮೆನಲುಪ್ರಸ್ತುತಿಯೋಗ್ಯರಾಗಿಹರೂ ‖೨೭‖

ಅಂತು ಸಂಧಿ ೩೬ಕ್ಕಂ ಪದ ೨೧೩೬ಕ್ಕಂ ಮಂಗಳಮಸ್ತು

---

## ಮೂವತ್ತಾರನೆಯ ಸಂಧಿ.

## ವೀರಸಂಗಯ್ಯನವರ ಕಥೆ.

ಸೂ ‖ ಧರಣಿಪತಿಭಾಸ್ಕರನಮದುವೆಯೊ । ಳಿರುವವರನೊಡಗೊಂಡು ರಾಜಿತ । ಗಿರಿಯಸಾರ್ದಂವೀರಸಂಗಮಗುರುನಿವಹತಿಲಕಂ ‖

ಪದ॥ ಧರೆಯೊಳಗೆಜಂಗಮವಿತತಿಸ । ಚ್ಚರಣಸರಸಿಜಚಂಚರೀಕನು
ಹರಸಮಾಹಿತನನುಪಮನು ಶ್ರೀವೀರಸಂಗಯ್ಯ ॥ ಇರೆಪಿತೃವ್ಯನುತದ್ವ
ಯೋವಿ । ಸ್ಫುರಣಸುಷುಮಾಕೃತಿಯನುರೆಕಂ । ಡುರೆಪ್ರಿಯಾನ್ವಿತನಾ
ಗಿಸುಕುಮಾರಂಗೆಮದುವೆಯನೂ ॥೧॥ ಮಾಡಬೇಕೆಂಬುವುದುಮನದೋ
ಳ್ಮೂಡಿಕನ್ಯಾಲೋಕನಾರ್ಥಂ । ಕೂಡಿಧೌಧಜನಬಂಧುಪರಿಚಾರಕರೊಡನೆ
ಬಂದೂ ॥ ತೀಡಿರುವಸಂತಪದೊಳಗೆತಾ । ವ್ರೀಡಿದರುಮಣಿಹೇಮಮ
ಯಸಂ । ಕ್ರೀಡಿತೋನ್ನತಗೋಪುರಾಂಚಿತಚಿತ್ರಪಟಪ್ರಕಟ ॥೨॥ ಕೇ
ಸರಿಧ್ವಜವಿಜಯಪದ್ಮಾ। ವಾಸವೈಭವದಿಂದನಿರತವಿ। ಭಾಸಿತೋಂಕಾರಾ
ಖ್ಯಪುರಕ್ಕೈತಂದುಬಂಧುಗಳಾ॥ಶ್ರೀಸಮಂಚಿತದಧಿಕಪುಣ್ಯಾವಿ। ಕಾಸವಿಶ್ರುತ
ವೆನಿಪಗೃಹಮಂ । ಲೇಸಿನಿಂಸೇರಲ್ಕೆಸ್ಮೇರಾಂಕುರಮುಖಾಂಬುಜದೀ॥೩॥
ಮುದದಿಕಾಣುತ್ತಪ್ಪುತಂಪೀ । ಠದೊಳುಕುಳ್ಳಿರಿಸುತ್ತೆಸಂಪಿ । ತ್ಪದವಿಬು
ಬುಧರುಗಳೊಡನೆತತ್ಸಮಯೋಚಿತವಚನಮಂ ॥ ಪದುಳದಿಂದಾಡುತ್ತೆಪರಿ
ಣಾ। ಮದೊಡನಾರೋಗಣೆಯಮಾಡಿಸು। ತಡುವೆತೀರಿದಬಳಿಕಸದ್ಗೋಷ್ಟಿ
ಪ್ರಸಕ್ತಿಯೊಳು ॥೪॥ ಪರವಶರುಮಾಗಿರ್ದುಮಗುಳೆ । ಚ್ಚರಗೊಳುತೆತಾ
ವ್ಯೆತರಲುಭಭ । ಕರವದಾಯಿತ್ತೆಮಗೆನಲುಗುರುಭಕ್ತನಿಂತೆಂದ॥ ಹರಚರ
ಣರೊರೆದಿರುವ್ರುದಪುನಿ । ರ್ಧರವಹುದುಮಂಗಳವೆನುತೆನಗು । ತಿರುವೋಗ
ನಕಂಡುಬಯುಚಿಪಲೇಕೆನೀಬಂದ ॥೫॥ ಬಳಕೆಯೇನೋಇತರಭಾಷಣ ।
ಗಳನುನಿಲ್ಲಿಹಿಪೇಳೆನಲುನಿ । ಮ್ಮಳಿಯನಾಗಿಹವೀರಸಂಗಯ್ಯಂಗೆವಿಮ್ಮ
ಸೂಶೆ ॥ ಯಳಹಚಂದ್ರಿಣಿದೇವಿಲಗ್ನದ । ಫಲಿಗೆರುಂನಿರ್ಧರಿಸುವುದುಹ್ಯ ।
ನ್ನಳಿನದೊಳಗಿರುತಿಹುದುಬಹುಶೀಘ್ರವೆನಲೀವಿಧವಂ ॥೬॥ ನಿಮ್ಮೊಡನೆತಿ
ಳುಪಲ್ಕೆಬಂದಿಹೆ । ನೆಮ್ಮಲಾತನುಕಡುಹರುಷದಿಂ । ತಮ್ಮನುಜ್ಞೆಯ
ಮಾರುವೆನೆಸ್ವಾತಂತ್ರ್ಯಪುಗಳಾಗಿ ॥ ಗಮ್ಮನೇಕಲ್ಪಿಸಿದಕಾರ್ಯವ । ಸು
ಮ್ಮದದೊಳೊಪ್ಪಿರುವರೆಲ್ಲರು । ನೆಮ್ಮಿಮಾಳ್ಪವಕರ್ತೃಗಳುತಾವ್ಯೆಸೆಯಿ
ತ್ತುತ್ತ ॥ ೭ ॥ ಭಾರವಾಹಕರಾದಬಳಿಕವಿ । ಚಾರವೇನಿರ್ಪುವುದೆನಲುಸ।
ದ್ವಾರಪೂರಸಭಾಂತರದೊಳಿರುತಿರ್ದವರುಪ್ರಮುದಾ ॥ ವಾರಿನಿಧಿಯೊ
ಗಾಳ್ದುಭಾಪುರೆ । ಭೂರಮಣರುಗಳೆನಿಸಿಮೆರೆವರು । ಸಾರವನನಿಧಿಮೇಖ

ಲಾವಲಯಾಂತರದೊಳಿರುವ ||೮|| ಮನುಜರೊಳುಬಾಂಧವ್ಯಭಾವನೆ । ಯ
ನೆಪರಿಕ್ಷಿಸಲಿವರಸರಿಯುವ । ರನುತಿಳಿಯೆಸಾವ್ಯಾಕಣೆವೆಂದತಿಶಯದಿಪೊಗಳು
ತಿರೇ || ಅನುಪಮಾನಾನಂದವಿಸ್ಮಯ । ದನುವ್ರಪೇರ್ಜುತ್ತಿರಲುನಿರ್ಣಯ ।
ವನುಕರಿಸುತಿಹಕನ್ಯಕಾಮಣಿಯುಳನುಮಿಗೆಕರದೂ ||೯|| ತಂದುಕಾಂಚ
ನಮಣಿಪ್ರಪೀಠವಿ । ತಂದೆಕುಡುರಿಸಲರಸೆವಿಬುಧರು । ಅಂದುತಾರಾಬಲವಿ
ಚಾರವಮಾಡುತಂಶ್ರೇಷ್ಠ || ವೆಂದಿನಿಪಲಗ್ನವನುನಿಶ್ಚಯ । ದಿಂದೆಮಾಡು
ತ್ತಪರನಂತರ । ವಂದದಂತಃಪುರಕೆಬಿಜಯಂಗೈಸುತಖಿಳರನೂ ||೧೦|| ಅ
ತುಲಸಂತಸದಿಂದೆಯುಂಶುಕ । ವಿತತಿಯಂಭೂಷಿಸುತೆಬೀಗರ್ಗೆ । ಹಿತದಿಕಳು
ಹಲ್ಕವರುಮುದದಿಂಬಂಡುಸಜನಸಂ || ತತಿಯೊಡನೆಮುದವೆರಸಿಸಾಂಪ್ರದ
ಕೃತವೆನಿಸಿವ್ವೈವಾಹಯೋಗ್ಯಾಂ । ಚಿತಸುಸಂಭಾರಗಳನೆರವುತೆಬಾಂಧವರು
ಗಳಿಗೇ ||೧೧|| ಶುಭವಿಲೇಖನಗಳನುಕಳುಹುತೆ । ಅಭವನಂಶಕರುಗಳುಘನ
ತರ । ವಿಭವದಿಂದಾವೀರಸಂಗಮನುತ್ಸವದೊಳಿರಲೂ || ಸ್ವಭುಜಭೂಭಾ
ರಾವಹಾಳಿಯು । ವಿಭುವೆನಿಸಿದೋಂಕಾರಪಟ್ಟಣ । ಪ್ರಭುವೆನಿಪಭಾಸ್ಕರನೃ
ಪಾಲಕನೊಂದುದಿವಸದೊಳೂ ||೧೨||

ಮುದದಿವ್ಯೈಹಾಳಿಯುಪ್ಪೊರಟಸವು । ಯದೊಳುಸೌಂದರ್ಯಾತಿಶಯ
ರೂ । ಪದೊಳೆಕ್ರೀಡಿಸುತಿರುವಚಂದ್ರಿಣಿದೇವಿಯಂಕಂಡೂ || ಹೃದಯ
ದೊಳುತತ್ಸುಂದರಕೆಸೋತು । ಕದಿಮುದನವ್ಯೈಕಾರಪೂರಿತ । ಪದದಿತನ್ನೊ
ಳಗಮರಗರುಡೋರಗಸುರಾದಿಸ್ತ್ರೀ || ೧೩ || ಗಳನುಪ್ರಕಟಸಲರಿದಿರುವೆ
ನೀ । ಇಳೆಯೊಳತಿಸುಂದರಿಯರುಂಕಂ । ಗೊಳಿಸುವರುಮತ್ತೀಲತಾನಿಭ
ಗಾತ್ರಗೆಣೆಯಪ್ಪ || ಅಳಿಚಿಕುರೆಯಂಕಂಡುದಿಲ್ಲವು । ನಳಿನಶರನುದ್ರೇಕ
ದಿಂನಾ । ನುಳಿವುದಂನೆರೆಕಾಣೆಪರಿಣಯವಾಗದಿರಲಿವಳಾ || ೧೪ || ಶೈವ
ಲಾಂಡಜವಿದ್ಯಮಾಬ್ಜಧ । ರಾವಲಯಧರಭಂಗಚಕ್ರು । ಶ್ರಾವಪುಲಿನಕಮ
ಠಕಬರಿಲೋಚನವಧರಮುಹಿತ || ಗ್ರೀವಕುಚವಳಿರೋಮರಾಜಿಶು । ಭಾವ
ಹಾಂಚಿತಜಘನಚರಣಸ । ಮಾವಹಿತವೆನಲೊಪ್ಪುವೀಕೆಯುಸುಂದರಾಂ
ಬುನಿಧಿ ||೧೫|| ಯುವತಿಭ್ರೂಯುಗ್ಮವನುನೋಡದೆ । ಸವಿವಕಬ್ಬಿನಬಿಲ್ಲ
ಕೊಂಡನು । ಕುವಲಯಾಂಬಕಿವೇಣಿಯಂಪರಿಕಿಸದೆಯಳಿಗುಣವ || ಸವರಿ
ಸಿದನೀತರುಣಿನೋಟಪ । ವಿವರವರಿಯದೆಭೂಪತನವಾ । ಗುವಪ್ರಸವ

ಬಾಣಗಳಕೈಕೊಂಡನುಸುದತಿಮಣಿಯಾ ||೧೬|| ಚೆಲುವೆಸೆವಜಂಘೆಗಳನ
ರಿಯದೆ । ಇಳೆಹಿಡಿದುನೆನವುತಿಹಕೇತುವ । ಬಳಕೆಗೊಂಡನದೇತಕಖಿಲಜ
ಗತ್ತಿನೊಳುದ್ರವ್ಯಂ || ಗಳಗುಣವನರಿದಿರುವವಮಾಧವ । ನೊಳುಜನಿಸಿಫ
ಲವೇನುಮುರುಳಾ । ಗುಳಿಸಕಾರಣದಿಂದೆಕಾಮನುಮುಡಿದೆಣೆವನಿಂದೇ ||
||೧೭|| ಹೇಮಗಾತ್ರಿಯವೇಣಿಯೊಪ್ಪಿಸೆ ಭ್ರಾಮಕವುಸಂಜನಿತಮಾದುಪು।
ಕಾಮಿನಿಯವದನವನುನೋಡುತೆಧೈರ್ಯಗೆಟ್ಟಹೆನೂ || ಕೋಮಲಾಂಗಿಯ
ಪ್ರಜ್ವಲಿಪದ್ಯ । ಕ್ಷ್ಮೀಮೆಯಂಕಂಡೆನ್ನಮಾನಸ । ತಾಮರಸವದುಚಲನವಾ
ಡುದುತರುಣಿಜಘನವನೂ ||೧೮|| ನೋಡಿದಾಗಳೆಎನ್ನಬುದ್ಧಿಯು । ನಾಡೆ
ಸ್ತಬ್ಧವೆನಿಸಿತುಮೋಹವು । ಮೂಡಿರುವವೈಚಿತ್ರ್ಯದವಯವಗಳಿಗೆಸಮ
ವಾಗ || ದೋಡಿವಾರ್ಧಿಕವೇಘವುಂಶಶಿ । ಗೂಡೆಚಂಚಲಸೈಕತಂಗಳ ।
ಕೇಡುಗಳನಾನರಿದುಸೈರಿಸಲೆಂತೆನುತನೃಪನೂ||೧೯|| ಏಕಸನ್ನಿಧಿಫಾಲದ್ವಿ
ಪಗವು । ನಾಕಲಿತೆತ್ರಿವಳಿಚತುರಾಸ್ಯಪು । ಭ್ರೈಕಪಂಚಮನಾದೆಷಟ್ಪದ
ಕುಂತಲೆಯುಸಪ್ತ || ಶ್ರೀಕಲಿತಪದಗಳನುತುಳಿಯಲು । ಕೋಕಕುಚೆ
ಯೊಡಗೂಡಿಕ್ರೀಡಿಪ । ಪ್ರಾಕಟಿತಸಂಭ್ರಮದೊಳಾನೆಂದಿರುವೆನೋಎನು
ತೇ ||೨೦|| ಸ್ಫುರಿತಸರಸಿಜವಮುಖಿಯುಗಮನಸು । ಗರಿಮೆಯುದುಮತ್ತೇ
ಭವರಸುಂ । ದರನಿತಂಬವೆಸೃಥ್ವಿಯೊಕ್ಷಣರಾಜಿಯುತ್ಪಲವು || ತರುಣಿ
ಯಳನಾಸಿಕವುಚಂಪಕ । ಸುರುಚಿರಸುಶಷ್ಕುಲಿಶ್ರವಣೆಯಾ । ನಿರುಪ
ಮಾಂಗಸುಗಂಧಿಮಾನಿನಿಚರಣಸರಸಿಜವೂ ||೨೧|| ರಮಣಿಯಾಮಧುರತರ
ನಾದ । ಕ್ರಮವಡೆಣಿಸಲುಮತ್ತಕೋಕಿಲ । ಸಮಧನುಭ್ರೂನೀಲಕಚವದು
ಕಂಡವೆನಲಕ್ಕು|| ಪ್ರಮುದೆಯಾಶೋಭಾತಿಶಯುವದು। ವಿಮಲವಿದ್ಯುನ್ಮಾಲೆ
ಯಪ್ಪುದು । ಸುಮತಿಯುಳಸದ್ರೋಮರಾಜಿಭುಜಂಗಪ್ರಾಯಾತ || ೨೨ ||
ಅರಳಿಯಾಯುಬಲಾಮಣಿಯುಶುಭ । ಕರಸಲಕ್ಷಣೆಯಾದಕತದಿಂ । ನಿರು
ತನಿಖಿಳಕವೀಂದ್ರರಿಂವರವರ್ಣನೀಯಳಹೋ || ಅರಿದಿದೆನ್ನುತಲಾತ್ಮಪೊ
ಳುತಾ । ನುರುವಿಷಯದಿಂವರ್ಣಿಸುತ್ತಿಹ । ಧರಣಿಪತಿಭಾಸ್ಕರನಕಾಣುತಲೇ
ನುಕಾರಣವೋ ||೨೩|| ಎನುತೆಸುಂದರಿಯುಳುತವಕದಿಂ । ಮನೆಗೆಪೋಗ
ಲುಮನುಜನಾಥನು । ಮನದಿಮುಂದಕೆಪೋಗಬೇಕೆಂಬುವುದನುಳಿದಾಗ||

ಅನುನಯದಿನಿಜಗೃಹವಸೇರುತೆ । ಘನತರಯದೊಳನುಚಿತಸಮಯವಿಳೆ ।
ಮಿನಿಯಸಚಿವನಕರಸಿತನ್ನಭಿಮತವಕೃತಗೊಳಿಸಿ ॥೨೪॥ ಆವನಜ್ಞವುಖಿ
ಎನ್ನ ಕೂಡುವ । ಭಾವದಿಂತಜ್ಞನಕನಂಬೋ । ಥಾವಲಿಪ್ತನಮಾಡಿಹೊಡ
ಬಡುವಂತೆಮೂದಲಿಸೀ ॥ ತಾವಕಪ್ರಾವೀಣ್ಯತೆಯೊಳಾ । ಠಾವಿನೊಳುತ
ಡೆಯದೆಬರುವುದೆನು । ತೇವಿಚಾರವನುಳಿದುಪೋಗಿರೆನುತ್ತಕಳುಹಿಸಲೂ॥
॥೨೫॥ ಅವನುತತ್ಪಿತನಿದ್ದಡೆಗೆಬಂ । ದವನಿಪತಿವಾಂಛಾವಿಷಯವಂ। ವಿವ
ರಿಸಲ್ಕಾಕರ್ಣೈದುಚಿಂತಾವಿವಶನಾಗುತ್ತೆ ॥ ಭವನಭಕ್ತನಮಾತ್ಯನೊಳುತಾಂ।
ತವೆನುಡಿದನೀಯವನಿಪಂಮಮ । ಕುವರಿಯಂಗ್ರಹಿಸುವಪ್ರಕಾಮ್ಯವದಿ
ರುತಿರಲುಬೇರೆ ॥೨೭॥ ಎಮಗೆಕೊರತೆಯದುಂಟೆಮನಕತಿ । ಪ್ರಮುದವಾ
ಮಿತುಬಿನ್ನಪವನೀ । ವವಧರಿಸಿನಾಂಪೇಳುವೆನುನಿಮಗೆಂತೆನಲ್ಕನ್ಯೆ ॥ ಸ
ಮನಿಸದುಮತ್ಪ್ರೋದರೀಸುತ । ನಮಿತಕುಶಲಂವೀರಸಂಗಮ । ಸುಮ
ತಿಗೀಲಲಿತಾಂಗಿಯಳೆನಿಶ್ಚಯಿಸಿದರುವಿಬುಧ ॥೨೭॥ ಜನಸಮಕ್ಷಮದಲ್ಲಿಮ
ದ್ಬಾ । ವನುವಚಂಗೊಂಡಿಗುವಕಾರಣ । ವನುತಿಳಿದುಮತ್ತೇನನುಡಿಯ
ಲ್ಬಾರದಿನ್ನಿದಕೆ ॥ ಎನಲಮಾತ್ಯಂಪೋಗಿನೃಪತಿಗೆ । ವಿನಯದಿಂವಿಜ್ಞಾಪಿ
ಸಲುತ । ಜ್ಞನಪನಾನುಡಿಗಳನುಕೇಳುತಪಾರಕೋಪದೊಳೂ ॥೨೮॥ ಸು
ಮ್ಮನಿರಲನಿತರೊಳಗಾಪ್ತರ । ನುಮ್ಮಹಾಜನಸಂಚಯವನತಿ । ಪೇರ್ಮೆ
ಯಿಂಕರಸುತ್ತಲಾಸುದತಿಯುಳಜನಕನನೂ ॥ ಸಮ್ಮತದೊಳೊಡಬಡಿಸಿ
ಮಾನಸ । ದುಮ್ಮಳವಪರಿಹರಿಸಿರ್ಕೈಯಿಂ । ದೆಮ್ಮಲವರತಿಶಯದಿಬಂದಾ
ಶರಣವಲ್ಲಭನ ॥೨೯॥ ಸದನವಂಸೇರುತ್ತನಘಸದು । ಹೃದಯತಾವಕಸ
ದ್ವಿವೇಕಾ । ಸ್ಪದಮಹೋದಾರತೆಯುಘನತರಕೀರ್ತಿವಿಸ್ಫೂರ್ತಿ ॥ ಯುದ
ಧಿಮೇಖಲೆಯಿಳೆಯಜನನಿವ । ಹದೊಳಗುಂಟಾರಿಗೆಮಹಾಮಹಿ । ಮುದಿ
ಮೆರೆವನಿಮ್ಮವನುಬಣ್ಣಿಸಲಳವೆನಮಗೆನುತೆ ॥೩೦॥ ಅತಿಶಯದಿಕೊಂಡಾ
ಡಿರಾಜನ । ಮತಿಯೊಳೊಗೆದಸ್ಪೃಹೆಯುಸಚಿವರು । ಕೃತಗೊಳಿಸಲರಿ
ದಾತನವರೊಡನೆಂದನತಿಶಯದ ॥ ಚತುರತೆಯನಾನಾವಿಧದನುತಿ । ಯು
ತವಚನದಿಂದೇನುಫಲವೈ । ಕ್ಷಿತಿಪಬಡವರನೆಂಟನೆಂತಹನೆನ್ನಲವರುಗ
ಳೂ ॥೩೧॥ ಆದೊಡವರಕೃಪಾನಶದಿತೃಣ। ವಾದವಸ್ತುವುಮೇರುವತುಲಿತ।

ವಾದಬಲಸಂಯುತನುಸೌಭಾಗ್ಯಾತಿಶಯನವರಿಂ ॥ ಭೇದವೇನುಧರಾತಳ
ದಿಬೇ । ಕಾದವರುಕನ್ಯಾವಲೋಕನ । ಮೋದಸಂಬರುತಿಹರನೇಕರು
ಮಾಪೊಡವರ್ಗಿತ್ತ ॥೩೦॥ ಮಾತುತಪ್ಪುವದೆಂಬಸಂಶಯ ವೇತಕಯ್ಯಾಈ
ಭಪ್ರಯೋಜನ । ವ್ರೋತುಮಾಡುವಸಮಯದೊಳುವಿಘ್ನಂಗಳಡಸಿದೂ
ಡೇಂ ॥ ಭೂತಲದಿತಪ್ಪುವರನೇಕರು । ಈತಳೋದರಿಯುಳುಮಣಿಮಯದ।
ನೂತನದಸೌಧಾಂತರಾಳದಿಸಂಚರಿಸುತಿರಲೂ ॥೩೩॥ನಿಮ್ಮಗೆಮಗಾವೋ
ದವಹುದಿದು । ಸಮ್ಮತವೆಯುಪ್ಪುವುದಲಾನೀ । ಪೆಮ್ಮನುಡಿಗಳಮನಕೆತಂ
ದುನೃಪೋತ್ತಮನಕೂರ್ತು ॥ ಗಮ್ಮನೇಕುಡಬಹುದುಈಚಿ । ಕ್ಕಮ್ಮ
ಯನುಘನಸೌಖ್ಯವಪ್ಪುವು । ದೆಮ್ಮಲಾತನುಮಗುಳೆಯವರ್ಗಿಂತೆಂದವಿನಯ
ದೊಳೂ ॥ ೩೪ ॥ ಪಾವನಾತ್ಮರೆಈಯೆಡೆಯೊಳಗೆ । ನೀವ್ರುನುಡಿದುಪದೊ
ಳಿತುಯಮ್ಮಯ । ಭಾವವದುಬೇರೊಂದುಲಘುಸದ್ಧತಿಗೆಹೊಗದುಧರಿ ॥
ತ್ರೀವಲಯವಲ್ಲಭನತಿಳುಹಿರಿ । ದಾನಪಿರಿದಹಮಾತುಮನಸಿನೊ । ಳಾವ
ರಿಸಿದಮನೋವಿಕಲ್ಪವಬಿಡಿಸುವುದುಭರದಿ ॥ ೩೫ ॥ ಇಮವೆಸಾಸಿರಕೊಂ
ದುನುಡಿಪೂ । ರ್ವದೊಳುಸತ್ಯವಚನಪ್ರಕಾಸನ । ಪದಹರಿಶ್ಚಂದ್ರನನೀ
ಶ್ವರನವನವರ್ತನವಂ ॥ ವಿದಿತವೆನಲರಿದಿರುವನಿರ್ಮಲ । ಸದುಹೃದಯರೆನಿ
ಸುವರುನೀವಿ । ನ್ನಿದರೊಳಗೆಯಪ್ಪುವಫಲವದೆಂತಾದೊಡೆಯುಲೇಸು ॥
॥೩೬॥ ನೀವರಿಯದಿಹಧರ್ಮವಿಹುದೇ । ನಾವುಸೇಳುವುದೇನುಘಟನಾ। ಭು
ವವನುರಚಿಯಿಸುವನಿಮ್ಮಂಬಣ್ಣಿಸಲ್ಕಳವೇ ॥ ತಾವೆಬಲ್ಲಿರೆನಲ್ಕೆಯಾನುಡಿ
ಯೋವುತವರ್ಗಳುಕೇಳಿಯಾಣತಿ । ದೀವಿಬೇಗನೆಬಂದುಸತ್ಯವ್ರತೈಕನಿಜ
ಶೀಲ ॥೩೭॥ ವೀಪರಿಯೊಳಿರಬೇಕುದಾರ್ತ್ಯಾಪ್ರ । ತಾಪನೆನ್ನುತೆಕೌತುಕ
ದೊಳಾ । ಭೂಪಭಾಸ್ಕರನನ್ನುಕಾಣುತೆಪೋದಸಂಗತಿಯಂ ॥ ಶ್ರೀಪತಿ
ಪ್ರಿಯಭಕ್ತನೊಡನೆನಿ । ರೂಪಿಸಿದಸಾರಾರ್ಥವತಿಳುಹಿ । ಕ್ಷಾಮಪಸಂತತಿ
ಮಂಡನಾಡ್ಯರಿಪುಪ್ರಕರತಿಮಿರ ॥೩೮॥ .ಆಪಸಂಭವಮಿತ್ರಮನಸಿಜ । ರೂ
ಪನಿಮ್ಮಮನೋರಥಕೆಮು । ದ್ವಿಪಿತಾತ್ಮಕನಾಗಿಪೂರ್ವದೊಳೇವಚನವಿ
ತ್ತೆ ॥ ಆಪರಮನಾಣತಿಯಿದೆನುತತಿ । ಚಾಪಲಕೆಚಿತ್ತದೊಳುಚಿಂತೆಯ ।
ಲೇಪಿಸದೆವಚಿಸಿದನುನಿಪ್ರಜ್ಞಾರಪದ್ಧತಿಯಿದ್ಯೆಸೇ ॥೩೯॥ ಧಾರುಣೀತಲವಲ್ಲಿ

ನೀವುವಿ । ಚಾರಿಸದಸದ್ಧರ್ಮವಿಹುದೇ । ಪೋರಮಾರ್ಗವಿಚಾರದಿಂಪಾಲಿಸುವ
ರಾಷ್ಟ್ರದೊಳೂ ॥ ಸಾರಸತ್ಯವ್ರತಸುನಿಷ್ಠಾ । ಪೂಶದಿಂವರ್ತಿಸುವಮಹಿ
ತೋ । ದಾರಗುಣಿಗಳರಲ್ಕೆಸತ್ಕಿರ್ತಿಯಿಹುದುನಿಮಗ್ಗೆಸೆ॥೪೦॥ಬೇಕೆನಿಪಸುಂ
ದರಿಯರುಗಳು । ನಿರಾಕರಿಸದಮನೋವಿಳಾಸಕು । ಭೈಕವಿಮಳಸ್ತುತಿಭ
ರದೊಳೆಸೆವಿರುತಿರುವಕನ್ಯಾ ॥ ನಾಕವಗಣಿತವಿಹುದುತತ್ವಗು । ಣಾಕರನ
ನುಡಿಪಲ್ಲಟಿಸದಂ। ತೇಕರುಣಿಸುವುದವನಿಪಾಲಕಎಮ್ಮಬನ್ನಹವ ॥೪೧॥ಚಿ
ತ್ತಯಿಸುವುದೆನಲ್ಕೆಸ್ಮೇರಾ । ಯತ್ತಮುಖದಿಂದೊಲಿತುಪೋಗಿರೆ। ನುತ್ತ
ವರಕಳುಹುತ್ತೆಭಾಸ್ಕರನಾಗಸ್ಮರಹತಿಯಾ ॥ ತತ್ತರವಸೈರಿಸಲರಿಯದಿ
ಹ । ವೃತ್ತನಾಗಿಮೃಗೇಂದ್ರಮಧ್ಯೆಯಿ । ರುತ್ತಿರುವಭವನಕ್ಕೆಯೋರ್ವನೆ
ಪೋಗಲಾತಾಯಿ ॥೪೨॥ ತಂದೆಗಳುಕಾಣುತ್ತೆಸಂಶಯ । ದಿಂದೆಕಂಪಿತದೇ
ಹವಿಕಲತೆ । ಮುಂದುಗೊಂಡಾಮಾನಸದೊಳಿರ್ದವರನೆರೆಕಂಡೂ ॥ ೪೩ ॥
ಸುಂದರಿಯುಳತಿಧೈರ್ಯದಿಂದವ । ರ್ಗ್ಗಂದಳೇತಕೆಚಿಂತೆಭೂವರ । ನಿಂದಲ
ಪ್ಪುವುದೇನುಯೆನ್ನಂಪೊರೆವದೇಶಿಕನಾ ॥೪೪॥ ಕರುಣದಿಂನಾಂಪೋಗಿಯ
ವನಂ । ಮರುಳುಗೊಳಿಸುತೆತನ್ನೊಳಾಗದ । ತೆರದಿಮದ್ಧೀಮಹಿತವಚನ
ಗಳಿಂದೆಮಾನಸವಾ ॥ ತರಹರಿಸಿಭರದಿಂಕಳುಹಿನಿ । ಮ್ಮರುಪದಾಬ್ಜಂಗ
ಳಿಗೆರಗಲ್ಕೆ । ತರುವೆನೆನ್ನುತೆಸೈತಿರಿಸುತಂತಾಗಚಂದ್ರಿಣಿಯೂ॥೪೫॥ ಭೂ
ವರನಕಾಣುತ್ತೆವಿನಯದಿ । ಕೋವಿದನೆಯನ್ನಯ್ಯತಂಗಿಯ । ಭಾವಪೂ
ರಿತಪ್ರಿಯದಿನೋಡಲ್ಬಂದೆಯೆಮಾಅಣ್ಣಾ ॥ ಕೇವಲಸುದಿನವೆಂದೆನುತಲಾ। ಭಾ
ವೆಭರದಿಂಮಣಿಪ್ರಪೀಠದಿ। ಠಾವುಗೊಡೆಮುಖಕಾಂತಿಗುಂದಿನೃಪಾಲಶೇಖರ
ನೂ ॥೪೬॥ ಕೂತಿರುವಸಮಯಾಂತರದಿಪರಿ । ಪೂತಮಾನಸದಿಂದೆನುಡಿದ
ಳು । ಭೂತಲಾಧಿಪನನುಜೆಯಾಗಿಹಪುಣ್ಯಕೆಣೆಯುಂಟೇ ॥ ಖ್ಯಾತಳಾದೆ
ನುಎನ್ನಸೌಭಾ । ಗ್ಯಾತಿಶಯವಂತಿಂತೆನಲುಬಹು' ದೇತರುಣಭಾಸ್ಕರಸ
ಮಾನಸುತೇಜಮತ್ತೆನಗೇ ॥೪೭॥ ಕೊರತೆಯಿಲ್ಲದಸಕಲಸಂಪದ । ಗರಿಮೆ
ಯುಂಟಾಯ್ತೆನಲುಕೇಳುತೆ। ಧರಣಿಪತಿಯಿಂತೆಂದನಂಬುರುಹಾಕ್ಷಿಮಾನ
ಸದೀ ॥ ಭರಿತಕಾಮಾತುರದೊಳಾನೈ। ತರಲುಕಾಪಟ್ಯದೊಳುನೀನಿಂತೊ
ರೆಯುವುದುನಿನಗುಚಿತವೇಕರಿಣೋಕ್ತಿಗಳನಿಂತೂ ॥೪೮॥ ಸಕಲವಂಮು

ನ್ನರಿದುನೀಂಕೆಳು । ಯುಕುತಿಯುಂಹಣ್ಣುತ್ತವಂಚಿಸೆ।ಸುಕರವೇಬಾಹು ಳ್ಳಕೌತುಕವಾಯ್ತುಮಾನಸಕೇ ॥ ವಿಕಚರಾಜೀವಾನನೆಯೆಮಾ । ಮು ಕವಿಳಾಸಸ್ವರೂಪವೈಖರಿ । ಪ್ರಕಟವಿಭವವಕಂಡೊಲಿದಿಹರುಪದ್ಮಗಂಧಿ ಯರೂ ॥೪೭॥ ಕೆಲಬರುಂವೈವಾಹವಾಗಿಹ । ಲಘುವೋಽಹದೊಳಾನೆಭವ ದೀ। ಯುಲಲಿತಾಕೃತಿಗಂಡುವಿಭ್ರಮೆಸೆರ್ದುತಂಭರವಿ ॥ ನಿಲಯಕ್ಕೈತರಲೆ ನ್ನಮನವಿದು । ಚಲನವಾಗಲ್ಕೊಲಿಯಿಸಿದೊಡೇಂ । ಫಲವಹುದುಸನಗಾ ಗಿಯೆಂತರಹಕಾರ್ಯಮಾಡೊಡೆಯೂ॥೪೯॥ ನೆನದವೂತ್ರದೆನೆರವಿಕುಡುತಿಹ । ಘನತರದಬಲವಿರತಿರಲುನೀಂ । ಮನವನುಲ್ಲಸಿಸುವಳೆನುತಲಾನೋರ್ಕ್ವ ನೈತಂದೆ ॥ ಅನುಪಮಿತಸತ್ಪ್ರೀತಿಯಿಂನಾ । ನೆನುವನುಡಿಗಳಚಿತ್ತ ನಿುಸಿವೂ । ನಿನಿಯೆಸ್ಮರಸಂತಾಪದೊಳುನೂಂಕದಿರುಪ್ರಾಣಸಖೀ॥೫೦। ನಿರತಿಶಯುವಹಭೋಗಭಾಗ್ಯನಿ । ಕರವನಿನ್ನಾಧೀನಸ್ಯೆಯುವೆ । ನೆರೆವಿದು ವತರುಣಿಯುರುನಿನ್ನನುಮತಿಯುವಿಾರದೊಲೂ ॥ ಚರಿಸುವಂದದೆಮಾಡುವೆ ನುಭಾ । ಸುರತ್ವದೀಯಕೃಪಾವಿಲೋಕನ । ದಿರವಿನಿಂನಡೆಯುವೆನುಸಾಂ ಮುದದಿಂದೆನಿಶ್ಚಯದಿ ॥೫೧॥ ಪರಿಣಯುವದೆನಗಾಗಿಸುಖಿಸೆಂ । ದೊರೆಯು ಲಾಜಲದಾಭವೇಣಿಯು । ಧರಣಿಪತಿಯೊಡನೆಂದಳುದ್ವಾಹವದುಪೂರ್ವದೊ ಳೇ ॥ ಸ್ಥಿರವೆನಲ್ಕಾಗಿಹಸತಿಯುರನು । ಗರಿಮೆಯಿಂವೈವಾಹವಪ್ಪುವ।ತೆರವ ದುಂಟೆಧರಿತ್ರಿಯೊಳುಸದ್ಗುರುಗಳಾಡವರೂ ॥೫೨॥ ಮುನ್ನ ಕೊಟ್ಟಹರವ ರೊಡವೆಯೂ । ದೆನ್ನನುಂಸರಸಾಗ್ರಗಣ್ಯನು । ಮಾನ್ಯನತಿಸಾಡ್ಗುಣ್ಯನಾ ಗಿಹವೀರಸಂಗಯುಗೇ ॥ ಉನ್ನತೋನ್ನತಕೀರ್ತಿಯುತರಾ । ಜನ್ಯನತಿಶ ಯಧರ್ಮಪಾಲನೆ । ಯುನ್ನುವಿರಚಿಪನನ್ಯನೀರಜನೇತ್ರೆಯರುಗಳನೂ॥೫೩॥ ಮದುವೆಯಾಗಲ್ಬೇಕೆನುವುದಿದು । ವಿದಿತಧರ್ಮವೆನಿಪದಲಾಪೂ । ರ್ವದೊಳು ದಶಮುಖಕೀಚಕಾದಿಕರೊಳಗೆದುರ್ವ್ಯಾಂಭಾ ॥ ಭ್ಯುದಯದೋಷಾವಾತ್ರ ದಿಂನ್ಯೆ । ಜದಬಲುಮೆಸತ್ಕೀರ್ತಿನಸಿಸಿದು । ದದರತೆರನಳಿವುತಿಹುದನುನೀ ನರಿಯಲ್ಬೈಭೂಪಾ ॥೫೪॥ ಪರಸತಿಯುಸಂಪರ್ಕಸೌಖ್ಯವು । ಧರಣಿಯೊಳ ಗಣುಮಾತ್ರವದರಿಂ । ದುರಿತವೆಂಬುಪುಪರ್ವತೋಽಪಮವಾಗಿನಿಲ್ಲುವುದೆಂ ದರಿದುಮತ್ತೇಕೀನಿಕೃಷ್ಟಾ । ಚರಣೆಗೊಳಗಾಗಿರುತಿಹುದುಸ । ತ್ಪುರು

ಷಧರ್ಮವೆಸಾರತರಫಲಪಕ್ವವುತಂವ್ಮಾ॥೫೫॥ಮಂದಿರದೊಳಿರುತಿರಲುಮಿ
ಗಿತಿರಿ । ತಂದುಸರರೆಂಜಲನೆಯುುಂಬುವ । ಮಂದಮತಿಯಂತಿದುಸ್ವಕೀ
ಯಕುಲಾಂಗನಾಮಣಿಯು ॥ ಹೊಂದಿಹುದೆಸದ್ಧರ್ಮವನ್ಯರ । ಸುಂದರಿಯು
ಪಬು ಯುಸುತಿರುವುದು।ಚಂದವೇಸುಗುಣಾನ್ವಿತರುಮೆಚ್ಚುವರೆಈವಿಧಿಗೇ॥
ಎನಲೊಡನೆನೃಪಸಾತಳೋದರಿ । ವಿನಯವಾಕ್ಯವಿತಾನವಂನಿಜ । ಮ
ನಕೆತಾರದೆಮುಗುಳೆನುಡಿದನುಮಱುಳುತನದಿಂದೇ ॥ ಘನಚಿಕುರಭವದೀಕ್ಷ
ಣಶರವು । ತನುವಭೇದಿಸುವುದಕೆಮೊದಲೇ। ವನಜನೇತ್ರೆತ್ವದೀಯಮಧ್ಯ
ಮೃಗೇಂದ್ರವೆನ್ನಮನೋ ॥೫೭॥ ಬಿಲದೊಳಗೆಸೇರುತ್ತೆಪ್ರಾಣಂ । ಗಳನು
ಹರಿಸದಮುನ್ನ ವಳಿಕುಂ।ತಳೆಯೆತಾವಕಗಮನನಾಗಗತಿಗೆಮದೀಯಧೃತಿ॥
ಬಿಳೆಯನ್ನೆದದಮುನ್ನ ಕಂಬುಸು । ಗಳೆಯೆನಿನ್ನಯಬಾಸೆಹಾವದು । ಗಳಿ
ಲನೇಕಂಗೊಳಿಸಿಯುಸುವತಿಗಳೆವ್ರದಕೆಮೊದಲೇ ॥೫೮॥ ಇರದಪರಧರ್ಮವ
ಪಹಿಂಸೆಗೆ। ಪರಿಕಿಸಿವಡೊಂದಿಲ್ಲೆನುವುದಂ । ಸ್ಥಿರಗೊಳಿಸುನಿನ್ನಾತ್ಮದೊ
ಳಗಿಡುಸೇವ್ಯವೆನಿಸುವುದು ॥ ವರಪ್ರಿಯದಿಸ್ಮರತಾಪವೆಂಬುದು । ತರಹರಿ
ಸುತಿಹತೆರದೊಳೆನ್ನನು । ಪರಿಸಿದಯದಿಂದಾದರಿಸುಮುದ್ಭರದಿಪ್ರಾರ್ಥಿಸೆ
ನು ॥೫೯॥ ಎನಲುತದ್ಯುವತೀಮಣಿಯಳೆಲೆ । ಜನಪತಿಯೆಕೇಳಯ್ಯರೋಗಿ
ಗ। ಳಿನಿತುಬೇಂವಂಕೊಳಲದುವೆಕಯ್ಯಾಗಿಹುದುಬಳಿಕ ॥ ತನುವಿಗತಿಸು
ಖಕರವಹುದುರುಜೆ । ಯನುಹರಿಸುವುದುಬಹುಲವೂಧುಸ। ವೆನಿಸಿಪ್ರಾ
ಣವಕಳೆಯುವುದುಪ್ರೋಸನಾಭಿಯುದರಂತೆ ॥೬೦॥ ಮೇಲೆಬರುವುದನರಿಯ
ದೇಭವ । ಮೂಲವೆನಿಸಿಕೊಳುತಿಹವೋಹದ । ಜಾಲದೊಳುಸ್ಮೃತಿದಪ್ಪಿ
ಪ್ರಸ್ತುತಸುಖವನಿಚ್ಛಿಸುತೇ ॥ ಕಾಲಬಾಧೆಯೊಳಾಗದಿರುಸಂ । ಶೀಲವ
ನುಬಿಡದಿರುವುದಣ್ಣನೃ । ಪಾಲಸೇಖರನೇಎನೆಮಹೀಪಾಲಕನುಮುಗು
ಳ್ನಕ್ಕು ॥೬೧॥ ಸುದತಿತರಳೇಕ್ಷಣದಿಬೆದರಿಸು । ತೊದರಿಗಂಧರಜೋಭಸಿತ
ವಂ । ಉದುರಿಸುತೆಕೊನೆಯುಗುರ್ಗ್ಗಳಿಂಚುರುಕಿಡುತೆಫಣಿವೇಣೀ ॥ ಪುದಿ
ದಪಾಶದಿಪ್ರೊಯ್ಯುತಂತೆಲೆ । ಪಸುಮಲೋಚನೆಬಾಹುಲತೆಯಂ । ಬುದರಿ
ನುರೆಬಂಧಿಸುತೆಗಳರವಮಂತ್ರವುಚ್ಚರಿಸೀ ॥೬೨॥ ಕೋಮಲಕುಚಕಲಶವ
ಪೂಡು । ತ್ರೇಮಘುದೋಷ್ಠಾಮೃತಜಲವ। ನೇಮದಿಂದೀವೃತ್ತೆತನುರು

ಚಿಜ್ಯೋತಿಯಂಬೆಳಗೀ॥ ಪ್ರೇಮದಿಂಸವಿಗಂಪಿನುಸುರಿಂ। ಸೋಮಮುಖ ದೊಳುಪ್ಪೊತ್ತರಿಸುತಂ । ಕಾಮಭೂತವಬಿಡಿಸುಹಿಡಿದೆನ್ನು ವನೆಕಾಡುವು ದು ॥೩॥ ಘೋರತರಸ್ಮರತಾಪವೆಂಬುದು । ವಾರಿಪರವಶವೈದಿಸಿತುವೈ। ಸಾರಿಣೇಕ್ಷಣೆಕರುಣದಿಂಕಾಯುವುದೆನಲುಕೋಪ ॥ ಪೂರಮಾನಸಳಾಗು ತಾಸುಕು । ಮಾರಿಯಂದಳುಬಾಯ್ಗೆಬಂದಾ । ಮೇರೆಯಿಂದುಭಾಷೆಗಳ ನಾಡುವರೆಮನುಜೇಶ ॥ ೬೪ ॥

ನೀನುಧರ್ಮವಬಿಡುತಲನ್ಯರ । ಮಾನಿನಿಯರಿಂಗಾಶೆಗೈದಡೆ । ಹಾನಿ ಯುಪ್ಪುದುನಿನ್ನವೈಭವಕಯ್ಯಯೆನಲವನೂ ॥ ಜ್ಞಾನಹೀನತೆಯಮನು ಜಂಮಮಂ । ದೇನಹುದೊಎಂದರಿಯದಾಭೂ । ಜಾನಿಪುಷ್ಪಂದುಳಿದುರಗ ನೊಲುಕೋಲಿನಿಂಪೆಟ್ಟು ॥ ೬೫ ॥ ತಾಗಿರುವಹುಲಿಯಂತೆಕ್ರೋಧಿತನಾ ಗಿಲಜ್ಜಾಭಯವಿನಯವನು। ನೀಗಿನೋಡುವರಾಜನಂಕಂಡಾಕ್ರಮಿಸುತಿವ ನೂ ॥ ಮೇಗೆಬಂದುಬಲಾತ್ಕರಿಸುವಂ । ತೀಗತೋರುವುದೆನುತೆಭಯದಿಂ ಬೇಗತಿಳಿದೀಡುರುಳಕಾಮಾಂಧಕನುಸದ್ಧರ್ಮ ॥೬೬॥ ಹೀನನಿವನೂಹಿಸಿದ ನೆನವಿನ । ಕೂನವನುನಿರ್ಮೂಲಮಾಡಿದ । ಯಾನುರಾಗದಿಭರ್ಮಶಿಖರೀಧ ನ್ವಿಯನ್ನುವನು ॥ ತಾನೆಕಾಯುವನೆಂದುವ್ಯಾಘ್ರಕೆ । ಧೇನುವಿನಪರಿಯನಿ ಶಿಶಂಕರ । ಪ್ರಾಣವಲ್ಲಭನೀನೆಗತಿಯಿಾಪಾಪಿಕೈಯೊಳಗೇ॥೬೭॥ ಸಿಕ್ಕಿದೆನು ತೊಲಗಿಸುವುಪಾಯವ । ನಕ್ಕರದಿಮಾಳ್ಪವರಕಾಣೆನು । ಇಕ್ಕೆಲದೊಳಾ ರೈವುತಂಕಡುಯುಕ್ತಿಯಿಂದವೆಳು ॥ ಸೊಕ್ಕಿಗನವಿಪಳಿಸುತೆತೊಲಗಲ್ । ತಕ್ಕುದದುನಾನಬಲೆಯುಳುಸಲೆ । ಮಿಕ್ಕಿದಾಸದ್ಧರ್ಮಗಳಬೋಧಿಸಿತೊಲಗ ಲರಿಯೇ ॥೬೮॥ ಮುನ್ನವಾನೊರೆದಿರುವವಾಕ್ಯಗ । ಳಿನ್ನುಮನಸಿಗೆತಾರ ನಾರಿಗೆ । ಬಿನ್ನವಿಸಲಿಧರಾಧಿಪತಿಯವನಿರದಮೇಲಹರಾ ॥ ಜನ್ಯರುಗಳಿನ್ನಿ ಲ್ಲಕೋಪದ । ವನ್ಹಿಯಿಂಮಡಿಯಿಸಲುಪೊಡವಿಪ ! ನನ್ನುಕೊಲ್ಲುವಪಾಪ ವತಿಶಯವೆಂಬುವರುಬುಧರೂ ॥೬೯॥ ಕಾಲಯಾಪನೆಗೈಯದೀಭೂ । ಪಾ ಲನಂಕಳುಹುತ್ತೆಜನಕನ । ಮೇಲೆನಿಪಶಪಥವನುಶಾಸನಗೈವೆನೆಂದೆಸು ತಾ ॥ ನೀಲಕುಂತಳೆನಿಶ್ಚಯಿಸುತಂ । ಲೋಲತೆಯೊಳಿಂತುಸುರಿದಳುಪರಿ ಪಾಲಿಸಿಕೊಳುವುದಾತ್ಮಮತವಂತಿಳಿಡುಪ್ರೀತಿಯೊಳೂ ॥೭೦॥ ಬಿನ್ನಪವ

ದೊಂದಿಹುದುನೃಪನೇ । ನಿನ್ನ ಮನಸಿಗೆತರಲುಬೇಕದು । ಎನ್ನ ನುದ್ವಾ
ಹಾತಿಶಯವೈಭವವಿಗ್ರಹಿಸುವುದೂ ॥ ಉನ್ನತವೆಯೊಮಿತ್ತಸ್ಪೃಹೆಯದು
ತ್ಸನ್ನವಾದುದುನಾಶಿಸುವದಾರಿ। ನ್ನಿದಮನುಜರೊಳಯುಕ್ತಾಯುಕ್ತ
ಗಳನೆಣಿಸಾ ॥೨೧॥ ಕಾರಣವದೇನೆನ್ನ ಮುತ್ಸ್ವ। ಪೂರಿತಾತ್ಮಳಗೈಯುವುದೆ
ಸುವಿಚಾರವದರಿಂದೆನಗವಧಿಯೇಲ್ಲಿ ವಸವೀಯುವುದೂ ॥ ಗೌರಿಯರ್ಚನೆ
ಯತ್ರಿಕಾಲದಿ। ಸಾರನಿಷ್ಠಾಭರದಿಗೈಯುವ। ಕಾರಿಯುವಿದೆಮುದನ್ವಯವಿವೈ
ವಾಹವಪ್ಪವರು॥೨೨॥ ನೀವುಬಪ್ಪವುದೆನಲುಸಮ್ಮತ। ಭಾವದಿಂಮನೆಗೈತ
ರುತಲಾ । ಭೂವರೇಣ್ಯಂದಿನಗಳೆಣಿಸುತಲಿರ್ದ ನನಿತರೊಳೂ ॥ ಬಾವೆಈವ
ರ್ತನವಭರದಿಂ । ಧೇವಿದಿಸೆಜನನೀಜನಕರಿಗೆ । ಕೋವಿದೋತ್ತಮವೀರ
ಸಂಗಮದೇವರಿಂಗವರೂ॥೨೩॥ಮಾನಿನಿಯಳೂಹಿಸಿದತೆರದನು। ಮಾನವಿಲ್ಲ
ದೊಲರಿಯಬರುವವಿ । ಧಾನವಿಂಕಳುಹಿಸಿದಬಲೆಯನಾತನಾರೈದು ॥ ಮಾ
ನಸಾಬ್ಜಾಂತರದಿನೃಪನ । ಜ್ಞಾನದಿಂನಿರವಧಿಯನಿವದುರಿ । ತಾನುವೃತ್ತಿಗ
ನಾದನಲ್ಲಾಚಂದ್ರಿಣಿಯಮತಮಂ ॥೨೪॥ ಪೂರಯಿಪೆನಾಂಪರಿಣಯವನಾ।
ಳ್ದಾರಸಾಧಿಪನತಿಕಪಟವವಿ । ದಾರಿಸುತೆತಪ್ಪಿಸುವಮಾರ್ಗವದೆಂತುಘಟಿ
ಸುವುದೊ ॥ ಸಾರಕರುಣದೊಳೆನುತೆಸುಶರಭ । ಮೂರುತಿಯಪದಪದ್ಮ
ಧ್ಯಾನದ । ಪಾರವಶ್ಯಸುಖಾತ್ಮನಾಗಿರೆಜನಕಜನನಿಯರೂ ॥೨೫॥ ಆತನೆಡೆ
ಗೈತಂದುಲೇಖೋ। ಪೇತವೃತಾಂತ್ತವನುಕೇಳಿಬ । ಲಾತಿಶಯನೊಳುಮ್ಮೆ
ರವೆಸುಗುವುದವಿಧಿಯುಹುದಾಗೀ ॥ ನೀತಿಯಿಂವೈವಾಹಿಕೋತ್ಸವ । ವಾತೆ
ರದಿಸಾಂಗಿಕವೆನಲುಗಮ । ನಾತುರದಿಸ್ರೋಗುತ್ತೆಮಂಗಳಕರದಿಕಾರ್ಯವ
ನೂ ॥೨೬॥ ಆಗಮಾಡುವುದೆನುತೆಸದ್ಬುಧ । ಪೂಗಬಾಂಧವರುಗಳುಯೋ
ಚಿಸು । ತಾಗಳಾವಿಧವರುಪಿದರುವರವೀರಸಂಗಯಗೇ ॥ ಪೋಗಬೇಕಾ
ದನಿಬರುಂಜೊತೆ । ಯಾಗಿಮುದವಳಿಗನನುಗೈದುಬ । ಭಾಗಮನದನು
ಕೂಲವೆನಿಸುವತುರಗವಂತಂದೂ ॥ ೨೭ ॥ ಅದರಮೇಲ್ಮಾರ್ಗ್ತಂಗಯಿಸಿಕ
ಳು । ಹಿಡುದುಹರಸುತೆಸೋಮಶರಣಸ । ಮುದಯವತುಲರಯದೊಳ
ಗೋಂಕಾರಪುರಮಂಸೇರು॥ ವೃದಕೆವೊದಲೇತಾವುಬರುತಿ। ರ್ಪ್ಪದನುಸಾಂ
ಪ್ರದವವರ್ಗಳಗೆತಿಳಿ । ವೃದಕೆಘಣಿಹಾರಿಗಳಕಳುಹಿರುತಿರ್ದ್ದತಾವ್ವೆರಳಿ ॥

||೭೮|| ಚೆನ್ನಿಗರುಉತ್ಸಾಹತರಪ್ರ ! ಛಪ್ಪನ್ನದಿಂದಾರಾತ್ರಿಕಾಲದಿ | ತನ್ನ
ಗರಿಯಂಘೆನಶುಭೋದಯದಿಂಪುಗುತೆಬೀಗ || ರುನ್ನತದಸದನವಪ್ರವೇಶಿ
ಸಿ | ಕನ್ನೆಚಂದ್ರಿಣಿದೇವಿವರನಿಗೆ|ರನ್ನಕಲಸೆಗಳೆತ್ತುಪೆರದರುಧಾರೆಯೆಂಬು
ಧರೂ ||೭೯|| ಆವಧೂಭರ್ತ್ರಾರರಂಮು | ದ್ಭಾವದಿಂವಾಹನವನೇರಿಸು|ತಾ
ವಿಬುಧಭಟಬಂಧುಜನಸಂತತಿಸಹಿತವಾಗೀ || ಶ್ರೀವಿಭವದಿಂತತ್ಪುರವಜವ
ದಾವಿಶೇಷದಿತೆರಳಿಮಹಿತಜ | ಸಾವತಂಸಂಪಥದಿನಡೆವುತ್ತಿರ್ದ್ದವೃತ್ತವ
ನೂ ||೮೦|| ಚಾರನೋರ್ವನುಕಂಡುಬಂದುಧ|ರಾರಮಣನಡಿಗೆರಗಿಯನುಪ
ಮ | ಶೂರರಂತೆಸೆದಿರುವತಾವುಗಳೈದೆಕಾಂಕ್ಷಿಸಿದ || ನಾರಿಚಂದ್ರಿಣಿದೇವಿ
ಯೆಂಬುವ | ವಾರಿಜಾಂಬಕಿಯಳನುನಿಶಿಯೊಳು | ಭೂರಿತವಕದಿಮದುವೆ
ಯಾಗುತೆಭುಜಬಲದಪೆಂಪಿಂ |೮೧|| ಇಂದುಪೋಪನೆನಲ್ಕೆಕೇಳಿಯು| ಮಂ
ದಕೋಪಾಟೋಪದಿಂದಂ | ಮುಂದುಗಾಣದೆಶೌರ್ಯದಿಂದಲಹಾಇದೇನಾ
ಯ್ತೂ || ಸುಂದರಿಯಳೀಲ್ದಿನಂಹಿಮಗಿರಿ | ನಂದನೆಯುಳೆಂಪ್ರಿಯಸಮರ್ಚ
ನ | ವೆಂದುಮಾಡುವನಿಯಮವಿಹುದುಮದನ್ವಯದಿಬಳಿಕ ||೮೨|| ಬಂದು
ಕೂಡುವೆನೆಂದುಮಾಯಾ| ದಂದುಗವಹಣ್ಣಿಸುತೆನಗೆಮೋ|ಣ್ಕುಂಡುಗ್ಮೆಯ
ಲ್ಕೊಳಗೊಳಗೆಪ್ರಿಯವಲ್ಲಭನಕರದೂ || ತಂದುಪರಿಣಯುವಾಗಿಗಂಡನ|
ಹಿಂದೆಪೋದಳುನಂಬಿನಾನತಿ | ಮುಂಪಮತಿಯಿಂಬಿಟ್ಟೆಕೈಯೊಳುಸಿಕ್ಕಿದಾ
ಸತಿಯಾ ||೮೩|| ಬುವಿಯೊಳುವ್ಯಾಘ್ರಮುಖಮಾಸವ | ನವಿಜಲದ್ಧೃತಿ
ಯಿಂದೆಕೊಂಬುವ | ವಿವರದಿಂನಾಂಮದುವೆಯಾಗಲಪೇಕ್ಷಿಸಿದಸುಷು
ಮಾ || ಯುವತಿಯುಳನೀರಾತ್ರಿಯೊಳುಕಡು | ತವಕದಿಂಪರರರಿಯದೊ
ಲುಲ | ಗ್ನವನಯಿದೆಬಾಂಧವರುಸಹನಡೆವುತಿಹನವನಪಟು ||೮೪|| ದರ್ಪ
ವಡಗಿಸಿತರುಣಿರನ್ನವ | ತರ್ಪೆನಾನಿಂತೆಂದುಉರಿಯು | ತ್ತಿರ್ಪದಾವಾನಲನ
ತೆರನಂತುಗ್ರಪರಿವಾರ || ವಿರ್ಪ್ಪದಂಬರಹೇಳಿಜೀವವು | ಬೇರ್ಪಡುವವೋ
ಲವನಛೇದಿಸಿ | ಕರ್ಪ್ಪುರಸುಗಂಧಿಯಳತರುವುದಕಾನುನಿಮ್ಮಿಂದೇ ||೮೫||
ಬರುವೆನೆನುತಂಕಳುಹೆಘನಮದ | ಕರಿಶತಾಂಗಮುಖ್ಯಕಸೇನಾ | ಪರಿಜ
ನಾನ್ವಿತರೈದೆನಡೆತಂದರುಪರಾಕ್ರಮದೀ || ಸ್ಫುರಣದಿಂಮೆರೆವುತ್ತೆವರ
ಮುಧ್ಭರದಿವಿವಹಾಯಾತಮನುಜನಿ | ಕರವನಡೆಗೊಡದಂತೆಸುತ್ತಲ್ಕಿತ್ತಿ

ನಿರ್ದೋಷ ॥೯೬॥ ಭಾವಿಯನಿಸುವವೀರಸಂಗಯ । ದೇವರಂವಾಹನವನಿಲ್ಲಿಸಿ । ಭೂವಲಯಪತಿಪ್ರೇರಣೋತ್ಸಟುವಾಹಿನೀನಿಚಯು ॥ ವಾವಿಕೀರ್ಣದೊಳಾಕ್ರಮಿಸೆಕಂ । ಡಾವತೆರದಿಂನಡೆಯಬಹುದೀ । ಧಾವತಿಯುಸಂಘಟನವಾದುದುದೈವವಶದಿಂದೇ ॥೯೭॥ ವಿಜಯವಪ್ಪವದೆಂತುಶತ್ರು । ವ್ರಜನಿಬರ್ಹಣಶಕ್ತಿಯಿಂದೀ। ಪ್ರಜೆಗಳೆಂಭಯುಗೊಳಿಸಿನಡೆಯುಲುಬಾರದಾಯಿತ್ತಿೀ ॥ ರಜಮುಖಿಯನಪಹರಿಪುಪಾಯವ । ನಿಜದಿಮಾಡಿದಕಪಟಭೂಪನು। ಸುಜನಬಾಧಕನಿವನುದಾಳಿಯನಿಟ್ಟನುರವಣಿಸೀ ॥೯೮॥ ಎಂತುದುರ್ಘಟವ ಕಟಕಟಹಾ । ಕಾಂತೆರನ್ನವಕೊಟ್ಟುಪೋಪುದ । ಕಿಂತದೇಹವಬಿಡುವುದೇಕಡುಲೇಸುಸತಿನೆವದೀ ॥ ಕುಂತಭಾಜನನೆನಿಸಿದನುಮು । ತ್ತ್ಯಾಂತವಲ್ಲಭಶರಭದೇವಮ । ಹಂತನೀಷನ್ಮಾತ್ರವಸುವಿಗೆಚಿಂತೆಗೈಯುವೆನೇ ॥೯೯॥ ಸರಸಿಜೇಕ್ಷಣೆಗಾಗಿಯೋಚಿಪೆ । ನುರುಬಲವದಾಕ್ರಮಿಸಿತೀಯುವ । ಸರದೊಳೆತ್ತಣಭೀತಿಯುಂದೂಹಿಸುತೆಸುವಿಚಾರ ॥ ಶರಧಿಯೊಳುಮುಳುಗುತೆಹರಹರಾ । ಧರೆಯುಮೊದಲಹಭೂತಕಾಯಮಂ । ತರವಿಕಾರದನೆನವುಕಲ್ಪಿತವಾಯ್ತುಸಕಲವನೂ ॥೧೦೦॥ ಪೊರೆವಪರಿಹರಿಸುವಸಮರ್ಥ। ಸ್ಫುರಣಕಾರಣನೆನಿಪಪುರಸಂ। ಹರಸಮರ್ಥನತತ್ಸರರಿಗಿಂತಪ್ಪದುರ್ಘಟವಾ ॥ ಗಿರುವಕಾರ್ಯವಿದಾಗೆಸಾಧಿಸು । ತಿರುವೆರದುಕಾರಣದಿನಿಶ್ಚಲ । ದಿರವಿನಿಂಕ್ಷಂಗಳೆನುಮುಚ್ಚುತ್ತೀಶ್ವರಧ್ಯಾನ ॥೧೦೧॥ ದಿಂದಿರುವಸಮಯದೊಳುಕಾಳಿಯು । ಮುಂದದುರ್ಗಿಗಳಾದವಕ್ಷಗ । ಳಿಂಡುರವಿಶಿಖಿಲೋಚನಂಗಳುವಜ್ರನಖಪಜ್ತಿ ॥ ಅಂಡುಗೆಗಳಿಂದೊಪ್ಪವೆಂಟಡಿ । ಸಾದಮೃತ್ಯುವ್ಯಾಧಿಯೂರುಗ। ಳಿಂದೆನಿಕಲಸಕಲಚಿಜ್ಜ್ಯೋತ್ಸ್ನೆತ್ತಮಾಂಗಗಳಿಂ ॥೧೦೨॥ ಉರುತಟನ್ನಿಭವೆನಿಪಜಿಹ್ವೆಗ । ಳೆಸಡುದವಬಾಡಬಗಳುಂಮೇ । ಣಿರಲು ಭೈರವವಾಲಜಠರವುಬಾಹುದ್ವಿಸಹಸ್ರ ॥ ಸುರುಚಿರದಿಕಂಗೊಳಿಸಿಮುನದೊಳು । ಬೆರದುತಲ್ಲಣಬಿಡಿಸಿಕುವರನೆ । ಶರಭಮೂರುತಿಯಾನುನಿನ್ನಭಿಮತವನೀವುದಕೆ ॥೧೦೩॥ ಬಂದಿರುತ್ತಿಹೆನಂಜದಿರುಯಿಾ । ಸುಂದರಿಯುಕೊಡದೊಲುಚಮೂಪತಿ । ಬೃಂದವಂನುಗ್ಗಾಡುವನಿತುಪರಾಕ್ರಮವುನಿನ್ನ ॥ ಜೆಂಹೊಂದಿರುವುದೆಂದೆನುತೆವನ್ನಿಯು । ಸಂಪಶಸ್ತ್ರವನಿತ್ತುರಿಪುಗಳು ।

ದುಸ್ರೋಗುವರಾಯುಧವರಝುಂಕಿಸಿದವಮಾತ್ರದೊಳೇ ॥ ೯೪ ॥ ಎನುತೆಮೂ
ರ್ತಿಯಮೂರ್ತಿಯಾಗಲು । ಅನಿತರೊಳಗೆಚ್ಚತ್ತುವಿಸ್ಮಯ । ವನುಮನ
ದೊಳಾಳುತ್ತೆತನ್ನಕರಾಬ್ಜದೊಳತಿತೀಕ್ಷ್ಣ ॥ ವೆಸಿಪಕರವಾಲವನುನೋ
ಡುತೆ । ಘನತರಾಮೋದದೊಳುಜನನೀ । ಜನಕರಿಗೆತತ್ಖಡ್ಗಮಂತೋರ್ಪ
ರುತ್ತೆಶ್ರೀಶರಭ ॥೯೫॥ ಸಾಳುವೇಶ್ವರಮೂರ್ತಿಯಧಿಕದ । ಯಾಳುವಾಗಿ
ಪ್ರಸನ್ನಮುಖದಿಂ । ಪೇಳಿರುವವಾಕ್ಯಗಳಸಾಂಪ್ರದವನುಹಿಬಂಧುಗಳು ॥
ಮೇಳವನುಲಾಲಿಸುತೆಧೈರ್ಯವ । ತಾಳುತಭಯುವಪೇಳುತಂಭೂ । ಗೋ
ಳವುನಡುಗೆಪ್ರಳಯನೀರದಗರ್ಜನವಿದೆನಲೂ ॥ ೯೬ ॥ ಕೇಸರಿಧ್ವನಿಗಯ್ಯೆ
ತದ್ರವ । ವಾಸಕಲರಿಪುಸೇನೆಕೇಳುತ । ಲಾಸಪರಿಪಂಥಿಗಳುಭೀತ್ಯಾವ್ಯ
ತದಿನಿಬ್ಬೆರಗಿಂ ॥ ವೋಸವಾಗೀಕ್ಷಿಸುತಲಿರೆಧರ । ಣೀಸತೀಶನುಹಿಂದೆಬ
ರುತಪ್ರ । ಯಾಸಕೊಳಕಾಗುತ್ತೆಸಾಧ್ವಸಯುತದಿಹತ್ತಿರಕೇ ॥೯೭॥ ಸೇ
ರಲತಿಭಯುವಾಂತವರ್ಗ್ಗಳ । ಸಾರದೆಗಿರಿಯನೇರಿನಿಂದುಧ । ರಾರಮಣನಿ
ಕ್ಷಿಸುತಲಿರೆಸೇನಾಧಿನಾಯುಕರಾ ॥ ಪ್ರೇರಣೆಯೊಳಾಕಾಲ್ಬಲವುಸಟು
ಧೀರತೆಯೊಳಸಿಮುಸಲಮುದ್ಗರ।ಭೂರಿಭೀಕರವಾಸವಮುಖಸಾಧನಗಳಿಂ
ಸಮರಾ ॥೯೮॥ ಭೀಲತಾಮುಖರೆನಲವರ್ಗ್ಗಳು । ಮೇಲೆಯಾಕ್ರಮಿಸಲ್ಕೆ
ಸಜ್ಜನ । ಲೋಲನೆನಿಸುವವೀರಸಂಗುುನತುಲಸದ್ಭಕ್ತಿ ॥ ಶೀಲನಾದಾಕ
ತಪಶ್ರೇಯೋ । ಮೂಲವೆನಿಸುವಶರಭನುತ । ತ್ಕಾಲದೊಳುಧ್ಯಾನಿಸಲು
ಕರುಣದೊಳಿತ್ತಶಸ್ತ್ರವನೂ ॥೯೯॥ ವರುಷಕಾಲಾರಂಭದೊಳುಪ್ರಸ್ಫು
ರಿಪಮಿಂಚೆಂಬಂತೆಪೊಳೆವು । ತ್ತಿರಲುಕೈದುವಿನಿಂದೆತಾಂಡವಮೂರ್ತಿಯ
ನಲೆಸೆದ ॥ ಪುರಹರನಫಾಲಾಂಬಕೋದ್ಭವ । ದುರುತರದ್ಯುತಿದಹನಜ್ವಾ
ಲೋ । ತ್ಕರದೊಳಾವಿರ್ಭವಿಸಿದನಲವುವೈರಿಗಳಸುತ್ತಂ ॥೧೦೦॥ ಮುತ್ತು
ತಂಸೇನೆಯುನುನೆರೆದಹಿ । ಸುತ್ತೆಬರಲದರೊಳಗೆಶಿವಗಣ। ಸತ್ತಮನುವಾ
ಣಗಳಬ್ರಹ್ಮಬಿಲಾಂತರಾಳದೊಳೂ ॥ ಒತ್ತರಿಸಿಪ್ಪೊಗಸಲ್ಕೆಸಾತ್ವಿಕ । ವೃ
ತ್ತತೇಜೋಮುಯನೆನಿಪಬೆಳ । ಗುತ್ತಿರಲುಸೇನೆಯುಬಹಿರ್ವೇಶವಿಕಳೆಬು
ಪ್ಪೂ ॥೧೦೧॥ ಉದ್ಧತದಿಬಿದ್ದಿರಲುಸಂಗಾ । ರಾಧ್ಯನಯ್ಯೋಪೋಸವಾ
ಪು । ವೃದ್ಧಶರಣಾಗ್ರಣಿಯುಸುವನಪಹರಿಸಿತವರಿಂದೇ॥ ಬದ್ಧಸಾತಕಿಯು

ಮುಕ್ತಿಯು| ಸಿದ್ಧಿಸುವುದೇನೈಜಭಕ್ತಿವಿರುದ್ಧವಾಯ್ತುಮದಿಷ್ಟಮೂ
ರ್ತಿಯದೆಂತುಮೆಚ್ಚುವನೋ ||೧೦೨|| ಭಕ್ತಹಿಂಸೆಯುಸಂಘಟಿಸಿದುದು |
ಯುಕ್ತವೇಶಸ್ತ್ರವನುಪಿಡಿವುದು | ಭೋಕ್ತವಿಧಿಯಂತಪ್ಪಿಸುವರಾರೆನು
ತಲುತಿರ್ಪುದೋ || ದ್ರಿಕ್ತಮಾನಸದೊಡನೆಯತುಲವಿ | ರಕ್ತಿಯಿಂನಿಜಪ್ರಾ
ಣಗಳಸಂ | ತ್ಯಕ್ತಗೈಯುವೆನೆನುತನಿಶ್ಚಲಧೈರ್ಯದಿಂದಸಿಯಾ ||೧೦೩|| ಕೈ
ಕೊಳುತೆನಿಜಸಿರವಭೇದಿಸು | ವಾಕಲುಷರಹಿತನನುಕಾಣು | ತ್ತಾಕತದಿ
ತತ್ಪರಣಪುಂಗವನೆದ್ದುಎಲೊತಮ್ಮಾ || ಏಕೆಸಾಸವನನಿತೊಡರ್ಚುವೆ| ಸಾ
ಕೆನುತೆಹಸ್ತವನುಪಿಡಿದುವಿ | ವೇಕವನುಬೋಧಿಸುತೆಸಮ್ಮತಗೊಳಿಸು
ವೀಶಿಧವಾ ||೧೦೪|| ಶೈಲದಗ್ರದೊಳಿರ್ದ್ದುಕಂಡುನ್ಪ | ಪಾಲಮಣಿಯಾತ್ಮ
ದೊಳುಭಕ್ತಿಸು | ಶೀಲನೀತನುಶೈವಲಾಂಛನಪ್ರೇಮಿಯಪ್ಪನಲಾ | ಮೇ
ಲೆನಿಸಿತಿದುಶೂಲಿಭಕ್ತನ | ಪ್ರೋಲುನಡೆದಾಂಶರಣುಮಾಡುವ| ಕಾಲದೊಳ
ಗಾಧೀನನಪ್ಪೆನುಕಂಗೊಳಿಸದಂತೆ || ೧೦೫ || ಕರತಲದಿಪಿಡಿದಿರುವಶಸ್ತ್ರ
ದಿ | ಸಿರವಭೇದಿಪೆವೀರಸಂಗಾ | ರ್ಯರನೆನುತೆನಿಶ್ಚೈಸಿಗಳಶೀರ್ಷೋ
ರುಬಾಹುತಲ || ಕರಮುಖಾದಿಕದೇಶದೊಳುವಿ | ಸ್ಫುರಿತಹಾರೋಜ್ವಲ
ಮಣಿಯುಸುರು | ಚಿರಮಕುಟಭೂಷಣಗಳನುಳಿದುಭಸಿತವಂಧರಿಸೀ ||
||೧೦೬|| ಮಾರಸಂಹರನಕ್ಷಮಣಿಗಳ | ಧಾರುಣೀರಥಸೇಟಿಕಾಯು| ಯೋ
ರುತರವಸ್ತ್ರಗಳಜಡೆಗಳತಳೆವುತಂಶರಣ || ವಾರವರ್ಯನತೆರದೊಳಾತನ |
ಸಾರಿನಿಂದಿರುತಿರಲುಕಪಟೋ | ದ್ವೀರಮಾಹೇಶ್ವರನಕಾಣುತೆವೀರಸಂಗ
ಯ್ಯ ||೧೦೭|| ಸಾವಯಾಭವಮೂರ್ತಿಯೆಂದೇ | ಭಾವಿಸುತೆನಮಸುವಸ
ಮಯದೊಳು | ಭೂವರನುಕರವಾಲದಿಂದಾತನನುಸಂಹರಿಪಾ || ನೇವ
ದಿಂಹಾಯ್ಕಲಡುಸುಮಮಾ | ಲಾವಿಶೇಷದೊಲಾಗಳವನುರೆ | ತೀವಿಶೋ
ಭಿಸುತಿರಲುಧರಣೀವಲ್ಲಭನುವ್ರೀಡಾ || ೧೦೮ || ಭರದೊಳಿರ್ಪಾಸಮಯ
ದೊಳುಗಿರಿ | ವರತನೂಜಾವಲ್ಲಭನುಸುಂ | ದರವೃಷೇಂದ್ರನನೇರಿನಿರ್ಜರ
ಸಂತತಿಯುವೆರಸೀ || ಕರುಣದಿಂಸಾಕ್ಷಾತ್ಕರಿಸಲುರು | ತರಭಕುತಿಯಿಂ
ವೀರಸಂಗಯ | ಹಗನಮೆಲ್ಲಡಿಗಳಿಗೆರಗಿಪ್ರಸ್ತುತಿಸಿದನುಮುದದೀ ||೧೦೯||
ಶಮನಪುರ್ಮದಭಂಗಭವಚಂ | ದ್ರಮಕಲಾಮಂಡನಮುಕುಟಮೃಡ | ಕ

ಮಲನಿಧಿತೂಣಾದ್ರಿಜಾತಾತ್ಮಾಬ್ಜಷಟ್ಕರಣ || ಅಮೃತಮಯುಸುಶರೀರಶಿ ನಕರ| ಕಮಲಕುಂಭತ್ಕಮಲಶೋಭಿತ|ದಮಿತತನುಗುಣಸಂಗಸನ್ಮಾನಿಪ್ರ ಕಯಭಂಗ ||೧೧೦|| ಎನುತೆನುತಿಮಿಸುವಾತನಂ ಪಾ | ವನನಿರೀಕ್ಷಣವಿ ಮಲಕರುಣಾ | ವನಧಿಯೊಳುತೇಲಿಸುತೆವಾಂಛಿತಪೇನಿಹುದುಕುವರಾ || ಮನಕೆಬಂದುದಬೇಡಲಿತ್ತಪೆ | ನೆನಲುವೈವಾಹೋತ್ಸವಕೆಬಂ | ದನಿಬರಿ ಗೆಧರಣಿಪಗೆತಾವ ಕಪಪವನೀಯುವುದೂ ||೧೧೧|| ಇಂತೆನಲ್ಕೆಲೆವೀರಸಂಗ ಮ ಹಂತಕೋವಿಪವಿನುತನಿರ್ಮ್ಮಲ | ಸ್ವಾಂತಧರಣೀಶನುಮಹಾದುರ್ಭಾ ವಿಯಾದುದರಿಂ || ದಿಂತಿವಗೆಕೈವಲ್ಯವಾವವಿ|ಧಾಂತರದಿಕುಡಬಹುದೆನುತೆ ನಿ | ಸ್ವಾಂತರಂಗದಿತಿಳಿಯುದಾಯಿತೆವನಲುಹರನೊಡನೆ ||೧೧೨|| ಸ್ವಾಮಿ ನೀನಿಂತೆಂಬರೇಈ | ಭೂಮಿಪತಿದೆಗಿಯಿಂದೆಶ್ರೀಯೋ | ಧಾಮವಹತಾ ವಕಪದಾಂಬುಜಗಳನುಸೆರೆಕಂಡೇ || ಸೋಮಧರನಿಮ್ಮಂಕಗಳನುರೆ|ಪ್ರೇ ಮದಿಂಧರಿಸುತಂನಿಮ್ಮನು | ಈಮಹಾತ್ಮನುಕಂಡಕಾರಣದಿಂಪುನೀತನ ಲಾ ||೧೧೩|| ಅದುಕತದಿಕಾರುಣ್ಯದಿಂತ್ವ | ತ್ಪದದೊಳಿರಲಾಜ್ಞಾಪಿಸ ಲುಸಂ | ಮದವೆನುತೆವಿಜ್ಞಾಪಿಸಲುದರಹಸಿತಮುಖನಾಗೀ || ಮದನಮದ ಭಂಜನನುನೃಪನಂ | ಮದುವೆಯುವರಂನೀರಸಂಗಯ| ಸುದತಿಯರಕೊಂ ಡೊಯ್ದುರೌಪ್ಯವಸುಂಧರಾಧರಕೆ || ೧೧೪ || ಸುರನಿಕರವಚ್ಚರಿಯೊಳೀ ಕ್ಷಿಸು | ತಿರಲುತತ್ಕಾರಣದಿಶರಣರ | ಚರಿತವಘಟಿತವಾತ್ಮದೊಳುಗಣನಿ ಸಲುಭೂರಮಣ || ಪರಮಪಾವನನಿಗ್ರಹರುಮೆಂ | ದೊರೆಯುಲಾಬಸವ ಪ್ರಧಾನಗೆ | ಧರಣಿಪತಿಬಿಜ್ಜಳನುಮುಗುಳ್ದಿಂತೆಂದಪೂರ್ವದೊಳೂ||೧೧೫||

ಅಂತು ಸಂದಿ ೩೬ಕ್ಕಂ ಪದ ೨೨೧೯ಕ್ಕಂ ಮಂಗಳಮಸ್ತು



## ಮೂವತ್ತೇಳನೆಯ ಸಂಧಿ.

## ಬೆಟ್ಟದದೇವರಸರ ಕಥೆ.

ಸೂ || ಅರಸಬೆಟ್ಟದದೇವರುಗಳುರು| ತರಪರಾಕ್ರಮವವಿಗೆಬಿಜ್ಜಳ|
ಗೊರೆದುತೋರ್ದಂಸಭೆಯೊಳಗೆಬಸವೇಶನಶಿಮುದದೀ ||

ಪದ || ಮುನ್ನಿನವರಪ್ರಸಂಗಗಳನತು | ಲೋನ್ನತನಿಪೇಳುತ್ತಲಿ ಪ್ಪವುದು | ನಿನ್ನ ಸ್ವಾಭಾವಿಕವಿದೆಂಬುದುಬಲ್ಲೆನದರಿಂದೇ || ನನ್ನಿ ಸಟಿಗಳ ನೇರ್ಸ್ಪಡಿಸಿನಾ| ನೆನ್ನ ಲೇತಕ್ಕೀಗಬಲಸಂ|ಪನ್ನ ರೆನೆಪೆಸರ್ವಡೆದವರ್ಗ್ಗಳತೋ ರ್ಪುದಿರ್ಪುರೊಳು ||೧|| ಅವರದಿವ್ಯಮಹಾತ್ಮ್ಯವಂನೋ | ಡುವೆನೆನುವ ನುಡಿಗಳನುಕೇಳುತೆ | ಭುವನಪತಿಯೊಡನೆಂದಬಸವಾಗ್ರೇಸರನುಮುಗು ಳೀ || ಪ್ರವಿಲಸನ್ಮಹಿಮಾನ್ವಿತರುಶ್ರೀ | ಧವಳರಾರ್ತ್ಕಕಸಿಂಹರುಗಳಂ| ತ ವರಚರಣಕೆರಬ...ವುದೆಂತರುಹಲ್ಕೆಈಗ ||೨|| ಲಾದೊಡೇಂಮುಂ ನ್ನಾದೊಡೇಂನಿಜ | ವಾದವಿಧಿಯುಂತಾವೊಡಂದಿಟ | ವಾದುದೆನುತಂಸನ್ನಿ ಧಾನದಿನಿಂದಿರುತ್ತಿರುವ || ಭೇದವರ್ಜ್ಯನನಾದಿಮೂರ್ತಿಕು | ವಾದಭೇದ ಕಸಾಡುವಂದ್ಯಸ | ದಾದರಣದೀನಾಳಿಚಾಮಚರಿತ್ರನೆನಲೆಸೆವ ||೩|| ಧೀರ ಬೆಟ್ಟದದೇವರಸುಗಳ | ಸಾರತರವಿಕ್ರಮವಭೂಭ | ರ್ತ್ತಾರನಿಗೆತೋರ ಲ್ಕೆಪೆಂಪಿಂದೇವನೀವೀಗಾ || ಧಾರುಣೀಪತಿಯುಸುರಿದುದನುವಿ | ಚಾರ ಮಾಳ್ಪುದುಮಾನಸದಿವಿ| ಸ್ತಾರಮಹಿಮಾಗಾರನಿರುಪಮಶೂರವನೆರೌದ್ರ|| ||೪|| ಮಾನಸದಿಕಾಶ್ಯಪಿಗಗನವಾ | ಧೀನವಾಗಲ್ಪ್ಬಳದುಸಭಿಕವಿ | ತಾನ ತಲ್ಲಣಗೊಳುತಿರಲುಬಸವೇಶನಂನೋಡೀ || ಯೇನನುಜ್ಞೆಯಡಂಬೆನಸು ಮಹ | ದಾನಿಯೇನಕ್ಷತ್ರತತಿಯುಂ | ಭಾನುಮುಖ್ಯಗ್ರಹಂಗಳಂಬಂಧಿ ಸುತೆಸೆಳತರಲೇ ||೫|| ಪೇಳುವುದುಬ್ರಹ್ಮಾದಿಸುರರಸ | ಮೇಳವಂಬೊಂ ಬೆಗಳತೆರದಿಂ | ತೋಳಪಿಡಿದಾಡಿಸಲೆಭೂಸುರತೇಜಸಮಧಿಗತ | ಏಳುತೆ ರದಸಮುದ್ರಗಳನಾಂ | ಮೇಳಯಿಸುತವಸಂತವಾಡಲೆ | ಕಾಲಗಳನಿಭ ಭೂಧರಗಳವಿತತಿಯಪುಡಿಮಾಡ ||೬|| ಲೇನುಮತ್ತೇನಾಣತಿಯೆನು| ತ್ತಾ ನಿರೂಢಪರಾಕ್ರಮದೊಳುಸು | ಧೀನಿಧಾನನೆನಿಪ್ಪಬಸವೇಶ್ವರನಸಂಜ್ಞೆ ಯೊಳಾ || ಕೂನಹಿಡಿದೊಂದದ್ರಿಯನುಕೀ | ಳ್ದಾನಿಜಕರಾಂಗುಷ್ಟನಖ ದಿಂ| ತಾನೆನೆಗಪುತ್ತಂತರಿಕ್ಷಕೆಭರದಿಕಂತುಕದಾ ||೭|| ಖ್ಯಾತಿಯಿಂಬಿಸುಡ ಲ್ಕದನುಕಂ | ಡೋತುಸಂಶಯದಿಂದೆಸಭೆಯೊಳು| ಕೂತವರುನೋಡಲ್ಪ ನೀಪದಿಬಿದ್ದುಪುಡಿಯಾಗೇ || ಭೀತಿಯುಂಪೊಂದುತ್ತೆಬಿಜ್ಜಳ | ಭೂತಲಾ ಧಿಪನಡನಡುಗಿಪ್ಪ | ಖ್ಯಾತಬಲನೆನಲಾರ್ಪಬೆಟ್ಟದದೇವರಸುಗಳನೂ ||೮||

ಸೇರಿದೀನಾಲಾಪದಿಂದಲ । ಪಾರಕ್ರೋಧೋನ್ಮತ್ತಚಿತ್ತನ । ಕ್ರೂರನಕ್ಷ ಮಾಗುಣವಿಹೀನನುಮಾಡಎನ್ನುವನೂ ॥ ಭೂರಿಕರುಣದೊಳಭಯವೀವು ಡು । ಸಾರಶರಣಾಗತಜನಾವನ। ಘೋರವೆನಿಸಿದತ್ರಿಪುರಸಂಹಾರಚಾರುರೂ ಪವಿಡು ॥೯॥ ಶೂರನೆನಿಪಾತಾರಕನವೈ । ದಾರಿಸಿದಸುಕುಮಾರರೂಪವು । ಪಾರಮೇಶ್ವರಭಕ್ತಿದೂರನೆನಿಪ್ಪದಕ್ಷನನು ॥ ಗಾರುಮಾಡಿದವೀರಭದ್ರನ। ಘೋರರೂಪವುಕಮಲಜಶಿರೋ। ಹಾರವೆಸಗಿದಭೈರವಾಕೃತಿಯೆಂದೆನಿಪನಿ ಮ್ಮ ॥೧೦॥ ರೂಪವನುಬಿಡುತಂವೊದಲಿನಂ । ತೇಪರಮಶಾಂತಿಯಧರಿಸಿ ಸುಪ್ರ । ತಾಪಸಜ್ಜನಸೂಚನಾನಂದವನೆಸಗಿಕೃಪೆಯಿಂ ॥ ಪ್ರಾಪಿಸೆನು ತಂನುತಿಸೆಪೂರ್ವಸ್ವ । ರೂಪವಂಧರಿಸುತ್ತೆಸತ್ಪ್ರಾ । ಲಾಪಬಸವಾದ್ಯರಿಗೆ ಮುದವೈದಿಸಿದನತಿಭರದೀ ॥೧೧॥ ವರಸುಗುಣಿಯುಹಪಟ್ಟದರಸರ । ಪರ ಮಚರಿತೆಯುಕೇಳಿಸಮಿಸಿದ । ಪುರುಷರರಿಷಡ್ವರ್ಗ್ಗಮಂಕಳೆದುರುಶುಭೋದ ಯದೀ ॥ ಧರೆಯೊಳೊಪ್ಪುವರಿವರಮಹಿಮ । ಸ್ಫುರಣವಿಂತುಟೆನುತ್ತೆಮು ದದಿಂ । ದೊರೆದನಾಗಳ್ವೀರಭದ್ರನೃಪಾಲಶೇಖರಗೆ ॥೧೨॥

ಅಂತು ಸಂಧಿ ೩೦ಕ್ಕೆ ಪದ ೭೨೯ಕ್ಕಂ ಮಂಗಳಮಸ್ತು

---

## ಮೂವತ್ತೊಂಟನೆಯ ಸಂಧಿ.

### ಗಿಲುಕಿ ಮಾರಯ್ಯನವರ ಕಥೆ.

ಸೂ ॥ ಮಾಯೆಬೊಂಬೆಯಮಾಡಿಕುಣಿಸಲು । ಪಾಯುವೆನಲದನುಳಿದು ಲಿಂಗವ।ನಾಯತದಿಕುಣಿಸಿದನುಗಿಲುಕಿಯನಲುಗಿಸುತೆಮಾರಂ॥

ಪದ ॥ ಕಲಿಮಲಾಪಹವಿಕ್ರಮಾನ್ವಿತ । ಸಲಲಿತಾಮಳಜಂಗಮಸು ಪದ । ನಲಿನಷಟ್ಪದನಮಳಕೀರ್ತ್ತಿವಿರಾಜಿತನುಭಕ್ತಿ॥ ಫಲಿತನೆನಿಸುವಮಾ ರಸೇಖರ । ನಲಘುಚರಿತೆಯನರುಪುವೆನುನಿ । ರ್ಮಲತನುವಿನೊಳುಭಸಿತ ಲೇಪವನತಿಶಯದಿಮಾಡೀ ॥೧॥ ಒಂದುಪಾದದೊಳೆಂದುಗೆಯುಮ । ತ್ತೊಂ ದುಪಾದದಿಜಂಗುಚಲ್ಲಣ । ದಿಂಡಮೇಲ್ಭಾಗದೊಳುಕಾಶಿಯುಬಿಗಿದುಸ್ಫಟ

ಕಮಣಿ ॥ ಯಿಂದಲೊಪ್ಪುವಮಣಿಯುಕಿವಿಯೊಳು । ಸಂದಹಾಲದಕಾಯ ಶಂಖವು । ಬೃಂದಬಂಧುರಮಾಲಿಕೆಗಳುಂಗಳದಿಮೆರೆವುತಿರೆ ॥೨॥ ಯೋಗ ವಟ್ಟೆಯನಾಂತುಗೋಂಧಿಯ । ಭಾಗದೊಳುಪ್ರಾಣೇಶ್ವರನನಾ । ವಾಗಳುಂ ದರಿಸುತ್ತೆಕಾಲ್ಜೋಡಿಯನುನೆರೆಪೊದ್ದು ॥ ಹಾಗೆಕಣ್ಮೊನೆಗಳೊಳುಕಾಡಿ ಗೆ । ಸೋಂಗೆಹುಬ್ಬಿನನಡುವೆಮಿಗೆಸೊಗ । ಸಾಗಿಕಾವಿಯತಿಲಕವಂತಿದ್ದು ತ್ತೆಹೊಕ್ಕುಳಿಡೆ ॥೩॥ ಯುಲಿಯುತಿರ್ಪಘಂಟಿಕರದೊಳು । ಗಿಲಿಕೆಯುಂ ಮತ್ತೊಂದುಕರದೊಳು । ನೆಲಸಿರುವಪುತ್ತಳಿಯಿರಲುಕಲ್ಯಾಣಪಟ್ಟಣದೀ॥ ಅಲಿಕದ್ಯಕ್ಕೂಜಕರಸದ್ಮದ । ನೆಲೆಯೊಳಾಗಿಲಿಕೆಯನುಬಾರಿಸೆ । ನಳನಳಿ ಪಕ್ಕೆಗೊಂಬೆನಟಿಸಲುನೋಳ್ಪವರುಮೆಚ್ಚೆ ॥ ೪ ॥ ಈವಕಾಂಚನಮಣಿಗ ಣಾಂಬರ । ಭೂವಿಹಿತವಸ್ತುಗಳಸದ್ಮ । ಕ್ಕೋವುತಂತಾಂಕೊಂಡುಬಂದು ಮಹೇಶ್ವರಾರ್ಚನೆಯಂ ॥ ಪಾವನಾತ್ಮಂವಿದಿತದಿಂಮಾ । ಳ್ಪಾವಿಧವನಲ್ಲಲ್ಲಿ ಜನರುಪ್ಪ । ಭಾವದಿಂದಾಡುತ್ತಲಿರೆಕೇಳುತೆಗಣಾಚಾರಿ ॥೫॥ ಸಂಗಯನು ಮೆಂದೆಂಬಜಂಗಮ । ಪುಂಗವಂನಿಜಕೋಪವದುಸ । ರ್ವಾಂಗದೊಳುಕಿ ಸ್ಫುರಿಸುತಿರಲಾಮಾರಯನಕರಸೀ ॥ ಹೀಂಗೆಮಾಯಾಬೊಂಬೆಯನುಶಿವ ಲಿಂಗವಂತರುಪಿಡಿದುನಟಿಯಿಪು । ನುಂಗುಣವೆಧಾರ್ಮಿಕರಮನೆಯಾದಾಯ ವಂತಂದೂ ॥೬॥ ನೆರವಿಗಣತತಿಯಂಸಮರ್ಚಿ । ಪರನೆನಿಸಲಿನ್ನೊಂದು ಕಾಯಕ । ವಿರದೆಈಪರಿಮಾಡುತಿರ್ಪುದುವಿಧಿಯೆಪೇಳಯ್ಯ ॥ ಧರಣಿಯೊ ಳುಸದ್ಭಕ್ತಕೋಟಿಗೆ । ತರವೆಮಾಯೆಯನಾಡಿತೋರ್ಪುದು । ಹರಸಮಾ ಹಿತಪಥರುಭುವನದಿಶರಣರುಗಳೆಲ್ಲ॥೭॥ ಇಷ್ಟಲಿಂಗವಿನೋದವನುಸುಶ್ರೀ ಷ್ಟದಿಂಮಾಡಿದರುಇತರನಿ।ಕೃಷ್ಟತರವಹಕಾರ್ಯವೆಂಮತ್ತಾವಸಮಯದೊ ಳ್ಪ ॥ ನಿಷ್ಠೆವಂತರುಮಾಡಿದರುಕರ । ಕಷ್ಟವೆನಿಸುವನಿನ್ನಕೃತ್ಯವು । ಸ್ಪ ಷ್ಟವೆನಲುಸುರುವೆನುನಿಂದಿಪರಖಿಳಜನರುಗಳೂ ॥೮॥ ಗಡಿಗೆಮಾಡುವರವ ದಿಕುಂಬರ । ಕೊಡೆಯ ಚಂಡಾರಾಧ್ಯನೆಪ್ಪಳಿ । ಯಿಡುತೆಚಾರನುಚಕ್ರವ ರ್ತಿಯುಮೃಡನಕುಣಿಸಿದರೂ ॥ ಒಡನೆಮಾಯೆಯಕುಣಿಸುತಿರ್ಪುದ । ನು ಡುಪಖಂಡಕಪರ್ಧಿಶರಣರು । ತಡೆಯಬೇಕೆಂದೆನಲುಮಾರನುನಮಿಸಿವಿನಯ ದಸ ॥೯॥ ಭರಿತನಾಗಿಂತೆಂದಸಂಗಯ । ಗುರುವೆನಿಮ್ಮನುಮತಿಪ್ರಕಾರದಿ।

ಚರಿಸುವೆನುನಿರುತಂನಿಜಕರದಿಬೊಂಬೆಯುಂಪಿಡಿಯ ॥ ದಿರುವೆನೆನುತಂಪ್ಪ
ನೆನೆಬಂದಾ । ಶರಣನೆಂದಿನತೆರದಿಕಾಯಿಕ। ಪರಸನಿಸಿಯೋರುವಗಣಾಧೀ
ಶ್ವರನನುಂದಿರಕೆ ॥೧೦॥ ಪೋಗಿಯಲಿಕತಲಸ್ಥಲಿಂಗವ। ನಾಗನೈಜಕರದೊ
ಳುನಿಲ್ಲಿಸಿ । ಬೇಗದಿಂದರಿದೆನಿಪಗಿಲಿಕೆಯನೊಂದುಕರದಿಂದೆ ॥ ಬಾಗಿಬಾರಿ
ಸುತಿರಲುಸುಸ್ಮಿತ । ಸಾಗಿಹಸ್ತಕುಶೇಶಯಾಕಲಿ । ತಾಗಣಿತಶಿವಲಿಂಗರೂ
ಪವದಾಗಷಟ್ಟರಣ ॥೧೧॥ ವೆಂತುನಟಿಪುದದರತೆರದೊಳುಮ । ಹಂತಕ್ರ
ಣಿಸುತ್ತಿರ್ಪವಿಧಕೆಯ । ಸಂತಮನುಜರುಸ್ವಾಂತದೊಳಗತಿಸಂತಸವತಾ
ಳೀ ॥ ಕುಂತುನಿಂತರುಗಳಶಿರೋವ।ಕ್ಷಾಂತಕಕ್ಷಕರಪ್ರದೇಶಯು । ತಾಂತ
ಕಾಂತಕಲಿಂಗಗಳುಪ್ರಥಿತಾನುಪಮಸ್ವರ್ಗಾ ॥೧೨॥ ಪೇಟಿಕಾವಿನಿಯುಕ್ತ
ಲಿಂಗದ । ಕೋಟಿಸ್ಥಾವರಲಿಂಗಗಳುಪ । ರ್ಯಾಟನವಮಾಳ್ಪಾವಸರದೊ
ಳುಭಾವವದ್ಭುತದೋಳ್ ॥ ಕೂಟವಾಗಲ್ಕೋಯನುತೆಗಣ । ಮೇಟಭ
ಕ್ತೋತ್ತಮರುಗಳುಪರಿ । ಪಾಟಿಯಾಗಲ್ಧರಿಸಿರುವವಸ್ತ್ರಾಂತಚೌಕದೊ
ಳೂ ॥೧೩॥ ಧರಿಸಿರುವಲಿಂಗಗಳುಕುಣಿಯು।ತ್ತಿರಲಿದರಕಾರಣವದೇನೋ।
ಅರಿಯಬಾರದೆನುತ್ತೆಬಸವಾಮಾತ್ಯನಿದ್ದೆಡೆಗೆ ॥ ಭರದೊಳೈತಂದಾವಿಧಾನ
ವ । ನಿರವಿಸುವುದಕೆಮೊದಲೊಳೀನಿಜ । ಕರಕಮಲಶಿವಲಿಂಗವದರಂತಾಗಿ
ರಲ್ಮನದೀ ॥೧೪॥ ಕೌತುಕವದಾಕ್ರಮಿಸೆಶೈವ । ವ್ರಾತದ್ವಿಜಸಂಘಾತಸ್ಥಾ
ಪ್ಯಸ । ಮೇತಪೇಟೀಲಿಂಗಸಂತತಿನಾಟ್ಯವಾಡುತಿರೆ ॥ ಭೀತಿಯಿಂಬಂದರೆ
ಪೆಪರಿಶೀ । ಲಾತುರನುಮಾಗಿರ್ಪಸಮಯದೊ । ಳೈತರುತೆಫಣಿಹಾರಿಯೈ
ಶ್ವಂನಿಂಡುನಮಿಸುತ್ತೆ ॥೧೫॥ ಬಿನ್ನಪವಚಿತ್ತೈಸುಮಂತ್ರಿಸು । ಮಾನು
ನಮ್ಮಪುರಾಂತರದೊಳತು । ಳೋನ್ನತಿಕವೈಚಿತ್ರ್ಯವೊಂದಂನಿಜದಿನೋ
ಡುತ್ತೆ ॥ ಇನ್ನುತಿಳಿಸಲ್ಬಂದೆನೀಗಪ್ರ । ಸನ್ನಚಿತ್ತದೊಳಾಲಿಪುದುಸ । ಧ
ನ್ಯಗಿಲಕಿಯುಮಾರಶೇಖರನೆಂಬಸದ್ಭಕ್ತಿ ॥೧೬॥ ಸತ್ತಮನುಬೊಂಬೆಯನು
ಕುಣಿಸಿದ; ವೃತ್ತಿಯಿಂಲಭಿಸಿದಪದಾರ್ಥದಿ । ಹೊತ್ತಿನೊಳುಗಣತೃಪ್ತಿಗೈ
ಯುವನೇವದಿಂದಿರಲೂ ॥ ಉತ್ತಮನುಮೆನಿಸಿಸ್ಸಸಂಗಯ । ಹತ್ತಿರಕೆಕ
ರಸುತ್ತಲಿಂತಹ । ಕೃತ್ಯಬಳಿತೇನಯ್ಯುಎನಲಾಬೊಂಬೆಯುಂಬಿಟ್ಟು ॥೧೭॥
ಲಿಂಗದೇವರಕುಣಿಸಿದನುಭ । ಕ್ತಾಂಗಣದಿಮಾರಯ್ಯನಂತಹ । ಲಿಂಗವಂ

ತನೊಮುದನಮುದದುರ್ಭಂಗತಾನಾಗೀ ॥ ಹ್ಯಾಂಗೆಕುಣಿಸುದಪೇಳುತಿಹರೊ ಪ್ರ । ಸಂಗಮುಂಪೂರ್ವದೊಳಗರಿದೆವು । ಮಂಗಳಾತ್ಮಕಬಸವದಂಡಾಧೀ ಶ್ವರನೆಎನಲೂ ॥೧೪॥ ಕೇಳುತೊಡನೆಪ್ರಮೋದಮಾನಸ । ಶೀಲಶಿವಗಣಸ ಹಿತಸಂಗಮು । ನಾಲಯಕೆನಡೆತಂದುನಮಿಸಲುಲಿಂಗನರ್ತನಕೆ ॥ ಮೂಲ ವೆನಿಸಿದಸಂಗಯಂ ಕರುಣಾಲವಾಲನೆನಿಪ್ಪಬಸವಗೆ । ನೀಲಗಳಭಕ್ತಾಳಿಸ ದಗಳಿಗೆರಗಲಾಬಳಿಕ ॥೧೯॥ ಬಸವರಾಜನುಸಂಗಮೇಶನ । ವಿಶಯನಿಟ್ಟಿಸಿ ನುಡಿದಮುದದಿಂ । ದಸಮದೃಗನೆನಲಾರ್ಪಗಿಲಕಿಯಮಾರಶೇಖರನಾ ॥ ಹ ಸನವಾಗಲ್ಬೋಧಿಸುವುದೈ । ಯಸದೃಶನೆಎಲ್ಲವರುಗಳಕರು । ಣಿಸಲಹು ದುಶಿವಲಿಂಗಮೂರುತಿಗಳುಕುಣಿವುತಿರಲೂ ॥೨೦॥ ಮೋಸವಾದುದುಭಾವು ಪರಮೋ । ಲ್ಲಾಸಚಾರುಚರಿತನಗಣನಿಸ । ಲೇಂಸಮರ್ಥಕಶೇಷವಾಗೀಶ ಬೃಹಸ್ಪತಿಗಳ್ ॥ ಈಸಮಸ್ತರುನೋಡೆಮಾಯೆಯ । ನೋಸರಿಸದೋ ಲ್ಕುಣಿಸಿಪರಮವಿ । ಲಾಸದಿಂಮರ್ಕಟದವೋಲ್ತಿರುಗಿಸುತೆಪ್ರಕೃತಿಯನು॥ ॥೨೧॥ ಅವರಪಾದವಯೋಜಗಳನುರೆ । ಸುವಿನಯದಿಸೇವಿಸುವೆತೆರದಿಂ।ದ ವೆಸ್ರವರ್ತನೆಸ್ಮೆಯ್ಯುತಿಹುದಂಸಂಗಯನೆತಿಳಿಯು ॥ ದವನಪರತರಶೌರ್ಯಕ ಲನೋ । ತ್ಸವದೊಳಿದನುವುನರ್ಹವೆಂದೆಂ । ಬುವುದುವಿಹಿತವೆಧೀಯುತ ದೊಳನ್ನಾ ಡೊಡಂಪೂರ್ವ ॥ ೨೨ ॥ ಹದನದಿಂಚರಿಯಿಸಲುಪೇಳ್ವೆ । ಸದ ಯುಭಾವದೊಳೆನಲುಲಜ್ಜಾ । ಹೃದಯನಾಗಳ್ನಮಿಸಿಬಸವಾಮಾತ್ಯಶೇ ಖರನೀ ॥ ಸದಮಳದಶಿವಭಕ್ತರಿಗೆಸ । ಲ್ಲದುದೆನಲ್ಭಾವಿಸುತೆನಾನಂ। ತ ದನರುಹಲಾತೆರದೆಲಿಂಗವಕುಣಿಸಲಿಂತಾಗೆ ॥೨೩॥ ಹೆದರಿದೆನುಮುನ್ನಿಸಿರೆನು ತಲಾ । ಸದಮಳಾತ್ಮಂನುಡಿದುಮುತ್ತಾ । ಹದನದಿಂಲಿಂಗನಕುಣಿಪಮಾರ ಯ್ಯಗಳಕರಸೀ ॥ ಮದನರಿಪುಭಕ್ತಸುಕಲಾಪನೆ । ಮುದದಿನಿತ್ತಾತ್ಮೇಶ್ವ ರನಕುಣಿ । ಪುದನುಮಾಣಿಸೆನಲ್ಕೆಮುಗುಳಿಂತೆಂದಮಾರಯ್ಯ ॥೨೪॥ ಹೇಗು ರೂತ್ತಮರುಗಳೆಪೂರ್ವದ । ಯೋಗವೊಳಿತಲ್ಲೆನಲುಬಿಟ್ಟೆನು। ಈಗಲಿವನು ಳಿದೆಂತುಜಂಗಮಲಿಂಗವರ್ಚಿಸಲಿ । ಜೇಗನಪ್ಪಣೆಗುಡದಿರಲುಹೊ।ತ್ತಾಗು ವುದುಸಿಯುಮುಕೆವಿರುದ್ಧವ । ದಾಗದಂತೆಯನುಗ್ರಹಿಸಿರೆಂದೆನುವನುಡಿಗಳ ನೂ ॥೨೫॥ ಬಸವರಾಜಂಕೇಳಿಹಸಿತೋ । ಲ್ಲಸನದಿಂದೀಶರಣರಿಗೆಸಿರ । ವಿ

ಸುವುದೊಂದನುಕೂಲಬುದ್ಧಿ ಚರಾಳಿಯರ್ಚನವ್ರೂ ॥ ಮಿಸುಕದಂಡದೊ
ಳೆಂಬುದನುಕೇ । ಳಿಸಿದಮಾತ್ರವೆಭೀತಿಯಿಂಕಂ । ಪಿಸುತೆಸಂಗಯವೂ
ತಂದೆಗಳೊಡನೆನೀಂಪೂರ್ವ ॥೨೬॥ ಹದನದಿಂ ಚೆರಿಸೆನಲುನೃಜಶಿ । ರದೊಳು
ತದ್ವಾಕ್ಯಂಗಳಂತಾ । ಳಿದಬಳಿಕಲಿವರುಗಳಪದಗಳಿಗೆರಗಿಮುನ್ನಿರ್ದ ॥ ಪ
ದದೊಳಗೆಬೊಂಬೆಯನುಪಿಡಿದಿ । ರ್ದುದುಮತವದೆನ್ನುತ ಲತಿಶಯ। ಮು
ದದಿನಟಿಸಿದನ್ರೈಜವೃತ್ತಿಯನೆಂತುಪೊಗಳುವೆನು ॥೨೭॥ ಅಲಘುಸನ್ಮಹಿಮಾ
ನ್ವಿತನ । ತುಲಿತಚಾರುಚರಿತ್ರವಂತಹ । ದಿಳೆಯೊಡೆಯಶ್ರೀವೀರಭದ್ರ
ಕೃಪಾರಸಸಮುದ್ರ ॥ ಬಳಿಕಶಿವಲಿಂಗಗಳುಕುಣಿವುದ । ನುಳಿದುನಿಂದವುಕೇ
ಳುನಿಜಹೃ । ನ್ನಳಿನದೊಳುಬಸವೇಶ್ವರಾದಿಕಭಕ್ತಪುಂಗವರೂ ॥೨೮॥ ಈ
ಮಹಾತ್ಮನಪೊಗಳುತಂನಿಜ । ಧಾಮವೈದಿದರದುಕತದೊಳತಿ । ಪ್ರೇಮ
ದಿಂದೀತನಚರಿತ್ರೆಯನೋದಿಕೇಳಿದಪೇ ॥ ಭೂಮಿಯೊಳುಸಜ್ಜನರುಸಂ
ಸೃತಿ । ಭ್ರಾಮಕವನುಳಿದುಗುರುಕರುಣೋ । ದ್ದಾಮದಿಂಕೈವಲ್ಯಮಂ
ಸುಖದಿಂದೆಪಡೆಯುವರೂ ॥೨೯॥

ಅಂತು ಸಂಧಿ ೩೮ಕ್ಕಂ ಪದ ೨೫೩೭ಕ್ಕಂ ಮಂಗಳಮಸ್ತು.

---

## ಮೂವತ್ತೊಂಭತ್ತನೆಯ ಸಂಧಿ.

## ಉರುಲಿಂಗಪೆದ್ದಯ್ಯನವರ ಕಥೆ.

ಸೂ॥ ಸಿದ್ಧನಹಉರುಲಿಂಗದೇವನು। ಬುದ್ಧಿಯಾಪೆದ್ದಯ್ಯನರಸನನು
ದ್ಧರಿಸಿನಿರ್ಜಲದಕೂಪದಿನೀರ್ಗಳಂತೆಗೆದಂ ॥

ಪದ ॥ ಅಂತುಮಲ್ಲದೆಪರಮಪದವಿ । ಶ್ರಾಂತಶಾಂತಗುಣಾನ್ವಿತನು
ಸಿ । ಶ್ಚಿಂತನೀಯುರುಲಿಂಗಪೆದ್ದಿಮಹಂತನಚರಿತೆಯುಂ ॥ ಎಂತುಪೇಳ್ವೆ
ದುಶ್ರೀಗುರುವಿನ। ತ್ಯಂತಸುಕೃಪಾವಶದಿಗೌರೀ। ಕಾಂತಮಂತ್ರಕಳಾರ
ಪನಿಯುತನೆನಿಪನಿರತಂ ।೧॥ ತನ್ನನಾಶ್ರಯಿಸಿಹರ ರಕ್ಷಿಪ। ಧನ್ಯಸುವಿ
ಧಾನಾಸ್ಪದೀಯುಮ। ಪೊನ್ನತೇಷ್ಟಮಹೇಶಪೂಜಾಯುತಪ್ರವರ್ತಕನು॥

ಅನ್ಯಮಾರ್ಗ್ಗವಿದೂರಸುಕೃತಂ । ನನ್ನಿಗುರುಕೃಪೆಎಂದುಪ್ರಕಟಿಸಿ । ಮಾ ನ್ಯನೀತಂವೋಗುಲೂರೊಳುನಿಂದುವೊಂದುದಿನಂ ॥೨॥ ವಿತತಕಾಸಾರಾಂ ತರಸ್ಥೋ । ರ್ಜಿತಕಮಲಮಕರಂದಪಾನಾ । ತತಜಠರಷಟ್ಚರಣಮೇಚಕ ಕಕಾಂತಿಕೈತವವಿ ॥ ಶ್ರುತಶುಕಾವಳಿರವಪಿಕಸ್ವರ । ಯುತಸುಕೇಕೀನಾ ದಕೂಜಸಂ । ಯುತಸಿಕತತದೇಳದೊಳಗೊಂದೆಡೆಯಲ್ಲಿಕಡುಮುದದೀ ॥೩॥ ಕಲಿತಪದ್ಮಾಸೀನನಾಗುತೆ । ಯಲಿಕತಲವೀಕ್ಷಿಸಿಜಪವಮಾ। ಶ್ಚಲಘುಜಂ ಸಘುಸಾರ್ವಭೌಮನುಧೀರನುರುಲಿಂಗ ॥ ವಿಲಸಿತಾಖ್ಯನುದಿವ್ಯಪುರುಷನ। ನಿಲವನೇಕಂಡೆರಗಿಸನ್ನಿಧಿ । ಯಲಿವಿನಮ್ರತೆಯಿಂದಿರುವಸಮಯದೊಳು ನೀಲಗಳಾ ॥೪॥ ಪರಸುವಿಗ್ರಹನೆನಿಪಮಹಿಮಾ। ಕರನುಮೌನವನೀಗಿಕಂ ಸಳ । ತೆರೆದುನೋಳ್ಪನಿತರೊಳುಮುಗುಳೆರಗುತ್ತಹಿರಿಕುಲದ ॥ ನರನುಪೆ ಟ್ಟಿಗನೆಂಬವಂದು । ರ್ಧರನನೆನ್ನಂಶಿಷ್ಯನಂನೀಂ । ವಿರಚಿಸಿಕೊಳುತೆಧನ್ಯ ಭಾಗಲ್ಕರುಣಿಪುದುಜನನೀ ॥೫॥ ಜನಕದಾತನುಪರಮದೈವವು । ಘನ ಗುರೂತ್ತಮನೀನೆಗತಿಮತಿ । ಯೆನುತೆನಂಬಿಯೆನಿನ್ನ ಸೇರಿದೆನಾನುಕಾರು ಣ್ಯ ॥ ವನುಕರಿಸಿನಿಟ್ಟಸುವುದೈತನು । ಜನಶರಣ್ಯನೆನಲ್ಕೆಯಾತನ। ವಿನ ಯವಿಧಿಗತಿಹೀನನಿವನಿಗದೆಂತುಕುಡಬಹುದೂ ॥೬॥ ವರಮನುಪ್ರಭುಲಿಂ ಗಗಳನೆಂ । ದರಿದುಶಂಕಾಯುತಹೃದಯನರ । ಸಿರುಹನಾಗುತ್ತೊಂದುಕ್ಷ ಣವಾತನಪೆಸರ್ಗ್ಗೊಳದೇ ॥ ಇರುತೆಮಗುಳಿಂತೆಂದನಿನ್ನನು । ಪುರದೊಳಾ ನೆಂದಾದೊಡೆಯುಕಂ। ಡಿರುವೆನೇನಡೆನುಡಿಗಡಣವೆಂತಿಹುದೊಕಾಣೆನಲಾ॥ ॥೭॥ ಎನಲುಪೆದ್ದಿಗನೆಂದನಿಲ್ಲೀ । ಯುನಿಶಮುಂನಾನಿರುವೆಪೇಳುವ । ಘನ ತೆಯೇನುಕೃಪಾವಲೋಕನಗೈದಮಾತ್ರದೊಳೇ ॥ ನಿನಗೆತಿಳಿಯಲ್ಬರ್ಪುದ ಯ್ಯಾ । ಎನುತೆಪಾದಕ್ಕೆರಗಲೆಂದನು । ದಿನವನೇಕಾಬ್ದಗಳುಗುರುಶಿಶ್ರೂ ಷೆಯುಂಮಾಡೇ ॥೮॥ ಕಯ್ಯಸಾಪುತ್ತಿಹುದುವಾಂಛಿತ। ವಯ್ಯಎನೆಸಮ್ಮತಿ ಸುತಂಮ । ಜ್ಜೀಯನಿಮ್ಮಾಣತಿವಿಡಿದುನಡೆಯುವೆನೆನಲುದ್ವಿಪದಶ॥ ಹಾಯ ನಂಗಳುನೈಜಭಕ್ತಿನ । ಹಾಯವಾಗಲುಭೂತಿರುದ್ರಾ । ಕ್ಷಾಯತನುಮಾ ಗುತ್ತೆಭೂತೇಶ್ವರನಸದ್ಭಕ್ತ॥೯॥ ದರುಶನವದಾಗಲ್ಕೆನಮಿಸು । ತ್ತಿರುವ ಘನಲ್ಪದರಂತೆನಂಬಿಯ । ವರಚರಣಸಾನ್ನಿಧ್ಯದೇಶವಿಮುಯ್ಯನಿಕ್ಕಮುಹಾ॥.

ಗುರುವರೇಣ್ಯಪ್ರಸಾದವೆನ್ನು । ತ್ತಿರಲನುದಿನಂಬೋಧಿಸಿದುದಂ । ಮರೆಯು
ದಂದವೆಚರಿಸುತಂಕಾಷ್ಟ್ಯಗಳಹೊರೆಗಳನೂ ॥೧೦॥ ತಂದುಕಡುಸಡಗರದೆ
ಭಕ್ತರ । ಮಂದಿರಕೆಹಾಯ್ಕುತ್ತೆಗುರುವಿಗ । ಮುಂದಭಕ್ತಿಯೊಳಿರಗುತಂ
ಪನ್ನೆರಡುಬರಿಸಗಳಂ ॥ ಸಂದಿಸುತ್ತಿರೆಶ್ರೀಗುರುವಬಾ । ಲೇಂದುಶೇಖರ
ನಂತೆಭಾವಿಸಿ । ನಿಂದುಬಾಗಿಲಕಾಯ್ದುಕೊಂಡಿರೆಮುಂದೆಯಾತನಿಗೇ॥೧೧॥
ಪರಮಗುರುಕಾರುಣ್ಯನೆಂಬುದು । ಭರಸಿಫಲಿತವದಾಗಿರಲುನುಂ । ದಿರದ
ನೈರುತಿದಿಶೆಗೆಗಮಿಸುತೆಮಲವಿವೋಚನವಂ ॥ ಪರಿಪಿಡಿದುಗೈಯುತ್ತೆಶೌ
ಚವ । ವರಜಲದೊಳುಸ್ನಾನವೆಸಗುತೆ । ಉರುಭಸಿತರುದ್ರಾಕ್ಷಭೂಷಿತ
ಸಾಗಿಕಾರಣಸ ॥೧೨॥ ಜ್ಞನುಮನಖಿಲಾಗಮವಿಧಿಜ್ಞನು । ಮೆನಿಪಗುರುವ
ರನಂಗಣದಿಚರಿ । ಪನಿತರೊಳೆನಿದ್ರೆಯನುತಿಳಿದಾಘನಮಹಿಮಶಿವನಾ॥ ನೆನ
ವುತಿಹಸಮಯದೊಳುಪೆದ್ದಯ । ನೆನಿಸುವಾತಂಸಂಚರಿಪರವ । ವನುಕಿವಿ
ಯೊಳಗೆಕೇಳಿಪಶುಮೃಗನಿಕರವೆಂಪೆನುತೇ ॥ ೧೩ ॥ ವಾಸಿಯೆನುತಂಬೇಸ
ರದಿನಿ । ರ್ದೇಶಿಸುತ್ತುರುಲಿಂಗನೆಂಬಮ । ಹೇಶನುಚುರಲ್ಪೆದ್ದಯುನುವಿೂ
ವಾಸರದೊಳೆನಗೇ ॥ ಲೇಸೆನಿಸಗುರುಕುಲತಿಲಕನುಪ । ದೇಶವಾದುದೆನ್ನು
ತ್ತೆಪರಮೋ । ಲ್ಲಾಸದಿಂನೈಜಾತ್ಮದೊಳುನಂಬಿರುತಸಂತಸದೀ ॥ ೧೪ ॥
ಕಂಡೆನುರುಸಂಪದವಗುರುಪದ । ಪುಂಡರೀಕಸುಭಕ್ತಿಯೆಂಬುವ । ಖಂಡ
ಭಾಗ್ಯಮಹಾನಿಧಿಯನುರೆವೋಕ್ಷಸಂಪದವಂ ॥ ಕಂಡೆಜ್ಞಾನದಬಯಕೆಗ
ಳನೊಳ । ಕೊಂಡುದೀಸನ್ಮಂತ್ರದಿಂದೆಪ್ರ । ಚಂಡತೇಜವುಪ್ರಾಪ್ತಿಸಿತು
ಬಪುಕಿದೆನುದೇಶಿಕನಾ ॥೧೫॥ ಘನಮಹಿಮೆಯಿಂದೆನುತೆಸನ್ನುತಿ । ಯನು
ನಯದಿಮಾಳ್ಪವಸರದಿಸಾ। ವನಗುರುವರಂಬಂದುನಿಂದಿರಲಧಿಕಭಕ್ತಿಯೊ
ಳು ॥ ವಿನಮಿಸುತಲಮೃತಪ್ರದಾಯಕ । ವೆನಿಪಮಂತ್ರಾರ್ಥವದುಪ್ರಾಪ್ತಿ
ಸಿ । ತನಘತಾವಕಕರುಣದಿಂದೆನೆಮನದಿನಿಬ್ಬೆರಗು ॥೧೬॥ ತೋರೆವಾಶಿಯೆ
ನುತ್ತೆನುಡಿದುನು । ಹಾರಯುವಿಹೆದರಿಸಿರುವಕ್ಷರ । ಸಾರವನುವೆನಿ
ಸಿತ್ತಿವನಿಗೀಸಮಯದೊಳುತಿರುವೀ॥ ಬೇರೆಪುನರುಚ್ಚರಿಸೆಮಂತ್ರವಿ। ಚಾ
ರದಿಂದಾಯಿತುತದಕ್ಷರ । ಧೀರತೆಯುಪ್ರಾಪ್ತಿಸಿದಕತದಿಂದೇಪರಮಶಿವ
ನೂ ॥೧೭॥ ಈವಿಧಘಟಿಸಂಘಟಿಸಿದನುಮೆನು । ತೇವಿಶೇಷವಮುದನ್ವಿತದಿಸ ।

ದ್ಭುವಿಸೆದ್ದಯನೀಂಕೃತಾರ್ಥನುವಾದೆನಿಜವೆನಲೂ ॥ ಸಾವಧಾನದಿನಮಿ
ಸಿಸ್ತೋಸುತೆ । ಕೇವಲಾನಂದದಿನುತಿಸುತಂ । ಕೋವಿದನುತನುಉಬ್ಬಿಕು
ಣಿವುತಲಿರ್ಪ್ಪುಗುಮವರನ ॥೧೯॥ ಭೂರಿಕರುಣದಿಮಂತ್ರಸಿದ್ಧಿಯ । ಪೂರ
ವೈದಿದಕಾರಣದೆ ೞಲೀ। ಧಾರುಣೀತಲವಿಂದೆಮೇಲ್ಗೇಣಿನೊಳುನಡೆಯುತ್ತೆ॥
ಧೀರತೆಯುಪೆದ್ದವ್ಯಗಳುಸಂ । ಚಾರನಾಡುತ್ತಿರ್ಪನಿತರೊಳು । ಭೂರ
ಮಣಸಿರುತಿರ್ಪವುಷ್ಪಣವೆೞಕತಿಮುದದಿಂದೇ ॥೧೯॥ ಬಂದುಕೂಪವನಗು
ಳಿಸಲುಬೇ । ಕೆಂದುಬನನವಮಾಡುವರನೀ । ನಿಂದೆಕರಸೆನುತಪ್ಪಣೆಯನಿ
ಪಲವನರಿದವನಾತ್ಯ ॥ ಚಂದಿರನುಚಾರರಿಗೆತಿಳುಹಲು । ದಂದುಗವಗೈವವ
ರುನಿಜಬಲ । ದಿಂಬೆಯುಗುಳಿದೊಡಿಲ್ಲಜಲವದುಬಿಂದುವಾದೊಡೆಯು ॥ ೨೦ ॥
ಉದಯಿಸದಕಾಠಿಣ್ಯಶಿಲೆಯಾ । ಹದನವರಿಯುಲ್ಪರವಿದಂತಿರೆ । ಮಿದಕು
ಪಾಯವನೆಂತುಮಾಡಲ್ಬೇಕೆನುತೆಚಿಂತೆ॥ ಹೃದಯದೊಳುತುಂಬಿರಲುನವ
ಸಿ । ಲ್ಪದಜನರುಗಳನಿಯಮಿಸಲುಸಾಂ । ಪ್ರದದಿತಮ್ಮಿಂದಾಪನಿತುಸಿಲೆಗೆ
ಳನುಸೀಳಲ್ಕೆ ॥೨೧॥ ಸಂದುಗೊಡದಿರಲವರುಯೋಚನೆ । ಯಿಂದೆಭೂರಮ
ಣಂಗೆತಿಳುಹಲು । ದಂದುಗವಿದೆಂತಾಯ್ತೆನುತೆಮನಸಿನೊಳುಬೇರೊಂದು॥
ಹೊಂದಿಕೆಯುತೋರದೆಸಚಿವನೊಡ । ನೆಂದನಿನ್ನೊಳುತೋರ್ಪುದೆಂತಿದ ।
ಮಂದಶಿಲೆಯುಮುದಾವಗತಿಯಿಂಕಳೆದುಜಲವಹುದೂ ॥೨೨॥ ನಮಗೆತಿಳಿ
ಯಲ್ಬಾರದೀಕೂ । ಪಮನುಬಳಸುವಬಗೆಯನೂಹಿಸು । ಸುಮತಿಯೆಎ
ನಲಾತನುನಮಿಸಿಭೂಮಿಪನೆಯೊಂದು ॥ ಕ್ರಮುವ್ರತೋರಿಕೆಯಾದುದ್ಧೆಂತೆ
ನೆ। ಅಮಿತವೈಭವೆಯುತಭವತ್ಪುರ । ವಿಮಳದೇಶದೊಳಿರುತಿರುವಖಲಜ
ನರಸಂದೋಹ ॥ ೨೩ ॥ ವೀಮಹಾಕೂಪದೊಳಗಿರುತಿಹ । ಭೀಮಶಿ
ಲೆಯುಪರಿಯೊಳುಪದಗಳ । ನೇಮದಿಂದಿಡಲಿದರೊಳಗೆಪಾವನಜಲವುಮೂ
ಡಿ ॥ ಕ್ಷೇಮವಪ್ಪುದಿದುವಿಹಿತವೆನು । ತೇಮನಕೆಒಪ್ಪಿದೊಡೆವಾಡಿಸು ।
ಧೀಮತನೆಎನಲೊಡನೆಪರಿಜನಸ್ತೋಮವಂನೋಡೀ ॥೨೪॥ ಪುರದೊಳಾ
ರೈದುಪ್ರಸಿದ್ಧ । ಸ್ಫುರಣರಾಗಿರುತಿಹಹಿರಿಯರನು । ಮರೆಯದೆಲ್ಲಾಜನರು
ಗಳನೀಸ್ಥಲಕೆಕರತರಲೂ ॥ ಭರದಿಪೋಗಿರೆನಲ್ಕೆಯವರುಗ । ಳಿರದೆಈಪ್ಪ
ತ್ತಾಂತವನುಂಪಾ । ಠರಿಗರುಹಿಬರುವುದನೊರೆಯೆಮಿಗೆಕೇಳಿತತ್ಕ್ಷಣವೇ

||೭೫|| ಸಕಲಮನುಜನಿಕರವುಕೇಳುತೆ। ಸುಕರವಪ್ಪಾವಾಸದಿಂತೆರ । ಳಕ
ಘುತವಕದಿಬರಲುಸಿಂಹಾಸನವಿಳಿದುನಮಿಸೀ ॥ ವಿಕಳತೆಯುನೀಗುತ್ತೆನರ
ನಾ । ಯಕನುಹರ್ಷಸ್ವಾಂತಯುತನಾ । ಗಿಕುಡುಕುವಸಮಯದೊಳು
ಚಾರನುಬಂದುಧರಣಿಪನಾ ||೭೬|| ಕಂಪುಚಿತ್ತೈಸುವುದುಶ್ವಪಚರ । ತಂ
ಡದೊಳಗೋರುವನಿಹಂಭೊ । ಮಂಡಲಕೆಗೇಣ್ಮೇಲೆಚರಿಸುತೆನಡೆವಪಥ
ವಂಚೆ ॥ ಸ್ಮಂಡನನುತನ್ಮಹಿಮೆಯರಿಯುವ । ಪಂಡಿತಂಮತ್ತಾವನಿಹನು
ದ್ವಂಡಭಕ್ತಿಹಿತಾರ್ಥನಡುಕತದಿಂದೆಯವನಿಂದೇ ||೭೭|| ಅಪ್ಪುವದುಎಂಡೆ
ನುತಲೂಹಿಸು । ಶಿಪ್ಪುದೆನ್ನಯಮಾನಸದೊಳಗೆ । ತಪ್ಪಲರಿದೆನಲುದಕವಿ
ಪದೊಳುಬಪ್ಪುದೆನೆಕೇಳಿ॥ ಒಪ್ಪಿಕರತರಪೇಳೆನೃಪವರ। ನಿಪ್ಪಸ್ಥಾನಕೆಪೆದ್ದ
ಯಾಖ್ಯನೆ। ನಿಪ್ಪವನಕರೆಯಲ್ಕೆಬಂದುತದೀಯಮಹಿಮೆಯನು||೭೮|| ಕಾಣ
ಬಪ್ಪುವತೆರದಿಭೂಮಿಗೆ । ಗೇಣುಮೇಲ್ಬಾನದೊಳುನಿಲ್ಲಲು । ಜಾಣರೊಡ
ನಿರುತಿರುವಧರಣಿಪಸಾಮಹಾದ್ಭುತಮಂ ॥ ಪ್ರೀಣತೆಯೊಳಿವನಿಂದೆನೀ
ರ್ಗಳು । ಕೇಣವಿಲ್ಲದೆಬರುತಿಹವುನಿ । ರ್ವಾಣಕಾರಣಮೂರ್ತಿಯಿಂದಲಸಂಶ
ಯವೆನುತ್ತೇ ||೭೯|| ತಿಳಿದುಕೂಪಾಂತರದಿಕರಿಣತೆ । ದಳೆಧಕಲ್ಲೊಡೆಯ
ಲ್ಕುಪಾಯಮ । ಮುಳಕಿಮಾಳ್ಪುವುದೆನಲುಯಿಳೆಯಿನಿಯನೊಳುಪೆದ್ದ
ಯ್ಯ ॥ ಘಳಿಲನೇಮಾಳ್ಪವೆನೆನಗಿದೇ । ನಳವಡದಪಿಥವೆಂಧುಗುರುಪ
ಧ । ನಳಿನವಾತ್ಮದಿನೆನಡುವಾಶಿಯೆನಲ್ಕೆತಚ್ಛಿಲೆಯೂ ||೩೦|| ಶೀಳಿಬಯ
ಲಿಗೆಭೀಳಪಾಣಿಯ । ಪಾಳಿಭೀತಿಸೆಜಗವುನಡುಗುವ । ವೇಳೆಯೆನೆವಾಘು
ರ್ಯಸಲಿಲವದೊಡನೆಪ್ರಭವಿಸಲು ॥ ತಾಳಿದನುಹರ್ಷವನುಪುರಮನು । ಜಾ
ಳಿಸಹಿತಂನೃಪವರನುಮ್ಯೆ। ಯ್ಯೋಳುಪುಳಕಾಂಕುರದೊಡನೆರೋವೋದ್ಗ
ಮನವೆಸೆಯೆ ||೩೧|| ಈತನೇಮುಕ್ಕಣ್ಣ ಕಿರಿಕುಲ । ಜಾತನೆಂಧೆನಲೆಂತ
ಹುದುಸಂ । ಪ್ರೀತಿಯಿಂದಮದೀಪ್ಸಿತವದುಂಸಫಲವೈದಿಸಿದಾ ॥ ಹೇತುವಿ
ಡಿಪುವಿಚಾರಿಸೆಪರಂ । ಜ್ಯೋತಿರೂಪನುನೈಜವಿದುವೆಪು। ನೀತಕಾರಣಪು
ರುಷಮತ್ಸುಕೃತಾತಿಶಯಮೂರ್ತಿ||೩೨|| ಹಿರಿಯನಿಗೆಬಲುಹಿರಿಯನಾಗಿಹ!
ಗುರುವೆಪೆದ್ದಯನಿನಗೆಸಮವಹ । ಪುರುಷರೀಮರ್ತ್ಯಪ್ರಮುಖಲೋಕಾ
ದಿಕಂಗಳೊಳ್ಲೂ ॥ ಅದಸೆಂಟೇಎನುತೆಸ್ತೋತ್ರ । ಸ್ಮರಣವಾಕ್ಯಧು

ಕ್ಷೀಣನಾಗುತೆ । ಧರಣಿವಲ್ಲಭನಿರುವಸಮಯಾಂತರದೊಳಲ್ಲಿರುವ ॥೩೩॥ ಜ
ನರುಗಳೆಂಇದುಎಂತವಿಸ್ಮಯ । ವೆನುತಿರಲ್ಕುಳದಿರುವಹಿರಿಯರು । ಮನೆ
ತುಗೌರವವೆವಳಿದುರೋಷಾಕ್ರಾಂತರಾಗಿರುತೇ ॥ ಮನದಿಕಳವಳಗೊಳುತ
ಲಾಕ್ಷಿಂ । ವಿನಿತುಯೋಚನೆಗೈಯಲೊಲ್ಲದೆ। ಮುರೆಯಶೇರುತ್ತೊಬ್ಬರೊಬ್ಬ
ರಮರೆಯುಹೋಗುತಿರಲು॥೩೪॥ಉಳಿದಡಾಂಬಿಕರೇನನುಡಿಯುದೆ। ಇಳೆಯನಿ
ಟ್ಟಸುತಿರ್ಪನಿಡುಸು । ಯ್ನಳನುಬಿಡುವಂದದೆಬಿಡುವರಾಗಲ್ಕೆಯಲ್ಲಿರುವ ॥
ಬೆಳಡವರುಗಿಳದವರುಕಳವಳ । ಗೊಳುತಲಿರ್ಪವಸಮಯದೊಳಗು । ಜ್ವ
ಳಮಹಿಮನುರುಲಿಂಗದೇಶಿಕಬರಲುನಮಿಸಿರುವ॥೩೫॥ ಸಾರಶಿಷ್ಯನನತುಲ
ಲಕರುಣಾ । ಪೂರದಿಂದಾಲಿಂಗಿಸುತೆಕಡು । ಮೇರೆಮೀಂಮೆಚ್ಚುತೆಸುಶ್ರೈ
ವಾಗಮಗದಿತಸರಣಿ ॥ ಬೇರೆನಿಸದೋಲ್ಲಿಂಗವಿತ್ತುತಕು । ಮಾರಭಕ್ತವರೇ
ಣ್ಯನೀನುವಿ। ಚಾರಿಸಲುನಾನಾದಕತದಿಂನಾನುನೀನಾದೆ ॥೩೬॥ ಅದುವೆ
ಕಾರಣನಿನಗೆನನಗಿನಿ । ತೊದಗಿರದುಬೇರೆಂಬಕಲ್ಪನೆ । ಸದಮಳಾತ್ಮಕ
ನುನ್ನ ಜಾತೀಶಂಗೆಬಿಲ್ಲಮನಿಂ ॥ ದುದಮಿಸಿತುಸತ್ಕೀರ್ತಿಪ್ರಭೆನೀ । ನದ
ರವೊಲುಸದ್ಭಕ್ತರುಗಳಸಮುದಯದೊಳಗತಿಶಯವೆನಿಸೆಸಾಂಗಣ್ಯನೆನಿಸಿ
ದನೆ ॥೩೭॥ ಎನ್ನತಂದೆಯೆನನ್ನಶಿಷ್ಯರೊ । ಳುನ್ನತೋನ್ನತನಾದೆಯೈ
ಸೌಜನ್ಯಎನ್ನಭಿದಾನಪೂರ್ವಕವಾಗಿರುತೆಬಳಿಕ ॥ ನಿನ್ನನಾಮವದಿರಲುಬ
ಯಸುವೆ । ನನ್ನಿಯಿಂದದುಕಾರಣದೆಪ್ರ । ಭನ್ನನೀನುರುಲಿಂಗಪೆದ್ದಯ
ನೆಂಬನಾಮವನೂಂ॥೩೮॥ ಧರಿಸಿಚರಿಸೆಂದೊರೆಯಲತಿಮುದ । ವೆರಸಿಮೆರೆ
ವಿಹನೆಂದುಪುರಹರ । ವರತನೂಭವನೆನಿಪಚನಬಸವರಸನುಸುರಿದನೂ ॥
ಶರಣಮಣಿಯುರುಲಿಂಗಪೆದ್ದಿಗ । ಳುರುಚರಿತೆಯಂಭಕ್ತರುಸಭಾಂ । ತರ
ಪೊಳ್ನೋದುತೆಕೇಳಿದೊಡೆಗುರುಕೃಪಾಕಾರಣದಿಂ ॥೩೯॥ ಮನದಸುಸ್ಥಿತಿ
ವಾಂಛಿತಾರ್ಥದ । ಘನಫಲಂಗಳುಸಿದ್ಧಿಸುತ್ತಂ । ಅನುಪಮಾಮೃತರಾಜ್ಯ
ಲಕ್ಷ್ಮಿಗೆಇನಿಯನಾಗಿಹನು ॥ ಎನುತರೇಣುಕದೇಶಿಕೇಂದ್ರನು । ಅನಘ
ಕುಂಭೋದ್ಭವಗೆಈವಿಧ । ವನುನಯದಿಬೋಧಿಸಿದಕರುಣದೊಳಂತುಮ
ಲ್ಲದೆಯುಂ॥೪೦॥ ಅಂತು ಸಂಧಿ ೩೯ಕ್ಕಂ ಪದ೧೯೭ಕ್ಕಂ ಮಂಗಳಮಸ್ತು



## ನಾಲ್ವತ್ತನೆಯ ಸಂಧಿ.

### ಹೆಂಡದ ಮಾರಯ್ಯನವರ ಕಥೆ.

ಸೂ ॥ ನಾರಿಪುರುಷರಕಡಿಕತುಷ್ಕವು । ಸೇರಿಕೈಲಾಸವನುತವಕದಿ । ಮಾರಹರನಡಿಗಳನುಸೇವಿಸಿಮಗುಳೆಹತ್ತಿದವು ॥

ಪದ ॥ ಅತಿಕುಪಿತದಿಂದಜನಶಿರವಂ । ಹತಿಸಿಕರದೊಳುಧರಿಸಿಮೆರೆದಿಪ । ಸಿತಗಳನಸದ್ಭಕ್ತಿತತ್ಪರಮತಿಯುತಾಂಚಿತನು ॥ ಪ್ರತಿರಹಿತನಸ ಪ್ರಧಾನತೇಜೋ । ರ್ಜಿತಯಶಸ್ಸು ಸ್ಫುರಿತಾಢ್ಯನಕ್ರಯ । ಧೃತಿಮಹಿತನೆನಲೆಸೆವಹೆಂಡದಮಾರಿತಂದೆಗಳೂ ॥೧॥ ಎನಿಸುವೀತನಮಹಿಮೆಯಗಣಿಸ । ಲನಿಮಿಷಾಧಿಪಗುರುವಿಗೆಂತಹು । ದನುಪಮದಕಲ್ಯಾಣಪಟ್ಟಣದಲ್ಲಿಸುಖಿಯಾಗೀ ॥ ಅನುದಿನದಪ್ರತ್ಯೂಷಕಾಲದಿ । ಸುನಿಹಿತೋತ್ಕಟಬಂಧನದೆನೂ । ತನಮಧುವಸುರಿಸಲ್ಕೆಮಾರ್ಗವಗೈವಕತ್ತಿಗಳಂ ॥ ೨ ॥ ಕತ್ತಲಿಯನಾರುಂ ಮುಸಲಮುಂ । ಹತ್ತಿರದೊಳಿಕ್ಕಲದೆಜೋತಾ । ಡುತ್ತಿರುವಭಾಂಡಾಳಿಯುಂಬಿಡುಕಟ್ಟುನಿಚ್ಚಣಿಕೆ ॥ ಮತ್ತೆಪಿಂದಿಹಕೊಂಬುಕಾಲ್ಕ । ಟ್ಟುತ್ತಮಾಂಗದಿಕೋರೆಯಂಹೂ । ಡ್ದುತ್ತಿರುವಕಿರಿಬಟ್ಟೆಯಿಂದೆಸೆದಿರ್ದ್ದುಸ್ವೈಜವಣ ॥೩॥ ಕಾಯಿಕಕೆಪೋಪುದಕೆಮೊದಲಿನೊ । ಳೀಯಜೆಸಿಪರಮೇಶ್ವರನನಿರ । ಪಾಯನತ್ಯಾನಂದದಿಂಸುರೆತಂದುಮನುಜರಿಗೇ ॥ ಧೀಯುತದಿವಿಕ್ರಯಿಸಿಧನವನು । ಪಾಯದಿಂಕೈಕೊಂಡುರಯಧಿಂ । ದಾಯತದಮನೆಗೈತರುತೆಕೂರಲಗಿನಿಂದಾತ್ಮ ॥೪॥ ಕರಯುಗಂಗಳಖಂಡಿಸುತೆಪುರ । ಹರಚರಣಸರಸೀರುಹಂಗಳ । ನುರುತರದಸದ್ಭಕ್ತಿಯಿಂಸೇವಿಸಲುಕಲಧೌತ ॥ ಗಿರಿಗೆಕಳುಹಲುಭಜಿಸಿಬಂದುರು । ತರದಿಮುನ್ನಿನತೆರದೊಳಪ್ಪಿಗೆ । ಗೆರೆಯುಮಿಲ್ಲದತೆರದಿಹತ್ತಲುಪಾವನವೆನಿಪ್ಪ ॥೫॥ ಶಯಸರೋಜಾತಂಗಳಿಂವೃಷ । ಹಯಗಣಾರ್ಚನೆಗಳನುಮತಿನಿ । ಶ್ಚಯದಿನಿತ್ಯವ್ರತವನೀತೆರಗೈವಮಾರಯನು ॥ ರಯದೊಳೊಂದಿನನಗರಪಥದಿಸ । ದಯನೆನಿಪಬಸವೇಶನತುಲವಿ । ಜಯದಿಪೋಗುವಸಮಯದೊಳುಕಾಣುತ್ತೆಶರಣಾರ್ಥಿ ॥೬॥

ನಲುಮಗುಳೆನಮಿಸಲುವಿನಯುಸು । ವಸಧಿಯಹಮುಹಿತಾತ್ಮಸ್ಪೋಗಲು।
ಅನಿತರೊಳೆದಂಡಾಧಿನಾಥನುಓಲಗಕೆಬಂದು ॥ ಜನಪತಿಯಕಾರ್ಯಗಳತೀರಿ
ಸಿ। ಘನರಯುದಿತಿರುಗುತ್ತೆತಾಂಮಾ । ರನಸುದಿವ್ಯಪ್ರಸಾದಸ್ಸ್ಪ್ರಹೆಯಿಂ
ತದ್ಗೃಹಾಂಗಣಕೆ ॥೭॥ ಮೂರನೆಯಜಾವದೊಳುಸೇರೆಪು । ರಾರಿತುಲ್ಯನೆ
ನಿಸ್ಪಬಸವಯು । ಸಾರಭಕ್ತಿನಿಯುತದಿತದ್ದಂಪತಿಗಳಿಗೆನಮಿಸೇ ॥ ಮಾರ
ಋನುಮಾತನಸುಪತ್ನಿಯು । ಭೂರಿಭಯದಿಂದಂಡನಾಥನ । ಚಾರುಪದ
ಪದ್ಮಂಗಳಿಗೆಮುಗುಳೆರಗಿಯುತಿವಿನಯ ॥೮॥ ಭರಿತಹೃತ್ಸರಸಿರುಹರಾಗುತೆ।
ಪರಮುಹರ್ಷೋತ್ಕರ್ಷದಿಂವಿ । ಸ್ತರಿಸುತಂವಿಕಸಿತವದನದಿಂದೆಮ್ಮಗೇಹ
ವದು ॥ ಗುರುವೆಪಾವನವಾಯ್ತುಪಾಪಗ । ಳಿರದೆಯಡಗಿದವಖಿಲಪುಣ್ಯನಿ।
ಕರವೊಡನೆಕೈಸಾರಿದುದುಮೋಕ್ಷೈಕಕಾಮಿನಿಯು ॥೯॥ ಹೊಂದಿಹಳು
ಫಲಿಸಿದವುಬಯಕೆಗ । ಳಿಂದುಧರನಪರಾವತಾರನು । ಬಂದಿರುವನೆನವದಿಂದ
ಲಿಂದೈತಂದೆಯಿನ್ನೇಕೆ ॥ ನಿಂದಿರುವೆತಡೆಯುದಲೆನಿರ್ಜರ । ಬೃಂದವಂದಿತನ
ರ್ಚನಾವಿಧಿ । ಯಿಂದೆತೀರಿಸಬೇಹುದೀಜಂಗಮನಿಚಯದೊಡನೆ ॥೧೦॥ ಎ
ನಲುಸಮ್ಮತಹೃದಯನಾಗುತೆ । ಮನಸಿಜಾರಿಸುಭಕ್ತಶೇಖರ । ನನಿತುನಿ
ಯಮುವತೀರ್ಚಿತ ನಂತರದೊಳವರುಗಳು ॥ ಘನತರಮುದದಿಗಡಣಿಸಿದ
ಪಾ । ವನತರಾಮೃತಮುಯುಪ್ರಸಾದದ । ಳನುನಯದಿಸಂತೃಪ್ತನಾಗಿತ
ದಾಣಿಯುಪಿಡಿದು ॥ ೧೧ ॥ ಮಂದಿರಕೆನಡೆತಂದವಾರ್ತೆಯ । ನಂದೆನರನಾ
ಯಕಸಿಗರುಹಲು । ಮಂದಮತಿಯೆಂದೆನಿಪಕೊಂಡೆಯುಮುಂಜಣನುಭರ
ದೀ ॥ ಬಂದುಬಿಜ್ಜಳಭೂಮಿಪಾಲನ । ಮುಂದೆಪೇಳ್ಪಂಬಸವಮಂತ್ರಿಯು।
ಇಂದುಕುಳ್ಳಾರನಮನೆಯೊಳುಂಡಿರುವನೆನೆಕೇಳಿ ॥ ೧೨ ॥ ವಸುಮತೀವಲ್ಲ
ಭನಮುಷಾರ್ । ರಸೆಸಮುಜ್ವಲಿತೇಕ್ಷಣದೊಳಾ । ಬಸವಸಚಿವಾಧೀಶನನು
ನಿಮಿಷದೊಳುಕರಸೆಂದಂ ॥ ಅಸಮುಕಾಶಲಶೀಲದೊಳುವ। ರ್ತಿಸವೆನೀನಪ
ರಾಧಗಳನಾ । ಚರಿಸುವುದೇನಿದುಕಾಣಲಾಲೋಕಿಸಬರದಕಾರ್ಯಂ ॥೧೩॥
ಮಾಡಲುಚಿತವೆಕುಲದಶೀಲವ । ನೋಡಿಸಿದೆಯೋವೇದವಾಕ್ಯದೊ । ಳೂ
ಡಿರುವವರ್ತನವನೀರೊಳುಕಲಸಿಪೂರ್ವಿಕರಾ ॥ ನಾಡೆಚಾರಿತ್ರಂಗಳನುಬಿ ।
ಟ್ಟಾಡಲೇಂಶಾಸ್ತ್ರಗಳನಿಳೆಯೊಳು । ಕೇಡುತನದಿಂಸುರೆಯುಮಾರುತಲಿರು

ವನಮನೆಯೊಳೂ ||೧೪|| ಉಣುವುದೊಳಿತೇನಯ್ಯವೇಣ್ಸ | ಡ್ಗಣಿಯು
ವನುವಾಗಿರ್ಪ್ಪುದೇಂಕುಲ | ದೆಣಿಕೆಯೆಂಬುದುನೀಗಿಬರೆಬಡಿವಾರಕಕುಲಾ
ತೀ || ಬಣಗರಂದದಿವಾಳ್ಪುದೊಳಿತೇ | ಗಣನೆತಪ್ಪಿದವಾರ್ಗ್ಗದಿಂಕ್ಕೈ | ತು
ಣುಕುಗಳುವಾಗಲ್ಕೆಕಡಿದೀಶ್ವರನಸನ್ನಿಧಿಗೆ ||೧೫|| ಪ್ರತಿದಿನವಿಕಳುಹುತಿ
ಹನೆಂಬುವ | ಅತಿಶಯಸುವಿಖ್ಯಾತಿಯನುಕೇ | ಳುತಲಿದುವೆಘನಮಹಿಮೆ
ಯೆನುತಂಮತಿಯೊಳೂಹಿಸಿದೈ || ಕೃತಕಗಾರುಡವೆಂಬುದರಿಯದೆ | ವ್ರತಿ
ಕನೆಂದೆನುತವನಪೇರ್ಮೆಯ|ನಿತರರಿಗೆಪೇಳ್ವಂತೆಘನತಶವೆನಗಿಸೇಳುವೆಯಾ|
||೧೬|| ಎನಲುಸುಸ್ಮೇರಾನನದೊಳೆಲೆ| ಮನುಜನಾಯಕತನ್ಮಹಿಮೆಯುದು|
ಮನಕೆವೇದಿಪುದೆಂತುಜಡಮತಿಗಳಿಗೆಪುಸಿಯೆನಲೂ || ಅನುಚಿತವುಮಾರನ
ಯಮನಮದ | ವನುಹರಿಸಿದನಸಮನುಮಾರಯ| ನೆನುತೆಕೀರ್ತಿಗೆಪಾತ್ರ
ನಾಗಿಹನೆಲ್ಲದಿಶೆಗಳೊಳು ||೧೭|| ಮಾರಯನಗೌರವವನುಂನಾ | ವಾರಯ
ಲ್ಬರ್ಪುವುದೆಭೂವರ | ಧೀರನೇಎನಲರಸನೆಂದನುಬಸವಧೀಮಣಿಯೆ|| ಸಾ
ರವಚನಕ್ಕೀಂಬಡತನಂ | ಮಾರಮರ್ಪ್ಪನತುಲ್ಯನವಸೆಂ | ಬೀರಹಸ್ಯದನು
ಡಿಗಳಿಗೆನಾವೆಂತುಮೆಚ್ಚುವೆವು ||೧೮|| ಆಮನುಜನತಿಮಹಿಮೆದೋರುವ |
ಧೀಮಹಿತನಾಗಿರಲಿದಕೆಘನ | ಪ್ರೇಮದಿಂಸವ್ಮತಿಸುವೆನುನಾನೆನುತೆನುಡಿ
ಯಲ್ಕೆ || ಭೀಮಭಾವಿಕನೆನಿಪಬಸವಂ | ನೇಮದಿಂದಾತನಮಹಿಮೆನಿಮ |
ಗೇಮಹೋನ್ನತವೆನಲುತೋರುವೆಭೂವರನೆಬಾರೈ||೧೯|| ಎನುತೆಸೇನಾಸ
ಹಿತದಿಂತ | ಜ್ಜನಪತಿಯನೊಡಗೊಂಡುಮಾರನ | ಮನೆಗೆಪ್ರೋಗಲ್ಕಂಡು
ಭ್ರೀತ್ಯನ್ವಿತಹೃದಯನಾಗೀ || ಅನಘಮಾರಂಮಂತ್ರಿಶೇಖರ | ನನುಮಿದಿ
ರ್ಗೊಂಡತಿವಿನಯದಿಂ | ವಿನಮಿತನುವಾಗಲ್ಕೆಬಸವೇಶ್ವರನುಮುಸುಳಿಸಗೀ||
||೨೦|| ಸುಕರಯುತತಾವಕವ್ರತಸ್ಥಿತಿ| ಪ್ರಕಟವಾಗಲ್ಕೀಮನುಜನಾ| ಯ
ಕನುತಿಳಿಯಲ್ಬಂದನದುಕಾರಣವಿರಯದಿಂದೆ || ಸಕಲಜನಲೋಚನಸುಪ
ರ್ವ! ನಿಕಟವೆನಿಸುತ್ತಭಿಮತವನೀಂ | ಯುಕುತಿಯಿಂತೀರಿಸುವುದೈ ಸಾಂ
ಗಿಕದೊಳೆಂದೆನಲೂ||೨೧|| ಪರಮಹರ್ಷಿತನಾಗಿಮಾರಯ | ನುರುತರದ್ಧೃ
ತಿಯಿಂದೆನಿಜಸುಂ| ದರಿಸಹಿತಸದ್ಭಕ್ತಿಯುಕ್ತಿಸುಭಾವನಮ್ರತೆಯಿಂ || ಕರ
ಚತುಷ್ಟಯುವಿಕ್ಷುದಂಡಗ | ಳಿರವಿನಿಂಖಂಡಿಸಲುಮಿಗೆಪುರ | ಹರನಪುರಿ

ಯಂಸೇರಿದವುಗಗನಾಧ್ವವನೆಪಿಡಿದು॥೨೨॥ ನಡೆದುಗಿರಿಜಾಗಿರಿಶರಂಫ್ರಿಸು। ಜಡಜಗಳಸಾನ್ನಿಧ್ಯದೇಶಕೆ। ಕಡುಶರಯುದೊಳುಂಪೋಗಿನಿಂದಿರಲಲ್ಲಿರುತೆಸಿಧ್ಧ ॥ರೊಡೆಯುನೆನಿಸುವಸಿದ್ಧರಾಮಂ। ಮೃಡನಭಜಿಸುತ್ತಾತನಪ್ಪಣೆ। ಪಡೆದುನೋಡುತ್ತಲ್ಲಿನಡೆಪುದಬಂದುನಮಗಿಲ್ಲಿ॥೨೩॥ಸೊಲ್ಲಿಸಿದಭೂಧರತನೂಜಾ। ವಲ್ಲಭರಸಂವಾದವರುಪುವೆ। ಬಲ್ಲನಿತನಾಂವೀರಭದ್ರನೃಪಾಲನೇನಿನಗೆ ॥ ಉಲ್ಲಸನದಿಂದಾಭವಾನೀ। ವಲ್ಲಭರುಗಳಮೃದುಲಸತ್ಪದ। ಪಲ್ಲವಂಗಳಸೇವಿಸಲುಕ್ರಮದಿಂದೆಬಂದಿರುವ ॥೨೪॥ ವಾರಿಜಾಂಬಕಿಪೂರುಷರುಭಯ। ಚಾರುಕರವಾರಿಜಚತುಷ್ಟಯ। ವಾರಜತಗಿರಿಸದನನರ್ಧಾಂಗಿಯಳುನೆರೆಕಂಡೂ ॥ ಹೇರಮಣವಿಸ್ಮಯವಿದೇನೈ। ಪೂರುಷನಕರಯುಗ್ಮವನಿಶಂ। ಸೇರುತಿರ್ದುದುನಿಮ್ಮಪಾದವಸೇವಿಸಲ್ಕಿಂಡೂ ॥ ೨೫ ॥ ಏನುಹೇತುವೊತಿಳಿಯಬಾರದು। ಮಾನಿನಿಯಹಸ್ತಾಬ್ಜಯುಗಳವು। ತಾನೆಬಂದಿರುತಿಹುದುತಿಳುಪುವುದೆನಲುಶಂಕರನು ॥ ಮೇನಕಾತ್ಮಜೆಯೊಡನೆಪೇಳ್ದನು। ಜ್ಞಾನಿಹೆಂಡದಮಾರನಾತ್ಮನಿ। ದಾನನಿರುಪಮಮಹಿಮನೆನಿಸುತೆಕ್ಷೋಣಿತಲದಲ್ಲಿ ॥೨೬॥ ಬಸವದಂಡೇಶನಸುಮತದಿಂ। ವಸುವತೀವಲ್ಲಭಗೆಕಡುಸಂ। ತಸವತೋರಲುಭಕ್ತಿಯಿಂನಿಜಸತಿಯಕರಯುಗವಂ ॥ ನಿಸಿತಖಡ್ಗದಿತರಿವುತಂಸೇ। ವಿಸಲುಕಳುಹಿದನೆಂದೆನಲುವಾ। ನಸದಿಸಂತಸವೆಸೆಯೆದೀನಜನಾವನಾದರಣ ॥೨೭॥ ನಿನ್ನ ಪಾದಾರ್ಚಕರಮಹಿಮೆಗ। ಳನ್ನು ತಿಳಿದುನುತಿಸಲುವಾಕ್ಪತಿ ಪನ್ನಗಾಧಿರಜೀವರಿಂಗಳವಹುದೆಮಾನಿತರು ॥ ಚಿನ್ಮಯುರಸತ್ಯೈಕಸಂಧರು। ಧನ್ಯರುಗಳಸಮಾನವ್ರತಿಗಳ। ಗಣ್ಯಧೈರ್ಯರುದೋಷಮೋಚಕರೆನಿಸುವರುವಿಮಳ॥೨೮॥ ತೇಜರತಿಶಯನೀತಿಕೋವಿದ। ರಾಜನನಮ್ರುತಿದೂರರನುಪಮ। ಭೂಜನಾಳಿವಿಹಿತಚರಿತ್ರರುಜೋಘರೂಪರುಮೆಂ ॥ ದಾಜಗಜ್ಜನಮಿತ್ರಿಸುವಚೋ। ರಾಜಿಯಿಂನಿಜಭಕ್ತರುಗಳ ಅತಿಶಯಾವಿ। ರಾಜಿಸಲುಬಣ್ಣಿಸುತೆಪೇರ್ಮೆಯೊಳಾತ್ಮಕಚಭರದ ॥೨೯॥ ಅತಿಶಯಾವಿ। ವಿತತಿವಿನಿಕ್ರುದ್ಭುತಮಹಿತಸೌಗಂ। ಧಿತಪ್ರಬಂಧುರಪಾಂಡುರದ್ಯುತಿ। ಯತಸ್ರುಜದಿತತ್ಕರಚತುಷ್ಟಾ। ವೃತಹಂಸವಾಗಿಹವಿಬುಧವೃಕ್ಷಸುಮಾ॥ ಯತಸ್ರುಜದಿತತ್ಕರಚತುಷ್ಟಾ। ವೃತವಗೈಯ್ಯಲ್ನೋಡಿಗಿರಿಜಾ। ಪತಿಯುದರಹಸಿತಾಸ್ಯನಾಗಲುಹಸ್ತಯುಗಳ

ಗಳೂ ||೩೦|| ಶಿವನಪದವಂಸೇವಿಸುತ್ತೀ | ಬುವಿಗೆಕೌತುಕವೆನಿಸಲ್ಕೆತಂ | ದವುನಭೋಪಥದಿಂದೆತತ್ಕುಸುಮಾಂತರಮಧು ನಿಸಾ || ಸವಿಯುಕುರುಪಿಂ ಬರುವಷಟ್ಪದ | ನಿವಹಝೇಂಕಾರದರವವಸುರ | ಯುವತಿಯರುನಿಚ್ಚೆರ ಗಿನಿಂನೋಡುತ್ತಿರಲ್ಬಂದು ||೩೧|| ಆಕರಚತುಷ್ಟಯವುಘನತರ | ಶ್ರೀಕ ರದಿಮುನ್ನಿರ್ದವೋಲ್ಸುಗು|ಣೈಕವಮಾನಸಭಾದವಾರಾರ್ತ್ಯನಿಗುತತ್ಸತಿಗುಂ|| ಜೋಕೆಯಿಂಬೆಸುಗೆಯರಚಿಸಲು | ದ್ರೇಕದಿಂದೀಭುವನಮನುಜಾ | ನೀ ಕನೀಕ್ಷಿಸುತಿರಲುಶೋಭಿಪುದಂನೃಪಾಲಕನೂ || ೩೨ || ಕಂಡುವಿಸ್ಮಯ ಗೊಂಡುಭೀತಿಯು | ಮಂಡೆದುಂಬಲುಮರುಗುತಂಮುಂ | ಕೊಂಡುಮೂ ಢತೆಯಿಂದಿರುತೆಬಸವೇಶನಂನೋಡಿ || ದಂಡನಾಥನೆಈಪದಮಳಾ | ಖಂಡ ಚಿತ್ರರಸೋನ್ನಹಿಮೆಹ್ನ | ತ್ಪುಂಡರೀಕದಿತಿಳಿಯದೆವೃಥಾಹಲವುಗಳಹಿ ದೆನು ||೩೩|| ಅವನುಚಿತ್ತಕೆತಾರದೇಎ| ನ್ನುವನುಕಾಯ್ದುವುದೆನುತ್ತೆವಿನು ತಿಸು | ತವನಿಪಂವಿನಮಿತನುಮಾಗಿನಿಜಾಲಯುವಸೇರು || ವವಸರದೊಳಲ್ಲಿ ರ್ದಶಿವಗಣ|ನಿವಹವತಿಮುದದಿಂದೆಮಾರನ| ಯುವತಿರನ್ನವಕಂಡುಭಾಪುರೆ ಘನತರಸುಭಕ್ತಿ ||೩೪|| ನೈಷ್ಟಿಕೆಯನಿಲವಿಂಗೆದೈವವ | ರಿಷ್ಟನೆನಿಸುವಸ ದ್ಗುರುವಿನುಪ | ದಿಷ್ಟಕಾರುಣ್ಯೈಕಪಾತ್ರವೆನಿಸಿಮೆರೆವುಕಿರುವಾ|| ಅಷ್ಟ ಮೂರ್ತಿಪದಾರ್ಚಕಾಳಿಗೆ| ಜ್ಯೇಷ್ಠನೀನೇಂಯಲ್ಲದಲೆಯಿಾ | ಸೃಷ್ಟಿಯೊಳ ಗುಂಟೇನಿನಗೆಸರಿಬರ್ಸವರುತಿಳಿಯೇ || ೩೫ || ಬಸವನಂದೂಷಿಸುತೆನು ಡಿದಿಹ | ವಸುಮತೀಶನಲಜ್ಜಿಸಲುಜನ | ವಿಸರವುನುತಿಸುತಿರಲುನಿಜವಿಶ್ರು ತಸುಕೀರ್ತಿಲತಾ || ಪ್ರಸರವುಂನಾಲ್ಪಿಶೆಗಳೊಳುಪ | ಬ್ಬಿಸಲುಗಣಧೀರ್ಭರಿ ಗೆಮಾನಸ | ಬಿಸಜದೊಳುಸಂತಸವೆಸೆಯಲೀಸಮುಖದೊಳುಮಹಿಮೆ || ||೩೬|| ತೋರಿದಯ್ಯಎನುತ್ತೆಬಸವಕು | ಮಾರಮುಖ್ಯಸಮಸ್ತಶಿವಗಣ | ವಾಗವಶತಿಯುವೆನುತೆಕೀರ್ತಿಸುತಾತ್ಮಗೇಹಗಳ || ಸೇರಿದರುನಿಂಮೋದ ದಿಂಕೇಳ್| ವೀರಭದ್ರನೃಪಾಲಕಈತನ| ಚಾರುತರಮಹಿಮಾತಿಶಯವಿಂತಿ ರ್ಪಕಾರಣದಿಂ ||೩೭|| ಈಳಗದಮಾರನಚರಿತ್ರವ | ನಾಲಯಿಸಿಪಠಿಯಿಸು ವಭಕ್ತಿಸು | ಶೀಲರಿಗೆಕೈಸಾರುವುದುದೀರ್ಘಾಯುರಾರೋಗ್ಯ || ಶ್ರೀಲಸ

ಶ್ಟ್ರೀಯೈಕಪದವನು । ಕೂಲದಿಂಸಂವೃದ್ಧಿಯೈದಿವಿ । ಶಾಲಕೀರ್ತಿಪ್ರ
ಯುಕ್ತರಾಗಿಹರಂತುನುಲ್ಲದೆಯುಂ ॥೩೪॥

ಅಂತುಸಂಧಿ ೪೦ಕ್ಕಂ ಪದ ೨೩೩೩ಕ್ಕಂ ಮಂಗಳಮಸ್ತು.

---

## ನಾಲ್ವತ್ತೊಂದನೆಯ ಸಂಧಿ.

### ನಿಜಗುಣಿಗಳ ಕಥೆ.

ಸೂ॥ ಕಪಟದಿಂನಿಜಗುಣಿಗಳನುಜರಿ । ದಪರಿಮಿತಪರಿವಾರಸಹಿತಂ ।
ನೃಪನವರ್ಗ್ಗಳಮನೆಯೊಳುಂತೃಪ್ತಿಯುಪಡೆದಮುದದಿ॥

ಪದ॥ ಸುಜನಹಿತಸದ್ವ್ರತವುಸೂನೃತ। ವಿಜಯಶಾಂತಸುವೃತ್ತಿಯುಂ
ಭಾವಜವಮದಾಪಹಭಕ್ತಿಗಣವಲ್ಲಭರದಾಸ್ಯವುತ ॥ ದ್ವಿಜನೆನಿಶ್ಚಯಬೋ
ಧವ್ರಂಸ । ವರ್ಜನವಶ್ಯತೆವಿಗತರಾಗವು । ನಿಜಗುಣಂಗಳುಮಾಗಿರಲುನಿ
ಜಗುಣಿಯನುವನಾಮ ॥೧॥ ವಾಡುದೀರ್ಧರಣೀತಲದೆಸುಕ್ಕ । ತೋದಯ
ನುಮೆನಿಸಿರ್ಪಶರಣಮ । ಹಾದಯಾನಿಧಿಯನವರತಕಲ್ಯಾಣಪುರದೊಳಗೇ
ಶ್ರೀದಸುಖಭಾವಿತನುಶುಭಕರ । ವಾದರೇವಣಕಪ್ಪರವನುಪ್ರ । ವೋದ
ದಿಂಕೈಕೊಂಡುಭಾಕ್ತಿಕಸಿಂಹರುಗಳಿರುವ ॥೨॥ ಮಂದಿರಕೆನಡೆತಂದುಕ
ಡುಮುದ । ದಿಂದಪಾವನಭಿಕ್ಷೆಗೊಳುತಲ । ಮಂದಗತಿಯಿಂನಿಜನಿವಾಸ
ವಸೇರುತಾಕ್ಷಣವೆ ॥ ತಂದದ್ರವ್ಯವನೇವಿಶೇಷದಿ । ಬಂದಜಂಗಮಕೋ
ಟಿಗತಿಶಯು । ವೆಂದೆನಿಪಸದ್ಭಕ್ತಿಯಿಂಭೋಜನವಗೈಸುತಿರೆ ॥೩॥ ನರರಿವ
ನುಎಂತಪ್ಪಘನಸ । ಚ್ಚರಿತನೋಎಂತೆಂದುಪಟ್ಟಣ । ದಿರುವಸಕಲಸು
ಜನರುಸನ್ನುತಿಗೆಯ್ಯುತಿರಲಧಿಕ ॥ ತರಯಶವಿವರ್ತಿಸುತಲಿರೆಪುರ । ಹರ
ಗಣೇತರರಾದೊಡಂಸಾ । ವಿರವಸಂಖ್ಯೆಗಳಾಗಿಬಂದಿರಲಿಷ್ಟವಾಗಿರುವ-॥
॥೪॥ ರಸರಸಾಯುನದೋದನಗಳಿಂ । ದಸದೃಶನಿತಣಿಸುತ್ತಲಿರಲಾ । ವಸು
ಮತೀಶನುತತ್ಕ್ರಮವಸಾಂಪ್ರದಿಕೇಳಿಸಮು ॥ ಲ್ಲಸನದುರ್ಮ್ಮದಯುಕ್ತವ
ಹವಾನಸವೊಳಾಗುಣಘರ್ರ್ಯನನುರಘು । ಕಿಸುವನೆವದಿಂಬಸವದಂಡಾಧೀ
ಶನೊಡನೆಂದ ॥೫॥ ಸಾರನುಹಿವೋದಯುಸುಗುಣಗಂಭೀರನಮ್ಮಪುರಾಂತ

ರದಿಮಾ । ರಾರಿಭಕ್ತನುಮೋರ್ವನಗಣಿತವಾಗಿಬರುತಿರುವ ॥ ಪೂರುಷಾವ ಳಿಗೀಪ್ಸಿತವುಕೈ । ಸೇರುವಂತೆಮನೋಹರಾನ್ನಗ । ಳಾರಯಿದುನೀಡುತಿ ಹನೆಂಬುದಕೇಳಿಸುವೆನದುವೇ ॥೬॥

ಸತ್ಯವೋಎಂದೆನಲುಬಸವಾ । ಮಾತ್ಯನೆಂದನುಧರಣಿಪನೆಯುದ । ಸತ್ಯವಂ ತಹುದಯ್ಯನೀಂಕೇಳಿರ್ದನಿತುನಿಜವೆ ॥ ಸ್ತುತ್ಯಜನಮಂದಾರನಮಿತವು । ಹಾತ್ಮ್ಯಯರಿಯಲ್ಬರ್ಪುದೇನಿಜ । ಭೃತ್ಯಪಾವನನಾಮನುಂಭಿಕ್ಷೆಯನು ಕೈಕೊಳಲೂ ॥೭॥ ಕರದಿಪಿಡಿದಿಹಕಪ್ಪರಿಗೆಪೃಥು । ತರವದಲ್ಲವುಬಮ್ಮನ ಕೆಸರಿ । ಬರುವುದರಿದಪುತುಂಬೆತಂಡುಲವಾಗಲಾಮುಂದೆ ॥ ಇರುವಮನೆ ಯವರುಗಳಬೇಡದೆ । ತಿರುಗಿಮನೆಗೈತಂದುಸಪ್ಪುರು । ವರ್ರಕೃಪಾವಶದಿಂ ದಲಕ್ಷಯವೆನಿಸುತದರಿಂದೆ ॥೮॥ ಆದರದಿಜನಕೋಟಿಗೆತಿಶಯ । ವಾದದಿ ವ್ಯಾನ್ನಗಳಕಡುವಂ । ಮೋದದಿಂದೆನಲಾಮಹೇಶ್ವರನೆಂದನಂತಾಗೇ ॥ ಓದನವಸಂತತದಿನೀಡಲು । ಶ್ರೀದಸಖಸಮನೆಂದೆನಿಸುತೆಮ । ಹಾದಯಾ ನಿಧಿಯಾಗಿಮೆರೆದಿಹನಿಜಗುಣೇಂದ್ರನಿಹಾ ॥೯॥ ಮಂದಿರದೊಳೆಮಗುಣಲ ಭಿಷ್ಟವು। ಮುಂದುಗೊಂಡಿರುತಿರ್ಪಕಾರಣ। ದಿಂದನಡೆನಡೆಎಂದಕೌಟಲ ಭೂವರನಮುಖವ ॥ ನಂದದಿಂಕಾಣುತೆಸಚಿವವರ । ನೆಂದನವನೀಪತಿಯೆ ನಿನ್ನೊಳು। ಸಂದಿರುವವಾಂಛೆಯದುತೀರ್ವುದುನಡೆಯುನಲುಮನದೀ॥೧೦॥ ಬೆಸುಗೆಯಾಗಿಹಕುಹಕವುಂಪ್ರೇ । ರಿಸಲುಗಜರಥವಾಜಿವಿಕ್ರಮ । ರಸದಿ ಪೊಪೆನಿಸ್ಪಭಟನಿಕರಾಪ್ತವಿಬುಧಜನ ॥ ವಿಸರಭಾಂಧವಯುತದೊಳಧಿಕ ವೆ । ನಿಸಲುಬಂಡನುವನುಮತೀಪತಿ । ಬಸವಸಚಿವೋತ್ತಮನುಬೆಂಬಳಿ ವಿಡಿದುಬರೆಮುದದಿ ॥೧೧॥ ತನ್ನಮನೆಗೈತಂದಬಲಸಂ। ಪನ್ನಭಿಜ್ಜಳನಂ ಬಳಿಕಸೌ । ಜನ್ಯನೆನಿಸುವಬಸವನಂಕಾಣುತ್ತೆಮುದವಲರಿ ॥ ಸನ್ನಿಧಿಗೆ ನಡೆತಂಡುನಿಜಗುಣಿ । ಯುನ್ನತದೊಳೈತಂದಿರುವಗಣ । ಸೂನ್ನರಿಗೆಕೈಗ ಳನುಜೋಡಿಸಿನಿಂದಸಮಯದೊಳೂ ॥೧೨॥ ಆತನಂನೋಡುತ್ತೆಬಸವಸ । ನಾತನನುಮಿಂತೆಂದಮಹಿಮೋ । ಪೇತನೇಧರಣಿಪನುನಿಮ್ಮಯಖ್ಯಾತಿಗ ತಿಶಯುಸಂ ॥ ಪ್ರೀತಿಯಿಂಭವದಾಲಯದೊಳಂ । ಬಾತುರದೆಮೋದಾನ್ವಿತ ದಿಬಂ । ದಾತನಾಗಿಹನದುಕತದೆಮನದೀಪ್ಸಿತಂಗಳನು ॥೧೩॥ ಫಲಿಸುವಂ

ಪವಿಮಾತುಪೂತಕ । ವಿಲಯದುರ್ವಿಷಯವನದಾವಾ ನಲನೆತಾವಕವು
ಹಿಮೆಯುಂವಿಸ್ತರಿಸೆನಲುಸುಕೃಪಾ ॥ ಜಲನಿಧಿಯುಘನತರಪ್ರಸಾದವ ।
ಚನವುಸಿದ್ಧಿಸಿತೆನುತೆಸರ್ವರು । ನಿಲಯದುಂಬಲ್ಪಜ್ತಿಯುಂಕುಳ್ಳಿರಿಸಿಕರ
ದೊಯ್ದು ॥೧೪॥ ಘನತರದಸದ್ಭಕ್ತಿಯಿಂಪಾ । ವನಚರಿತರರಹಶಿವಶರಣ
ರ-। ರ್ಚನೆಗಳಂಗೈಯ್ಯುತ್ತಬಳಿಕಂವನಧಿಕಾಂಚಿಸತೀ ॥ ಮನಕೆಪ್ರಿಯ
ನೆನಿಪ್ಪೋಲಗದೋಳಿರು । ಪನಿಬರುಂಸೌಖ್ಯಾಸನದೊಳಿರೆ । ವಿನುತಿಸುತೆಸ
ದ್ಗುರುಪದಂಗಳನಂತುಕ್ಷದಳಿಪಳ॥೧೫॥ ನಿವಹಭೋಜನಗಳನಿಡುತೆಚಿ। ತ್ರ
ವಿದೆನಲುಸೂಪಸಾಭಕ್ಷ್ಯಾನ್ನವನುಮಾಜ್ಯಗವೀನದಧಿಕ್ಷೀರಾಢ್ಯಭೋಜ್ಯಗ
ಳಂ ॥ ನವಶಲಾಟುಪ್ರಮುಖಮುಂತಾ । ದವುಗಳಂಬಡಿಸಲುಮುದವದು ।
ಢ್ವನಿಸಲುಣ್ಣುತ್ತಿರ್ಪರವನೀನಾಥಮೊದಲಾಗೀ ॥೧೬॥ ಈವಿಧದಿಜೈನರುಗ
ಳತಿಶಯ । ಸಾವಧಾನದಿಭೋಜನವಮಾ । ಳ್ಪಾವಸರದೊಳುತಮ್ಮೊಳಗೆ
ತಾವ್ನುಡಿದರೆಂತೆನಲೂ ॥ ಪಾವನಾತ್ಮಕನಪ್ಪಈಸದ್ಭಾವಿಕನದಿವ್ಯಪ್ರಭಾ
ವವ । ನಾವಿಬುಧಪತಿಮಂತ್ರಿವಾಕ್ಕಾಂತಾಪತಿಪ್ರಮುಖ ॥೧೭॥ ಸುಮನ
ಸರಿಗಳವಹುದೆರಚಿಸುವ । ವಿಮಳಕಾಯಿಕವೆನಿತುಸಣ್ಣುಡು । ಅಮಮ
ಈ ಕ್ರೂತಿರ್ಪಮನುಜರಸಂಖ್ಯೆವಿವರಿಸಲು ॥ ಅಮಿತವಾಗಿಹುದೈಸೆಬಂದಿ
ಹ । ಸಮುದಯದೊಳಾರೇನಬೇಡಲು । ತಮತಮಗೆಮನದಿಷ್ಟಸುಪದಾ
ರ್ಥಗಳಬಡಿಸಿದರು ॥೧೮॥ ಭಲರೆಭಾಪುರೆಚಾಗುಯಹುದಹು । ದಲಘುತರ
ಕೌತೂಹಲವಲಾ । ಫಲಿತನಿರತಾನ್ನಪ್ರದಾನಪರೇಂಗಿತಕ್ರಮದಾ ॥ ನಿಲು
ಕಡೆಯುದಿರಬೇಕವರ್ಗಳ । ನಿಲಯದೊಳುಭೋಜನವಿದಿಂದೆಂ । ಬುಲುಹ
ನಾಲಿಸಲಿಲ್ಲಲಾಮಿಪನರಿಯದಲೆನಮ್ಮ॥೧೯॥ ಮನೆಯೊಳಿನಿತನ್ನವನೆಯುಂ
ಬುವ । ತನಕಮುಂಬಿಡಲಿಲ್ಲವ್ವೆಯಿವಾ । ಘನಸುವಾರ್ತೆಯಕೇಳದಿರ್ಪಾಕತ
ದೊಳುಂಡೆನಲಾ ॥ ಎನುತಲೀಗೆಯೊಳುದೋಮೆಯಾಗೆನಿ । ತೆನಿತುಕಾಲವು
ಜೀವಿಸಿದೊಡೇಂ । ಘನತೆಯುದರಿಂದಾನೆಯಾಗುತ್ತೊಂದುಮೌಹೂರ್ತ-॥
॥೨೦॥ ಚರಿಸುವುದೆಲೇಸೆಂಬವಿಧಿಯಿರೆ । ಕರಕನಿಷ್ಟವೆನಿಪ್ಪಜೈನರ । ದು
ರುಳವಂಶದೊಳೊಗೆದುಭಕ್ತಿಯನೀಗಿಚಿಂತಿಸುತೇ ॥ ನಿರುತವಿರಲೇಕರಿದು
ಕ್ಷಣವಾ । ಪರಿಯುಪುರಹರಭಕ್ತನಾಗಿರು । ತಿರುವುದತಿಶಯವೆನುತೆಕಂ

ಠಾಪೂರ್ಣ ಭಕ್ಷ್ಯಗಳಂ ||೨೧|| ಉಂಡುಸಂತೃಪ್ತಿಯದುಮಿಲ್ಲದೆ । ಮಂಡೆ
ಮೇಲ್ಗಡೆಬಾಯಿಗೈಯದ । ಪುಂಡರೀಕತನೂಭವನುಮಕಟಕಟಾಮೂಢ
ನಲಾ || ಪಂಡಿತನುಮೆಂತಹನೆನುತೆಹ್ಯ । ತ್ಪುಂಡರೀಕದಿನೆನೆದುಜರಿ
ದುಂ । ಪಾಂಡ್ಯಭೂವರಸಾಂಖ್ಯತೊಂಡಾಹ್ವಯರುಮೊದಲಾದ ||೨೨||
ಅವರುಗಳುಈಜೈನವಂಶೋ । ದ್ಭವರುಗಳುಮಲ್ಲವೆಭವಾನೀ । ಧವನಭ
ಕ್ತಾಡ್ಯರುಗಳೆನಿಸುತೆಮೆರೆವುತಿಹರಾಗಿ || ಭುವಿಯೊಳಗೆಕುಲವೆಂಬುವಭಿ
ಮಾ । ನವನುಹೊಳೆಯೊಳುಮುಳುಗಿಸುತಲೀ । ದಿವಸದಿಂಸದ್ವೀರಶೈವಾ
ಚಾರಪರರಾಗಿ ||೨೩|| ಇರುವೆವೆಂದುಂಮದುವೆಮುಂಜಿಗ । ಳುರುತರದಹ
ಬ್ಬಂಗಳೊಳುಬಂ । ಧುರದಿಪೂರ್ವವುನಮ್ಮಮಂದಿರಗಳೊಳಗೀವಸ್ತು || ಪ
ರಿಕರವಪಕ್ವವನೆಮಾಡಿ । ದ್ದರಿಯೆವೈಯುಂಡಿಲ್ಲವೈಈ । ತೆರದಸೌಖ್ಯಸು
ಭೋಜನವನಾಗಳುಮರಿಯದಿಹೆವೂ || ೨೪ || ಇವರಪಾಕವೆಇಂತಹುದೊ
ಶ್ರೀ । ಧವಶರಾರ್ಚಕಭಕ್ತವಿಲಸ । ದ್ಭವನಗಳೊಳಿರ್ಪ್ಪವಪ್ರಸಾದದಸವಿ
ಯದೀಪರಿಯೋ || ಭುವಿಯೊಳುಂಪುಗೆಚರಿಪಜಂಗಮ । ನಿವಹವ್ರಸವಿವ
ಸೌಖ್ಯದೊಳುತ । ಮ್ಮಮಮನವ್ರುಮುಳುಗಿರುವಕಾರಣದಿಂದಖಿಳದೇಶ-||
||೨೫|| ಸ್ವಾಗತಾಖಿಲಚರವರೇಣ್ಯಸು । ಪೂಗಲಕ್ಷದಮೇಲೆತೊಂಭ । ತ್ತಾ
ಗೆಸಾವಿರಗಣಚಯವುಬಂಡಾರಿಮನೆಯೊಳಗೇ || ಭೋಗಸಂತುಷ್ಟಿಯದು
ಮೇಣ್ವೈ । ರಾಗತೆಯುನೆಲೆಗೊಳುತರಿ[illegible]ತಿಹ । ನಾಗಕುಂಡಲನಿಗೆಸ
ಮಾನರುಬಿಡದೆಮುತ್ತೊಂದು || ೨೬ || ಎಡೆಗೆಪೋಗದೊಲಿರುತಿಹರೆನು ।
ತ್ತೊಡನೊಡನೆತಾವ್ತರುವ್ರದೆನುತಂ । ನುಡಿವುತಿರ್ದರುಮೆಲ್ಲನೇಪೇರು
ರವನೆತ್ತುವರೂ || ನಡೆಯಲೆಂತೆಂಬುವರು[illegible]ಗಳ । ತಡವಿಕೊಳುತಂ
ಕೊರಳತಿರುಗಿಸಿ । ಕಡುಸವಿಯಿದೆನ್ನುತ್ತೆಸ್ವೀಕಾರವನೆಗೈಯ್ಯುವರೂ
೨೭|| ಡೇಕರಿಸುವರುಗರ್ರನುತಲು । ಡ್ರೇಕದಿಂನಿಗುರುವರುಮುತ್ಸರಿ ।
ಪಾಕದಿಂದಾಬಿಜ್ಜಳಾಧೀಶನುಮೊದಲ್ಗೊಂಡು || ಏಕತೆಯೊಳೆಲ್ಲರುಸುಭೋ
ಜನ । ಪ್ರಾಕಟದಿಮಾಡಿದರನಂತರು । ಲೋಕಪಾವನಮೂರ್ತಿಯೆನಿಸುವ
ನಿಜಗುಣೇಂದ್ರನನೂ |೨೮|| ಸನ್ನುತಿಯಗೈಯುತ್ತೆನಿಜಸ್ಥ । ಹವನ್ನು
ಸೇರಲ್ನೃಪತಿಲಕನ । ತ್ಯನ್ನತದಿಚತುರಂಗಬಲಸಹವಾಗಿಯುತಿರಯದಿ||

ಧನ್ಯನಲ್ಲದೆಈತನೇಂಸಾ ! ಮಾನ್ಯನೆಂತಹನೆನುತಲಾಸೌ। ಜನ್ಯನಂಕೊಂ
ಡಾಡುತಂಸುಖಮಯದೊಳಿರುತಿರಲೂ ||೨೯||

ಅಂತುಸಂದಿ ೪೦ಕ್ಕಂ ಪದ ೨೩೬೪ಕ್ಕಂ ಮಂಗಳಮಸ್ತು



## ನಾಲ್ವತ್ತೊಂದನೆಯ ಸಂಧಿ

### ವಿಶಾವಮಾಂಸಕನ ಕಥೆ.

ಸೂ|| ಅರಸುನಿಜಗುಣಿಮಂದಿರದೊಳುಂ । ಡಿರುವವಾರ್ತೆಯಕೇಳುತವ
ನಂ । ಜರಿದುಕುಹಕತನದೊಳುಶಿಕ್ಷಿತನಾದಮಿಮಾಂಸಂ ||

ಪದ|| ಮುಂದುಸುರ್ದ್ದಂವೀರಭದ್ರಪು । ರಂದರನೆನೀಂಕೇಳೆನುತಲಾ ।
ಸ್ಕಂದನವತಾರಾದಿಮೂರ್ತಿಯುಮುಂದೆನಡೆದುದನೂ || ಒಂದುದಿನವೀ
ಶರಣವಲ್ಲಭ । ನಿಂದಲೆಮ್ಮಯಮಾವಗಂಮತಿ । ಮಂದಮೇಡುರನೆನಿಸುವ
ವನೀಂಪತಿಸುರೂತ್ತಮಗೇ ||೧|| ವಾದವಾಗಿಹುದೆಂತೆನಲುಸುಗು । ಣೋ
ದಯನುಮೆನಲಾರ್ಪಬಿಜ್ಜಳ । ನಾದರದಿನಿಜಗುಣಿಗಳಮನೆಯೊಳುಂಡವಾ
ರ್ತೆಯನೂ || ಭೇದವಾದಿಗಳಿಂದೆತಿಳಿದುಪ್ರ।ಮೊದಮೆನೆಮಿಮಾಂಸಕನುಪ
ರಿ । ವಾದಕೃತ್ಯವಮಾಡಿದನುಭೂನಾಥಜಿನಮತದಾ ||೨|| ಬಳಕೆಯೆಂಬು
ದನೀಂಗಿಸತ್ಕ್ರಮ । ಗಳನುವರ್ತ್ತಿಸಿದುರಿತಚೇಷ್ಟಾ । ಕುಳದಿಕಾಮಿಸುತಿ
ರುವರೇಶಿವಭಕ್ತರಾಲಯದೀ || ಒಳಗೊಳಗೆಯುಂಬುವುದುವಿಹಿತವೆ । ಗಳಿ
ಲನೇಮಾಣಿಸದಿರಲುಭೂ । ತಳದಿವರ್ಣ್ಣಾಚಾರಗಳುಕೆಡುಶಿಹವುನಾನಿವನ-||
||೩|| ಮಾಣಿಸದಿರಲುದೋಷವಪ್ಪುದು । ಮಾಣದೆನ್ನುತೆಸತ್ವರದಿತಾಂ ।
ಪ್ರೈಣವಾದನುಛಾತ್ರನಿಚಯವುಸೇವಿಸುತ್ತಿರಲೂ || ಜಾಣರುಗಳೊಡಗೂ
ಡಿಪುಸ್ತಕ। ಪಾಣಿಯಾಗಿಗದಾಧರೀಯವು। ಪಾಣಿನೀಮುಖಸೂತ್ರಭಾಷ್ಯೋ
ತ್ಕರಗಳಂಪೊತ್ತು ||೪|| ಬರುತಿರುವಕರಿಚಯವುತಮ್ಮಟ । ವರಬಿನದಭೇ
ರಿಪ್ರಶಂಖಾ। ಪರಿಮಿತೋದ್ರವವೆಸೆದಿರಲುಭೀಕರವೆನಿಸುವತುಲ|| ಬಿರುದು
ಗಳುಶೋಭಿಸುತಿರಲುನೆರೆ । ತೆರಳಿದನುದಂತಿಗೆಯನೇರುತೆ । ಅರಿದೆನಲು

ಬಿಜ್ಜಳನರಾಧಿಪನಾತ್ಮಗುರುವರನೂ ||೫|| ಈವಿಧದೆನಡೆತಂದುಶಾಸ್ತ್ರವಿ | ಭಾವರಿಷ್ಮನುತತ್ಪುರಾಂತಿಕ | ಭೂವಲಯದೊಳಗೊಪ್ಪಿರುತೆನಂದನವೆನ ಲುಮೆರೆವಾ || ಕೇವಲಸುವಿಸ್ತಾರದೇಶದಿ | ಕೋವಿದನುನೆಲೆಗೊಂಡವಾ ರ್ತೆಯ | ನಾವಿಭೂತಿಗೆಕರ್ತೃವಹನರಪತಿಗೆಪರಿಚರರೂ ||೬||

ಪೇಳಲೊಡನೇಳುತೆಸಭಾಮನು | ಜಾಳಿಸರಿವೇಷ್ಟಿಸಿನಡೆಯಲುನಿ | ರಾಳ ಭಕ್ತಿಯಭರದಿಪ್ರೊಕ್ಕನುಬೇಗರವಿಕಿರಣಾ || ಪಾಳಿವಿಮುಖ್ಯಕೋಪವನ ವದ | ಯೂಳುವಧಿಕತರಮಣಿಭೂಷಣ | ಜಾಲಶೋಭಿತನಂವ್ಯಗಾಜಿನ ಚರ್ಚಿತೋದ್ದೀಪೀ || ೭ || ಚಂದನಸಮಂಚಿತನಿಟಿಲನನ | ಮಂದತರಕ ಕ್ಷಾಂತರದೊಳುಮ | ಹೇಂದ್ರಜಾಲಮನುಪ್ರಸಂಚೆಯಸಂಪುಟನಮಡನ || ಸುಂದರಶರೀರದಿವಿಲೇಪಿತ | ಚಂದನದಿಸ್ಫಟಿಕೈಕಮಾಲಾ | ಬೃಂದಜನಸಂ ತತಿಸಮಾಹಿತನಾದದೇಶಿಕನ ||೮|| ಕಂಡುವಿನಮಿತನಾಗಿಸನ್ಮಣಿ | ಕಾಂಡ ಕಾಂಚನಮುಖ್ಯವಹವಸು | ತಂಡಮಂಘನಭಕ್ತಿಯಿಂಸನ್ನಿಧಿಯೊಳಿಡಲ ವನೂ || ಕಂಡುಮನದೊಳಗೀತನೆನ್ನೊಳ | ಖಂಡಭಕ್ತಿಯನೆಡೆಬಿಡದಹೃ ತ್ಪುಂಡರೀಕನೆನುತ್ತೆಮುಡದೊಳುಮೌಕ್ತಿಕಾಹಾರ ||೯|| ವೊಂದನರ್ಘ್ಯ ವೆನಿಪುದಪ್ರೀತಿಯು | ಮುಂದುಗೊಂಡಿರೆಹರ್ಷಪೂರ್ವಕ | ದಿಂದೆಕುಡಲದ ಧರಿಸಿತದ್ಗುರುವರನಮುದನಿಯುತ || ಸಿಂಧುರದಮೇಲ್ಕುಳ್ಳಿರಿಸಿತಾಂ | ಮುಂದೆನಡೆತರೆವೇತ್ರಹಸ್ತರು | ಸಂದಣಿಯುತೊಲಗಿಸುತೆನಡೆಸರಿಎಂದು ಘುಂಕಿಸಲೂ ||೧೦|| ಸದನಕೈತರೆಮಣಿಮಯಸುಸಾ | ಧದಿಭಕುತಿಯಿಂ ಸಿಂಹಪೀಠವ | ಮುದವೊಳಿಡಿಸಿತದೀಯಸಾವಿಪ್ಯದೊಳಗರ್ಹವಹ || ಸದರಿನೊಳುಕುಳಿತಿರುವಸಮಯದಿ | ಸದಯನಹಬಸವಾಧಿನಾಥನು | ಮು ದವೊಳೈತಂದಾಗಘನತರಮಣಿಮಯಸುಪೀಠ || ೧೧ || ದಲ್ಲಿಕುಳಿತಿಹಸಮ ಯವೊಳುಕಂ | ಡುಲ್ಲಸಿತಮಾನಸದೊಳುಂಭೂ | ವಲ್ಲಭನಕೂರ್ತೆಂದಗ ರ್ವದಿನೋಡಿನಮಿಸದಲೇ || ನಿಲ್ಲಲಾರದೆಎನ್ನಸನ್ನಿಧಿ | ಯಲ್ಲಿಯುನ್ನತಪೀಠ ದೊಳುತದ | ವಿಲ್ಲದಲೆಕುಳಿತನುಭಯವುವೊಡಲಿಲ್ಲಲಾಇವನು ||೧೨|| ಯೋ ಗಿಯೋಗುರುವರನೊಆರ್ಯನೊ | ಹೀಗೆರಾಜಸಭಾಂತರಾಳದ | ಸೋಗಿ ಸಿಂಸುಳಿದಾಡಗುಡುವುದಿದಾವವಿಧಿಪೇಳೂ || ಬೇಗದಿಂದೆನಲಾಗಿಶಿರವನು |

ಬಾಗಿದೇಶಿಕಸಾರ್ವಭೌಮನು । ರಾಗಮುಪ್ರತಿಸಿಧಿಯುಗಣಿಸಲ್ಕೀತಸಾ ಮಾನ್ಯ ॥೧೩॥ ಮಾನುಷನದೆಂತಹನುಭಕ್ತಿನಿ । ಧಾನಸತ್ಪ್ರಮಥಾಗ್ರ ಗಣ್ಯನು । ದೀನರಕ್ಷಕನರಿಭಯಂಕರನಾಶರಚ್ಚಂದ್ರ ॥ ದೇನುಡುಗ್ಧ ಸು ರೇಂದ್ರಗಜನಂ । ಥಾನಕೀರ್ತಿ ಸುಪೂರ್ಣದಿಕ್ತಟ । ಸೂನಶರದುರ್ವಿಷಯ ಹರನಂಚಿತಸುಧಾಲಾಪ ॥೧೪॥ ನಿರತನೆನಿಸಿರಲೊಂದಿನಂಮಂ । ದಿರಕೆಹ ರಿಸಲ್ಬರಲುತಸ್ಕರ । ನರರುವಾರ್ತಾಕಫಲಗಳಧರಿಸಿರುತಿರಲವುಗಳಂ ॥ ಸರ ಮಶಿವಲಿಂಗಗಳಗೈದನು । ಚರವರರುಬೇಡಲ್ಬರದಿಮುಂ । ದಿರುವಜೋಳ ದರಾಶಿಯಂಪೊಸಮುತ್ತನಿಸುತಿತ್ತಂ ॥೧೫॥ ಮಿಂಡಭಕ್ತರುಬೇಡೆದ್ರವ್ಯದ। ಖಂಡರಾಶಿಯನಿತ್ತವಿತರಣ । ಪಂಡಿತೋತ್ತಮನೆನಗದೆಂದಿನದಂತೆತೋರಿ ದನು ॥ ಖಂಡಿತದಿವಾದಿಸಲುವರಕುಲ । ಮಂಡನನೆನಿಸದವನಹಸ್ತಸು । ಪುಂಡರೀಕದಿಪಾಲ್ಗರೆದನುಸಭಾಂತರಾಳದೊಳೂ॥೧೬॥ಪುರದೊಳಗೆಗೊಲ್ಲ ತಿಯುವಮುದದಿಂ । ಭರದಿಪಾಲಂಮಾರುತ್ತೈತಂ । ದುರವಣಿಸಿಪಂಕದೊಳು ಜಾರುತೆಬೀಳ್ವಸಮಯದೊಳೂ ॥ ಗುರುಬಸವನೀನೆಂದುಸ್ಮರಿಸಲು । ಕ ರದೊಳಿಲ್ಲಿರುತಿರ್ದ್ದಪಿಡಿದನು । ಧರೆಯುಮೇಲ್ಬೀಳ್ಗೊಡಪತೆರದಿಂಡಂತುಮಲ್ಲ ದೆಯುಂ ॥೧೭॥ ಶಾತ್ರವರಸಂಕ್ಷಯುವಮಾಡಿಧ । ರಿತ್ರಿಯೊಡೆಯರುಗಳೊ ಳುಕಪ್ಪವ । ಪೂರ್ತಿಯಂಕೈಕೊಂಡುಮುದವಂಪರಿಹರಿಸಿರಜತ ॥ ಗೋ ತ್ರಚಂದ್ರಶರಾಹಿಪತಿ । ನಕ್ಷತ್ರವಜ್ರಸದೃಕ್ಷಕೀರ್ತಿಗೆ । ಪಾತ್ರನಂಮಾಡು ತೆಪ್ಪೊರೆದಬಸವೇಶಸಾಮಾನ್ಯ ॥೧೮॥ ನೆನಿಪಸಚಿವನುಮೆಂತೆನಲ್ಬರಹು। ದು ನುಪಮುಪ್ರತಿವಾದಿಭೀಕರ । ಘನತರೋರ್ಜಿತಶಂಭುಭಕ್ತಿಧನಾಢ್ಯನರಿವ ರ್ಗ್ಗ ॥ ವನದಪಂಗ್ತಿಸಮೀರಣನಿಳಾ । ಮನುಜರಂದದೊಳರಿದುಕ್ಷುಲ್ಲಕ । ನೆನುತಲರಿಯದಿರಯ್ಯ ಸ್ವಾಮಿಾನಲುಬಾಲವನೂ ॥೧೯॥ ತುಳಿಸಿಕೊಂ ಡುರಗನೊಲುನೆರೆಪ್ರ । ಜ್ವಲಿಸುವನಲನೊಳಾಜ್ಯವೆರಚಿದ । ಬಳಕೆಯುಮ್ಮ ಳದಂದದಿಂಭೂನಾಯಕನೆಯಿಂತೂ॥ ತಿಳಿದುಮೋಸದಿವ್ಯರ್ಥವಹನುಡಿ। ಗ ಳನುಡಿವುದೇಕಿನ್ನುಸಾಕೈ। ಇಳಿಯೊಳೀತನುತಿಳಿಯೆಪರವಾದಿಗಳನೋಡಿ ಪನೆ ॥೨೦॥ ವಶವಹುದೆಮತ್ಸನ್ನಿಧಿಯೊಳತಿ । ಕುಶಲತೆಯೊಳಿಂತೆತ್ತಿನುಡಿ ಯಲು । ವಿಶದದಿಂವೇದಾಂತಶಾಸ್ತ್ರಾಗಮುಮುಖದಿಮಂತ್ರ ॥ ಪ್ರಶಮಿತಾ

ಷಧಯಂತ್ರತಂತ್ರಸ । ದೃಶತೆಯೊಳುವೈಚಿತ್ರ್ಯವೆಂದೆನ । ಲೆಸೆದಿರುವವನಾ
ಹೇಂದ್ರಜಾಲಿಕಶ್ರೇಷ್ಠನೈನಾನೂ ॥ ೨೧ ॥ ಸದ್ಧರಿತ್ರೀತಲದೊಳರಸಲು।
ಬೋಧ್ಯರುಂಟೆವಿಚಾರತೆಗೆಸಂ । ಸಿದ್ಧದಿಂದಾವಂವಿಚಕ್ಷಣಸೂತ್ರಜನ್ನೊ
ಡನೆ ॥ ಸಾಧ್ಯವಹುದೈವಾದಿಸಲ್ಕೆಪ್ರ । ಸಿದ್ಧದಿಂದೆನ್ನುತ್ತವರಸಾ । ನ್ನಿ
ಧ್ಯದೊಳುಹಾಯ್ಕಿದನುವಾಗ್ಬಂಧನಲಿಪಿಯಚಲೆ ॥೨೨॥ ಯಿಂತುಹಾಯ್ಕಿ
ಲುಮನದೊಳಗೆಯಣು । ವಂತುಹೆದರದೆನೋಡುತಂನಸು । ತಂತವಿಲ್ಲದ
ಮಹಿಮನಾಗಳ್ಕೋಲಶಾಂತಯ್ಯ ॥ ನಿಂತಿರಲ್ಕಾರಯ್ಯುವತಂಚಿ । ತ್ಕಾಂ
ತೆಯರಮಣನಾದಬಸವಯ । ನುಂತವಕದಿಂಸಂಜ್ಞೆಯೊಳುತೋರಿಸಲ್ಕಾ
ಲಿಪಿಯಾ ॥೨೩॥ ವಾಲೆಯಂಕರದಿಂಕೊಳುತ್ತಾ । ಭೀಲಸಾಹಸದಿಂದೆಶೀಳ್ವು
ತೆ । ಮೇಲುಗಡೆಬಿಸುಡಿದನುಕರನಖಕೋಟಿಯಿಂದದಭೂ ॥ ಪಾಲಗುರು
ಶಿಳಿದಮಿತಕ್ರೋಧ । ಜ್ವಾಲೆಗಳುಹೆರ್ಚಿರಲುಮಾರಣ । ಮೂಲಿಕಾಪ್ರತಿ
ಬಂಧವೆಸೆಯಲುಕಾಲಿನಿಂದೊರಸೆ ॥೨೪॥ ಅತಿಶಯವಿದೃಕ್ಸ್ತಂಭನವನು
ವಂ । ಕೃತಕಿಯಸೆಯಲ್ಕುಪೆನುತ್ತಾ । ಯತದೊಳೊಡುತೆತೆರಳಿಸೆಬಲ್ಲಿ
ಕತೊವಲಸುರಳಿಯನೂ ॥ ಪ್ರತಿರಹಿತನಹನಂಡನಾಥನ । ಹತಿಸಲೋಸು
ಗಬಿಸುಡೆಶಾಂತಯ । ಮತಿಯೊಳರಿಯುತೆಪಾದರಕ್ಷೆಗಳಂಪ್ರಯೋಗಿಸಲು
॥೨೫॥ ಭರದಿಮೇಲ್ಗಡೆಹಾಯ್ಯುತೊಂದಾ । ಹರಿಣಚರ್ಮದಸುರಳಿಯಂಪರಿ
ಹರಿಸುತೊಂದವನಂಪ್ರಹರಿಸಲ್ಕವನವಕ್ತ್ರದೊಳೂ ॥ ಇರುವದಂತಗಳು
ದುರಿಬೀಳಲು । ಧರಣಿಪನುಸಭೆಯುವದುಮದ್ಭುತ । ಭರಿತಚಿತ್ತರುಮಾಗಿ
ತಲ್ಲಣಗೊಳುವಸಮಯದೊಳೂ ॥೨೬॥ ಆಮಹಾತಾಡನಕೆಜ್ವರಸರ । ಸ್ವಾ
ಮಿಮೂರ್ಛಾಕ್ರಾಂತನಾಗುತೆ । ಭೂಮಿಯಾಮೇಲೊರಗಿಘಳಿಗಿಯನಂತ
ರದೆತನ್ನ ॥ ಕೋಮಲಕರವಮುಗಿವುತೇಳ್ವ।ಭ್ರಾಮಕನವ್ರೋಲ್ಕೆಯಹೋ
ಲಿಸು । ತೇಮಹಾವಿನಯದಿಬಸವದಂಡೇಶನಂಘ್ರಿಗಳಾ॥೨೭॥ ಮೇಲೆಬಿದ್ದು
ವಿನಮಿಸುತಂಕರು । ಕಾಲವಾಲಮಹೀತಲಾಗತ । ಶೂಲಿಯಭವಜಗದ್ಭ
ರಿತಸ್ವೋತ್ಕೃಷ್ಟಕಕೀರ್ತಿಸುಸಂ ॥ ಕಾಲವರ್ತಿಯಪಾರಸುಕಲಾ । ಜಾಲಸ್ಫೂ
ರ್ತಿಯೆನಿಪ್ಪನಿಮ್ಮವಿ।ಶಾಲಮಹಿಮಾತಿಶಯಮಂಬಣ್ಣಿಸಲದಾರ್ಗಳವು ॥೨೮॥
ಗೌರವವನಾಂತಿಳಿಯಲರಿಯದೆ। ಕ್ರೂರತನದೊಳಪಾಯವೆಣಿಸಿದೆ। ಸ್ವಾರಕ

ಗುಣಾನಿಧಿಯೆಎನ್ನ ಪರಾಧಗಳಕ್ಷಮಿಸು ॥ ಧೀರಗುಣದಾತಾರನತಮಂ ।
ದಾರಶರಣಾಗತಜನಾವನ । ಮಾರಸಂಹರನೈಜರೂಪನಮಹಿಮೆಯರಿಯುದ
ಲೆ ॥ ೨೯ ॥ ನಿಂದಿಸಿದಕಾರಣವಿಶೀಕ್ಷೆಯು । ಹೊಂದಿರುವೆಪೂಷನತೆರದೆನಿ।
ಮ್ಮಿಂದೆಯಾದುದುಶೀಕ್ಷೆಯೆನಗಿಂತೆಂದುವಿನುತಿಪನ ॥ ಕುಂದಪರಿಹರಿಸು
ತ್ತಲವನನ । ಮುಂದಕರುಣದಿನೋಡುತಂಬಾ । ಲೇಂದುಶೇಖರಮೂರ್ತಿ
ಶ್ರೀಬಸವಾರ್ಯ್ಯವರಮಂತ್ರೀ ॥ ೩೦ ॥ ತ್ವರಿತದಿಂನಡೆಯಲ್ಕೆನಿಜಮಂ। ದಿರಕೆ
ನಂದೀಕೋಲಶಾಂತಯು। ನುರುತರದಮಹಿಮಾವಿಶೇಷವಮೆಚ್ಚಿಮನದಲ್ಲಿ॥
ನರರುನಿಜಭವನವನುಸೇರಲು । ಧರಣಿಪನಗುರುವತಿಮುದದಿಶಿ । ಸ್ಯರುಸ
ಹಿತಬಸವೇಶ್ವರನಶುಭಮಂದಿರಕೆಬರಲೂ ॥ ೩೧ ॥ ಆತನೈತಂದಿರುವವಾರ್ತೆ
ಯು । ಪೂತಶಕ್ತಿಸಮೇತನಹಪ್ರ । ಖ್ಯಾತಸಚಿವಾಗ್ರೇಸರನಬಳಿಗೈದಿಚರ
ನೋರ್ವ್ವಂ ॥ ಸ್ಫೀತವಿನಯುಸಮೇತದಿಂವವ । ನಾತದರ್ಧವತಿಳುಹಲೊಡನೆ
ಮು । ಹಾತಿಶಯವೆನಿಸುವಸಭಾಸ್ಥಾನಾಂತರದಿಕುಳಿತು ॥ ೩೨ ॥ ಸ್ಥಿರಸು
ಖಾನುಭವೈಕಗೋಷ್ಠೀ । ಭರದೊಳಿಹಸಮುಯದೊಳುಕುಡ್ಯಾಂ । ತರ
ದಿಬರೆದಿಹಭಕ್ತಗಣಮುಂಕಂಡುವಿಾವಮಾಂಸಂ॥ ಉರುತರಸವಿಸ್ಮಯದಿಸ್ವಾ
ಮಿಯೆ । ಪರಮಪಾವನಮೂರ್ತಿಶ್ರೀಬಸ । ವರಸನೇಈಸುರುಚಿರಪ್ರತಿ
ಮೆಗಳಿಗಿಹದಲ್ಲಿ ॥೩೩॥ ಜೀವವಿರಲೆಂತಿರ್ಪವ್ರೋಎನ್ನೆ। ಕೋವಿದನುದರಹ
ಸಿತವದನದಿ । ಶೀವಿರುವನಿನ್ನಿಷ್ಟವೆಂತಿಹುದಂತೆಯಹುದೈಸೆ ॥ ಭಾವಿಕನೆ
ನೋಡೆನುತೆದೇವರ । ದೇವರೂಪರಕಂಡುಶರಣೆನು। ತೇವಿಮಾದಿಂಕರೆಯ
ಲಾಕ್ಷಣಮಾತ್ರದೊಳಗೆದ್ದು॥೩೪॥ ಬಿದ್ದವೋಲಿಳಿನಾಯ್ದೊಡನೆಯುಸು।ಪೊ
ದ್ದೆಸಂದಣಿಗೊಂಡುನೋಟಕೆ । ಚೋದ್ಯರೆಂದೆದಿಸಿರ್ಪರಭವಾರ್ಚಕವರಿ
ಷ್ಠರು ॥೩೫॥ ಇದ್ದಜಡೆಮುಡಿಗಳನುಸವರಿಸು । ತೆದ್ದುಕಾವಿಯಕಂಬಳಿ
ಗಳಂ । ಹೊದ್ದುಸರಭಸದಿಂದಲೊಬ್ಬರನೊಬ್ಬರುಗಳುನಿಜ ॥೩೬॥ ಕರದಿ
ಜಾಡಿಸುವರುಗಳುಂವಿ । ಸ್ಫುರಿತಶೂಲಗಳಂಪಿಡಿದವರು । ವರವ್ಯಜನಗಳಪಿ
ಡಿದುಬೀಸುವಪುಷ್ಪಶಮನಾರ್ಥಂ ॥ ಅರಿದೆನಿಪಗಡ್ಡಗಳನಲುಗಿಸು । ತುರ
ವಣಿಸಿಕೌಪೀನಮೇಖಲ । ವಿರದೆಸಡಲಲುಬಿಗಿದುಕಟ್ಟುವರುಗಳುರುದ್ರಾ
ಕ್ಷ ॥೩೭॥ ಮಾಲಿಕೆಗಳಂಧರಿಸಿಕಕ್ಷಾ। ಪಾಲಗಳಸ್ಕಂಧಾಗ್ರದಲಿಧರಿ। ಸೀಲ

ಲಿತದೇಹಂಗಳಿಂಶೋಭಿಸುತಲಿರ್ಪವರಾ ‖ ಲಾಲಿತೋದ್ದಿವ್ಯಾಂಘ್ರಿಗೆರಗು ತೆ । ಶೂಲಿಸನ್ನಿಭನಗುತಲಾಭೂ । ಪಾಲಗುರುವಿಗೆನೋಡೆನುತ್ತೆಚ್ಚರಿಸ ಲಡ್ಬುತದೀ ‖೩೭‖ ಆಮಹಾಬಸವೇಶನನುತಿಸು । ತೇಮರಳವಿಮಾನಾಂಸ ಕಂನಿಜ । ಧಾಮುವನುಸೇರುತ್ತೆಸುಖದಿಂದಿರೆಬಳಿಕಭಕ್ತ ‖ ಪ್ರೇಮಿಯುಹ ಶ್ರೀಬಸವರಾಜನು । ಭೂಮಿಪನರಾಜ್ಯಪ್ರಭಾರವ । ನೇಮದಿಂನಡೆಸುತಂ ಗಣಪದನೀರಜಂಗಳನು ‖೩೮‖ ಪೂಜೆಸುತಲಸಮಾನಮಹಿಮವಿ । ರಾಜ ತೆಯೊಳಿರುತಿರ್ಪನೆನುತಾ । ರಾಜಶೇಖರಸೂನುವರನೈಜಾವತಾರಕನು‖ ರಾ ಜತತಿಶೀರ್ಷಮಣಿಗರುವು । ತ್ರೀಜಗದಿವೈಚಿತ್ರ್ಯವೆನೆವಿ । ಭ್ರಾಜಮಾನ ವೊಳೆಸೆವಶರಣಚರಿತ್ರೆಯುಸುರಿದನೂ ‖೩೯‖

ಅಂತು ಸಂಧಿ ೪೧ಕ್ಕಂ ಪದ ೨೪೦೩ಕ್ಕಂ ಮಂಗಳಮಸ್ತು.

---

## ನಾಲ್ವತ್ತೆರಡನೆಯ ಸಂಧಿ.

## ಚಾಮಯ್ಯನವರ ಕಥೆ.

ಸೂಚನೆ ‖ ಚೆರರುಚಾಮಯ್ಯನನುದೊಬ್ಬಲು । ಬರಿದೆಯಾಗೆಪದಾರ್ಥ ಗಳುಬಳಿ । ಕರಿದುಮನ್ನಿಸಲಾತನನುಮುನ್ನಿನವೊಲಾದವಲಾ ‖

ಪದ ‖ ಗಣಮಹಿಮನೆಂದೆನಿಸಿಪೆಂಪಿನ । ಗುಣವರಿಷ್ಟನೆನಿಸುತೆಮಹಿ ಯೊಳು । ತ್ರಿಣಯನಪರಾವತರನಹಕ್ಕೈಕೂಲಿಚಾಮಯ್ಯ ‖ ಪ್ರಣುತಪಾ ವನಮೂರ್ತಿಯವ್ರತ । ವೆಣಿಸಲರಿದರಿದದನುನಿರುಪಮ । ಪ್ರಣವಗಾತ್ರನು ಸತ್ಯವಾಕ್ಯಧುರೀಣವಿಲಸಿತನು ‖ ೧ ‖ ಧೀರಶೇಷಾಭರಣಸತ್ಪದ । ಸಾರ ಸಾಯತಚಿತ್ತಕಾಮುಮು । ಖಾರಿಪರಿಹರಶಕ್ತನಾಶಾಷ್ಟಪ್ರಪೂರ್ಣಯಶಃ‖ ಸ್ಫಾರನಾಗುತೆಮೆರೆವುತಿರ್ದ್ದಮ । ಸಾರತಂದೀನಾವನವ್ಯಾ । ಪಾರಪಾ ರೀಣ್ಯತೆವಿರಕ್ತಿನಿಯುಕ್ತನಾಗುತಲಿ ‖ ೨ ‖ ಅತುಲಿತಸುಕಲ್ಯಾಣನಗರ । ಸ್ಥಿತನುವಾಗುತ್ತನುಪಮೋದ್ವಿ । ಶ್ರುತಚರಿತನೆನಲೊಪ್ಪುವೀತನುಶರಣ ಗೇಹಾಂತ ‖ ರ್ಗತಸುಕೃತ್ಯಾಚರಣೆಯಿಂಸ್ವಾ । ಗತಪದಾರ್ಥನಿಯಾಮಕ

ದೊಳೂ । ರ್ಜಿತನಿಬಂಧನವೆಡೆಬಿಡದೆಚರವರಸಮರ್ಚನವ ॥೩॥ ಮಾಡುತಿ ರುತ್ತೊಂದಿನದೆಸಂತಸ । ಮೂಡಿಬಸವನಕಾಂಬಬಯಕೆಯು । ಕೂಡಿರುತೆ ತತ್ಪ್ರಕಟಿತಾಲಯಬಾಹ್ಯದ್ವಾರದೊಳೂ ॥ ನಾಡೆಮೆರೆದಿಹಸೋಜಿಗವ ದಂ । ನೋಡುವರಿಗತಿಶಯದಿಚಪ್ಪರ । ಗೋಡೆಯನುಸರಿಸುತ್ತಲೊಂದೆ ಸೆಡಲ್ಲಿಕುಳ್ಳಿರ್ದ್ದ ॥೪॥ ಪೋಗಿಬರುತಿಹಜನರಸಂದಣಿ । ತಾಗುವದುಎಂ ದೆಂಬಭಯದಿಂ । ಸಾಗಲರಿಯದೆನಿಂದುಮೆಲ್ಲನೆಸಭಿಕರಿರುತಿರ್ಪ ॥ ಭೋ ಗಮುಂಟಸವ್ವೈದಿಯಗಣಿತ । ವಾಗಿರುವಭಕ್ತಾಳಿಸಹಶಿವ । ಯೋಗಿಜನ ಮಂದಾರನಹಬಸವೇಶನಿರುವಿಕೆಯಾ ॥ ೫ ॥ ಕಾಣಲರಿಯದೆನಿಂದಿರುತೆಮೇ ಣ್ । ಜಾಣರೊಡನಾಸಚಿವರಶಿರೋ । ಮಾಣಿಕವೆನಿಸುವಾತನಸುದರ್ಶನ ವೃಷಟಿಸಡಲು ॥ ಕ್ಷೋಣಿಯೊಳುಗುಡಪೂರ್ಣಕೋಶವ । ನೂಣಿಮುತ್ತಿಹ ಮಶಕಚಯಪರಿ । ಮಾಣದಿಂದಿಹರ್ಕೈಸೆಬಡವರನಾರುಕೇಳುವರೂ ॥ ೬ ॥ ಜಗದೊಳಾನ್ಯಾಯದವೊಲಿಂತಿರೆ । ಮಿಗೆಬಯಕೆಸಲ್ಲುವುದದೆಂತೆನೆ । ಮೃ ಗಕರಾಂಘ್ರಿಸುಭಕ್ತರಾವಚನವನುಕೇಳುತ್ತೆ ॥ ಅಗಣಿತಾನುರ್ವದೊಳುಕೆ ಲಬರು । ನಿಗಮಹಯಮೂರ್ತಿಗಳುನುಡಿದರು । ಸೊಗಸದಿಹಕುಂಠಾನು ಲಾಪಂಗಳನುಡಿವುತಿಹನೂ ॥೭॥ ಎತ್ತಣಿಂದಂಬಂದದೆಲ್ಲಿಮಿ । ರುತ್ತಿಹನೊ ಇವನಾರುಕರಸಿದ । ರುತ್ತಮರಮುಖಿಮಾನ್ವಿತರನೆಲ್ಲರನೆದುರೆಜರಿವ ॥ ಮ ತ್ತಿಗನುಕೈಕೂಲಿಮಾತುಗ । ಳೆತ್ತಿನುಡಿಯುವಬದರುಗಳಕೇ । ಳುತ್ತೆಸು ಮ್ಮನೆಮಿರಲುಮಗುಳ್ದಿನ್ನೆಂತುಬಗುಳುವನೋ ॥೮॥ ಅದುವೆಕಾರಣದಿಂದಿ ವನನೀ । ಸದನದೊಳುನಿಲಿಸದಿರೆನುತೆದೊ । ಬ್ಬಿದರುಕೊರಳೊಳುಕೈಯ್ಯೊ ಹಾಕುತೆಭೀತಿಗೊಂಡದಕೆ ॥ ಬೆದಬೆದನೆಬೇವುತ್ತೆಕಣ್ಗಳೊ । ಳೊದವಿಸುರಿ ಯುವನೀರ್ಗಳಿಂನಿಜವದನವುನೆನೆಯೆಗದ್ಗದದಿಮಿಗೆಮಿಕ್ಕಕಳವಳಿಸೀ ॥೯॥ ಕಂಬಿರುವವೊಗದಿಂಪೆತನ್ನನು । ನೊಂದಿಸಿದವಂಚಕರಬೊಯ್ಯದೆ । ಮುಂ ಡುಗೊಂಡಿಹಚೆಮದುಸುರಿವುತಿರಲ್ಕವನುತನ್ನ ॥ ಮಂದಿರಕೆಚಿಂತಾತುರದೊ ಳೈ । ತಂದುಕನಲುತ್ತಂಗಣದೊಳೇ । ಸಂದಿರುವಶಾಂತಿಲ್ಯವೃಕ್ಷದಮೂಲ ವಂಬಳಸಿ ॥೧೦॥ ಇರುವವೇದಿಕೆಯೊಳುಕುಳಿತುಹೃ । ತ್ಸರಸಿಜಾಂತರದೊ ಳುನೆನೆದನಾ । ಸರಿಯದೇಬಸವೇಶ್ವರನಕಾಂಬುವತವಕದಿಂದೇ ॥ ತೆರಳಿದೆ

ನುತತ್ಪವನದೊಳಗಿಹ । ಚರವರರುಗಳನೇಕೆಜರೆದನೊ । ಗುರುವೆಕೆರಳ್ದ
ವರುಗಳುಎನ್ನನುಇರದೆನೂಂಕಿದೊಡೆ ॥೧೧॥ ಸುಮ್ಮನಿರಬೇಕಾಯ್ತುಕ
ಟಇದು । ಸಮ್ಮತವೆಶಿವಭಕ್ತವತ್ಸಲ । ನಿಮ್ಮನುಜ್ಞೆಯದಿಂತಿಹುದೆಪ್ರತಿ
ದಿನದಕೂಲಿಯನು ॥ ಕೆಮ್ಮನೇಕಳಕೊಂಡೆಮೋಸದೊ । ಳೆಮ್ಮನಡರಿದ
ಪಾಪಿಬಡತನ । ದಿಮ್ಮಗೆಕುರೂಪಿಗನುಮಾಗಿರುತಿರ್ಪಕಾರಣದಿ ॥೧೨॥
ಗಣವರೇಣ್ಯರುಗಳುಸಕಲರುಂ । ತ್ರಿಣಯನಪರಾವತರಮೂರ್ತಿಗೆ। ಪ್ರಣ
ತನಾಗುವಕಾಂಕ್ಷೆಯಿಂನಾಂಪ್ರೋಗಲೆನ್ನವನೂ ॥ ಎಣಿಕೆಗೊಳ್ಳದೆನೋಡ
ಲೀಸದೆ । ಒಣಹರಟೆಯಿಂಹೊಯ್ದರೆನ್ನಯ । ಹಣೆಯುಬರಹವದಿಂತಿಹುದೆ
ಶ್ರೀಮಂತರಾದವರು ॥೧೩॥ ಈವಿಧದಿಹಿಂಸಿಪ್ರದುಧರ್ಮವೆ । ಭೂವಲಯದೊ
ಳುಧಾರುಣೀರಥ । ನೇವಿಹಿತನೆನಿಸಿರುವಶ್ರೀಬಸವೇಶ್ವರನುನಿನ್ನ ॥ ನಾವ
ಪರಿಯಿಂದರ್ಚಿಸಿದನೋ । ದೇವನಾನಿನ್ನೇನುಕೊರತೆಯ। ಭಾವದಿಂಮಾ
ಡಿದೆನಭಿಷ್ಟಸುಭಾಗ್ಯಯುತನೆನಿಸಿ ॥೧೪॥ ಆಮಹಾತ್ಮನಮೆರಸುತೆನ್ನಂ ।
ಹೀಗೆನೆರೆಕೊರತೆಯಹಬಡತನ । ನೇಮಿಸುತೆಕಡುಗಾಸಿಗೈವುದುನೀತಿಯೆ
ನಿಸುವದೇ ॥ ಭೂಮಿಯೊಳುಸಂಪದವಿರುವರಿಗೆ । ಪ್ರೇಮದಿಂಕುಡುತಿರ್ಪ
ರೆಂಬುವು । ದೀವೊಡಲೆಯಾರೂಢವಾಗಿಹುದೈಸೆನೀಎನ್ನ ॥೧೫॥ ನೀಸ
ಮಯದೊಳುಗಾರುವಾಳ್ಪುದು । ವಾಸುಕೀಭೂಷಣನೆಕಾರು । ಣ್ಯಾಸ
ಮೇತನೆಸಾಂಬಎನ್ನುತಲಿಂತುಪರಶಿವನ॥ ಬೇಸರಿಸಿಪ್ರಾರ್ಥಿಸುತೆಕಾಯಕ।
ವಾಸರದಿಮಾಳ್ಪುದನುಬಿಟ್ಟತಿ । ಥೀಸಮರ್ಚನಕೃತಿಯಮನಸಿಗೆತಾರದೇ
ಶರಣ ॥೧೬॥ ನಿರಲುಮಿತ್ತಲ್ಪಂಡನಾಥನ । ವರಗೃಹಾಂತರದಲ್ಲಿಎಂದಿನಪ
ರಿಯುಪಾಕವಗೈವತಂಡುಲಪ್ರಮುಖವಹವಸ್ತು ॥ ಸರಿಕರವುಕಾಣದಿರೆವಿ
ಭ್ರಮ । ಭರಿತಮಾನಸನತಿಭರದೊಳೈ । ತರುತೆಚಾರನುಬಂದೆರಗಿನಡೆದಿ
ರುವತತ್ಕ್ರಮವ ॥೧೭॥ ಬಿನ್ನಯಿಸೆಬಸವಣ್ಣನುಂನಿಜ । ಹೃನ್ನಳಿನದೊ
ಳುತಿಳಿಯಲಿದುವೆಮ । ಹೋನ್ನತಾಶ್ಚರ್ಯದಕೃತಿಯುಸಂಘಟಿತವಾಯಿತ
ಲಾ ॥ ಚಿನ್ನಿಧಿಗಳೆನಿಸಿರುವಘನಸಂ । ಪನ್ನಲಿಂಗಸಪರ್ಯಗಳಕಾ।ರುಣ್ಯಪರಿ.
ಪೂರ್ತಿಯೊಳದಾವೆಡೆಯಲ್ಲಿಏನೇನು ॥೧೮॥ ಕೊರತೆಯೆಂಬುವುದಿಲ್ಲವಿಂತಿದು।
ನಿರುಪಮಾದ್ಭುತವಾಗಿಕಾಣಿಸು । ತಿರುವುದೇನಪ್ಪವುದೊಮುಂದಕೆಶರಣತ

ತಿಗುಚಿತ ॥ ತರಸದುಪಚಾರಗಳಮರದೆನೊ । ಹರಹರಾಇದನರಿಯಬಾರ
ಪು । ಚರವರೇಣ್ಯರಕಂತವೂತ್ರವೆಚರಣಗಳಿಗಿದಿರು ॥ ೧೯ ॥ ಪೋಗಿವಿನ
ಮಿತನಾಗಿಶಿರವಂ । ಬಾಗೆನೋಪಾದ್ಯಾದಿಕಂಗಳ । ಬೇಗದಿಂದೊಡರಚಿ
ಸೊಪೀಠಂಗಳನಿಡಲರಿಯೆನೋ ॥ ಯೋಗಿಜನಸಂತತಿಯನೇಮವ । ನಾ
ಗುಮಾಡೆನೊಳಿವರೊಳಿಪ್ಪನು । ರಾಗವಂತಣಿವಂತೆತೀರಿಸದಾಪೆನೋಒಡೆ
ಯರ್ ॥೨೦॥ ನೇಮಿಪಪವಿಧಿಗಳನೊಡರ್ಚೆನೊ। ಸ್ವಾಮಿಗಳಮನದಿಷ್ಟರು
ಚಿಕರ ! ಪ್ರೇಮಹಿತಪಕ್ವಾನ್ನಗಳಭೋಜನವಮಾಡಿಸೆನೋ ॥ ಕೋಮಲ
ಸ್ಫುಟವಿಕಚಕುಸುಮಸು । ದಾಮಚಂಡನವೀಟಿಕಾಳಿಯನೇ । ಮದಿಂ
ದೀವುತ್ತೆಸಂಮುದಗೊಳಿಸೆನೋಹಂಸ ॥೨೧॥ ತೂಲಿಕಾಶಯ್ಯಗಳೊಳೊರ
ಗಿಸು । ತೇಲಸಿತಚಾಮರದಿಢಾಳಿಸೆ । ನೋಲಲಿತಮೃದುಮಂಗಳಾಂಚಿತ
ಪಾದಪದ್ಮಗಳಾ ॥ ಲೀಲೆಯಿಂಸೇವಿಸದಿಹೆನೊಈ । ಮೂಲವರಿಯದುನಿ
ವಿಲಪ್ರಪ್ರೈ । ಜ್ವಾಲವೀಯೆಡೆಲೋಪವಾದುದುಜಂಗಮಾವಳಿಯ ॥೨೨॥
ನಿರುತಪೂಜಿಸುತಿರುವನೇಮಕೆ । ಕೊರತೆಬಂದಿಹುದೆನುತೆಚಿಂತಾ । ತುರ
ದೊಳಿರುವವಸರದಿಚಾರನುಬಂದುನಮಿಸುತಲೀ ॥ ಪರಮಪಾವನಮೂರ್ತಿ
ಗುರುಬಸ । ವರಸತಾವಕಸೇವಕನುಮಾ । ಳ್ಪರಿದೆಸಿಸವಿಜ್ಞಾಪನವಹೃ
ತ್ಸರಸಿಜವದರಳೇ ॥೨೩॥ ಸಾವಧಾನದಿಕೇಳುಮೊದಲಿನ । ಜಾವದೊಳಗೀ
ಪುರದೊಳಿರುತಿಹ । ದೇವಭಕ್ತಿಸುಧೀರನೋರುವನೊಂದುತಾಣದೊಳೂ॥
ಭಾವವಿಕಳತೆಯಿಂದೆಬಿಲ್ವದ । ಭಾವನೀಜಭ್ಯಾಯೆಯೊಳುಪ । ತ್ಸಾವನಾ
ಕೃತಿಯೆನಿಪಲಿಂಗವಪಾಣಿಕಮಲಾಂತ ॥೨೪॥ ಪಲ್ಲಿನಿಲ್ಲಿಸಿದುಃಖಿತಾಶ್ರುವು ।
ದೆಲ್ಲತುಂಬಿರೆಚಾರನನುಮೂರುತ್ತಲಾರ್ತಿ
ಗಲ್ಲವೊದಲ್ಗೊಂಡಿಪ್ಪವಂಗವ । ಸಲ್ಲುವುಪೆಯನುಪಮಿತಪ
ಯೊಳೂ ॥ ತಲ್ಲಣಿಸುತುಸುದುವನುನಿನಗಿದು । ಸಲ್ಲುವುಪೆಯನುಪಮಿತಪ
ದ್ಯಾಬ । ಗ್ಯೋಲ್ಲಸಿತನಂಮಾಡಿದೈಬಸವಪ್ರಧಾನನೂ ॥೨೫॥ ಉರುತರದದಾ
ರಿದ್ರ್ಯಕೆನ್ನನು। ಗುರಿಯಮಾಡುತ್ತವರಘನಮಂ। ದಿರಕೆಕಳುಹುವದೇತಕ
ಲ್ಲಿಹಶರಣಸಂತತಿಯಾ ॥ ಕರದಿತಾಡಿಸುತೆನ್ನವ್ರತವಂ । ದರಿದೆತಪ್ಪಿಸಿಶಿವನೆ
ನೀನೀ । ಪರಿಯೊಳುಂಮಿಗಿಲೆನಿಪಲಘುತರವೆಸಿಸಿಕಾಂಬುವದೂ ॥ ೨೬ ॥
ನಿನಿಗೆಧರ್ಮವೆಧರ್ಮವಾಹನ । ಯೆನಿಸುತಿಹನೆನಲಾಬಸವರಾ । ಜನುಮಹಾ

ದ್ಭುತಹೃದಯನಾಗುತೆಘನತರಸುಲಿಂಗ ॥ ವೆನಿಪದರ್ಪಣದೊಳಗೆತ್ತತ್ತ್ವ
ಮ । ದನುವಕಂಡಪರಾಧವಾಯಿ । ತ್ತೆನುತೆತದ್ಗ್ರಹಸೀಮೆಗೋರ್‍ವನೆಬಂ
ದುಸತ್ವರದೀ ॥೧೬॥ ಹಾಗೆಚಾಮಯದೇವರಶ್ರೀ । ಯಾಗುವಮಾಡುವವೆಲ್ಲ
ಡಿಗಳಿಂ । ಗಾಗಿಎಂಟಂಗಗಳಮಿಳೆಯೊರಸಲುನಮಿಸಿದೀನ ॥ ನಾಗಿಯು
ಸುರಿದನೊಡನೆಸುಕೃಪಾ । ಸಾಗರನೆಎನ್ನುವನುಕಾಣಲು । ಬೇಗತಾವ್ವೆ
ತಂದವರಿಯಾನರಿಯದಿಹಕತದೀ ॥೧೭॥ ಮೋಸವಾಗಿರುತಿಹುದುಬಹುವಿ।
ಶ್ವಾಸಹೀನನುದುರ್ಮದಾಂಧನು।ಓಸುಕಳಕೊಂಡಿರುವದುರ್ಭಾಗ್ಯನನುಮ
ಜ್ಞಾನ ॥ ರಾಶಿಯುಹಸದ್ಭಕ್ತಿಹೀನನಿ । ರಾಸಬುದ್ಧನುವಾದಕತದಿಂ । ದೀ
ಸಮಯದೊಳೆಗಾದೊಡುಂಕರುಣಿಸಿಕಟಾಕ್ಷಿಸುತೇ ॥೧೯॥ ಎನ್ನೊಳಿರ್ಪಪ
ರಾಧಗಳನೀಂ । ಮನ್ನಿಸುತೆಕ್ಷಮೆಗೈದುಪ್ರೊರೆಸಾ । ಜನ್ಯಮೂರ್ತಿಯೆಜ
ರರಯಜಿಸುವಸಮಯಮಿರುವುದು ॥ ಉನ್ನತಸುಪಾವನಚರಿತಗಣ। ಮಾ
ನ್ಯರುಗಳುಕ್ಷುಧಾತುರದೊಳತಿ । ಖಿನ್ನರಾಗಿಪ್ಪರುತದೀಯಾಂಘ್ರಿಗಳಸೇವ
ನವೇ ॥೨೦॥ ಜೀವವಾಗಿರುತಿರ್ಪವಿಧವದು । ನೀವರತುದಾಗಿರುವುದ್ಯೆಯನು।
ತೇವಿಚಾರದಿತನ್ನತಾಜರಿವುತೆವಿನಯಭಕ್ತಿ ॥ ಸಾವಧಾನೋತ್ಕರ್ಷದಿಂನು
ಡಿ । ವಾವಿಧದಬಸವೇಶನಿಗೆಚಿ । ದ್ಭಾವಿಯಹಕ್ಕೈಕೂಲಿಚಾಮಯನತುಲ
ಸಂಭ್ರಮದಿ ॥೨೧॥ ಮಗುಳೆನಮಿಸುತ್ತಿಂತುನುಡಿದನು । ಅಗಣಿತಸುಮಹಿ
ಮಾತಿಶಯದಿಂ । ಮಿಗಲೆನಿಪಪೆಸರ್ವಡೆದುಎನ್ನನುಪಿರಿಯನೆಂದೆನಿಸಿ ॥ ಪೊ
ಗಳುವರೆಭವದೀಯಶ್ರೀಪದ । ಯುಗಳಸೇವಾಸಕ್ತನನುಕಿಂ । ಚಿಗನಟೀ
ನನತಾವಕೀನಮಹಾತ್ಮ್ಯೆಯಂನುಕಿಯ ॥೨೨॥ ಮಾಡಲಾರ್ಪರೆಶೇಷಮು
ಖ್ಯರು । ನೋಡಿಕರುಣದೊಳೆಮ್ಮನೀಂಕಾ ! ಪಾಡಲೋಸುಗಲೋಕಪಾ
ವನಕಾರಣಶಿವಾಂಶ॥ ಗೂಡಿಭುವನಕ್ಕೈತರುತೆಭವ। ವೀಡಿರಿದುಜ್ಜೈನರಮ
ತವನು । ಗ್ಗಾಡಿಮಹಿತವೆನಿಪ್ಪಲೋಚನಭಾವಕರಗಳೊಳೂ ॥೨೩॥ ಪರು
ಷವನೆತಳೆದಿರ್ಪ್ಪನಿರುಪಮ । ಚರರಿಗಿಷ್ಟವನೀಯಲನ್ಯರ । ತರವೆಶರನಿಧಿ
ನಿಕರವುಂಮಿತಿದಪ್ಪಿದೊಡೆಗಿರಿಗಳ್ ॥ ಚರಿಸಿದೊಡೆಯಾಗಸವಿಳಿದೊಡಂ ।
ಸ್ಥಿರಧೃತಿಯುಗುಂದುವುದೆಭವದುರು।ತರಪ್ರಭಾವವುಕೊರತೆಯುಪ್ಪುವುದೇ
ಮಹಾದೇವ ॥೨೪॥ ಎನುತಲತಿಸುವಿನೆಯವಚನಗಳೊ । ಳನುಕರಿಸಿಘನ

ಪ್ರೀತಿಯಿಂಬಸ । ವನನುನಿಜಮಂದಿರಕೆಕಳುಹಲುವರ್ಧಿತಾವೋದ ॥ ವನ
ನಿಧಿಯುತೆರಳಲ್ಕೆ ಮೊದಲೇ । ಘನಪದಾರ್ಥ್ಥಗಳೆಂದಿನಂದದಿ । ಅನುಪಮಾಕ್ಷ
ಯವಾಗೆಕಂಡುಮಹಾದ್ಭುತವತಳೆದು ॥೩೫॥ ಆವಿಧವನೆಲ್ಲರಿಗೆತಿಳುಹಿಸ ।
ಮಾವಲಿಪ್ರಾನಂದದೊಳುಸ । ದ್ಭಾವಿಯಹಕ್ಕೈಕೂಲಿಚಾಮುಯನಿತ್ತತನ್ನ
ನಿಜ ॥ ಸೇವಕಳುಮೆನಿಸಿರುವಸಾಧ್ವಿಗೆ । ಭಾವದೊಳಗಚ್ಚೊತ್ತಿದಂತಿಗ ।
ಲಾವಿಭುವುತಪ್ಪ್ರವೃತ್ತಿಯನೆಬೋಧಿಸುತೆತಾಂಮಾಳ್ಪ ॥ ೩೬ ॥ ಕಾಯಕವು
ತಪ್ಪಿದೊಡೆಸಿಯುಪುವ । ವಾಯುಭಾಜನವಾಗುವುದುಹೊ । ತ್ರಿೀಯೆಡೆಯ
ತಿಕ್ರಮಿಸಿತೆನುತೆವಿಚಾರವರನಾಗೀ ॥ ಆಯುತದಪಟ್ಟಣದಬೀದಿಯೊ । ಳೀ
ಯಥಾವಿಧದಿಂದೆಗಮಿಸಲ । ನ್ಯಾಯಸದೊಳೋರ್ವನಘಭಕ್ತಂಬೇಗನ್ಯೆತಂ
ದೂ ॥೩೭॥ ಕಂಡುಮಾತನನಿಜಗೃಹಕೆಕರ । ಕೊಂಡುಪೋದನುಕಾರ್ಯವಾ
ಗಲ । ಖಂಡನಿಯತದಪಡಿಯನಿತ್ತುದತಂದುಜಂಗಮರ ॥ ಮಂಡಳಿಯನ
ರ್ಚಿಸುತೆತತ್ಪದ । ಪುಂಡರೀಕಾರ್ಚನವಿಧಿಯನೊಡ । ಗೊಂಡಿರುವಸತ್ಕೃ
ತ್ಯಗಳತೀರ್ಚುತ್ತಲಾನಂದ ॥೩೮॥ ದಿಂದಿರುವಕಾರಣದೊಳೀತನ । ಸಂದಿ
ರುವಸನ್ಮಹಿಮೆಯಿಂತಿಹು । ದೆಂದೆನುತಲಾವೀರಭದ್ರವಸುಂಧರಾಧಿಪನ ॥
ಮಂದಹಾಸಾಂಕಿತವಮುಖವನಾ । ನಂದದಿಂನೋಡುತೆನಿಜಪದವ । ಹೊಂ
ದಿರುವಮಹಿಮಾದ್ವಾರೊಳಗಾನೆನಿತರವನೆನ್ನ ॥೩೯॥ ಘನತರವಮಾಡುತ್ತಲ
ತಿಶಯ । ವೆನಲುಪೊಗಳುವುದೇತಕ್ಕೈವಾ । ವನಚರಿತವನೆಮಗುಳೆನೃಪವರ
ನೆಂದನೆಲೆಶಾಂತ ॥ ವನನಿಧಿಯೆಯಿಂತಪ್ಪವರಚಿ । ದ್ಘನಸುಚಾರಿತ್ರಂಗಳನು
ಕೇ । ಳ್ದನಿತರೊಳೆಕೃತಕೃತ್ಯನಾದೆನುಗುರುವೆಕಲ್ಯಾಣ ॥೪೦॥ ಪುರದೊಳ
ಗೆಚರವರರತೃಪ್ತಿಯು । ವಿರಚಿಸಿದಕಂಗಳಬಸವದೇ । ವರುವಿಲಾಸದಿಮೆರೆ
ದರೆಂಬುದಕೇಳ್ವಿರುತ್ತಿಹೆನೂ । ಅರಿಯಲೊರೆಯುವುದವರಘನತರ । ಚರಿ
ತೆಯುಪರಿಯನೆನಲುಚೆನಬಸ । ವರಸನಾಗಳ್ಕುಂದೆಪೇಳಿದನವರವಾರ್ತೆ
ಯನೂ ॥೪೧॥

ಅಂತು ಸಂಧಿ ೪೧ಕ್ಕಂ ಪದ ೨೪೪೪ಕ್ಕಂ ಮಂಗಳಮಸ್ತು.

## ನಾಲ್ವತ್ತೊಂಭತ್ತನೆಯ ಸಂಧಿ.

### ಕಂಗಳಬಸವಯ್ಯನವರ ಕಥೆ.

ಸೂ॥ ಧೀರಕಂಗಳಬಸವದೇವರ । ಚಾರುಚರಿತೆಯುಪೇಳಿತೆರಳಿದ ।
ನಾರಜತಗಿರಿಗೈದಲೋಸುಗವಾಗನದಿಯೆಡೆಗೇ॥

ಪದ ॥ ಮಂದಿರದಿಚರಬೃಂದತೃಪ್ತಿಯು । ಸಂದಿಸದಕಾರಣದಿತನ್ನಿಜ । ಸುಂದರಿಯುಪ್ರತಿಕೂಲೆಯಾಗಿಹಕತದಿಹೊಲಕಾಯ್ವ ॥ ದಂಡುಗಕೆ ಪೋಗುತ್ತಿರಲುಬಾ । ಲೇಂದುಶೇಖರಮೂರ್ತಿಯಂತಾ । ನಂದಿನಂದದಿಕಂಡುತತ್ಪದದ್ವಂದ್ವಗಳಿಗೆರಗಿ ॥೧॥ ಮೊದಲೊಳವರಂದಿನದಿನವ್ರುನಿಜ । ಸದನದೊಳುಷಡ್ವಿಧಸುಭಕ್ಷ್ಯಸ । ಮುದಯದಿಂಘನಮಹಿಮರಂತೃಪ್ತಿಯನುಪತಿಸುತ್ತ॥ ಮುದವಡಿಸಿದಾಚರಸುತೃಪ್ತಿಯೆ । ಪದುಳದಿಂನಿಜಲಿಂಗತೃಪ್ತಿಯು । ಮದೆನುತಂಭಾವಿಸಿದಕತದಿಂದಾಮಹಾತ್ಮನನೂ ॥೨॥ ಜೆಂಬಲಿಯಕರದೊಯ್ದುಚರವರ । ನಂಬಿಡದೆಸೇವಿಸುವನಿತರೊಳು । ಅಂಬಕದಬಾಧೆಯದುಸೇರ್ದುತನ್ನೈಜನಿಯಮಕ್ಕೆ ॥ ಹಂಬಲಿಸಿತನುವಂಬಿಡಲ್ಕಾ । ಡಂಬರದನೈಷ್ಟಿತೆಗೆರಯದಿಂ । ದಂಬಿಕಾಪತಿದಯದಿಸಾಕ್ಷಾತ್ಕರಿಸೆತತ್ಪದವ ॥ ॥೩॥ ಆಮಹಿಮರೊಡಗೊಂಡುಸೇರ್ದಂ । ಧೀಮಹಿತನಿಷ್ಠಾಖಿಳಶಿವಗಣ । ಸ್ತೋಮಿಎನಲೆಸೆದಿರುವಕಂಗಳಬಸವಯಸ್ವಾಮಿ ॥ ನೇಮವಿಂತಿಹುದೆನುತೆಶರಣ । ಸ್ತೋಮಘನಮಾಹಾತ್ಮ್ಯವರುಹುತೆ । ಹೈಮವತಿಯುತನೂಜನವರಾವತರನತಿಮುದದೀ ॥೪॥ ಆದಿವಸವತಿಶಯವಿದೆನಲುಪ್ರ । ಮೋದದಿಂಶರಣಜನಸಹಿತಂ । ವೇದವಾಜಿಯರಮ್ಯಗೋಷ್ಠೀಸಮುಚಿತದಿನ್ನೈಜ ॥ ವಾದಸದ್ವಿಧಿಗಳನುತೀರ್ಚಿಸು । ತಾದರದಿಕೆಲದಿನವುಚೆನಬಸ । ವಾದಯಾನಿಧಿನಿಂದಿರಲ್ಪುಸುಧೇಶಸಂತೈಸೆ ॥ ೫॥
ಇಂತಿರುತ್ತೊಡನಿರುವಬಡೆಯರ । ನಂತವಿರೆನೃಪನೊಡನೆತಾಂದಿವ । ಸಾಂತದೊಳುಶ್ರೀಚೆನ್ನಬಸವೇಶ್ವರನುಸೇ॥ಡನೂ ॥ ಅಂತಕಾಂತಕಮೂರ್ತಿಯೆನಿಮ। ಹಂಪತಬಸವೇಶನದಯದಿನಿ । ಮ್ಮಂತಹಮಹೇಶ್ವರನಿಚಯಸಚ್ಚರಣಸೇವೆಯನೂ ॥೬॥ ಮಾಡುತಿರ್ಪೀಭಾಗ್ಯವದುಕ್ಕೈ । ಗೂಡಿಬಂದು

ಪುಜನ್ಮಭಯವಿ | ಡಾಡಿದೆನುಈವಿಶ್ವದೊಳುಕೃತಕೃತ್ಯನೆನಿಸಿದೆನೂ ||
ಕ್ರೀಡಿಸಲುಮೋಕ್ಷಾಂಗನೆಯುಸ್ಪೃಹೆ | ಮಾಡಿಬಂದಪ್ಪಿದಳುಶಿವಸುಖ |
ಮೂಡಿದುದೆನಲ್ಕರಸಕೈಗಳಮುಗಿದುಸದ್ವಿನಯ||೭|| ಭಾವದಿಂಹೃತ್ಪದ್ಮವ
ರಳುತೆ | ದೇವನಿಮ್ಮಂಕಂಡಮಾತ್ರದೊ | ಳೀವಿಲಕ್ಷಣವೆನಿಸಿಬಯಕೆಗಳಡ
ಗಿಡವುನಿತ್ಯ || ಪಾವನನೆಭವಪದಂಘ್ರಿಸೇವೆಯೆ | ಜೀವವಾಗಿರಲಿಚ್ಛಯಿಸಿದೆ
ಕೃ | ಪಾವಿಧೇಯನೆಅಿಸುವೆಕಾರಣದಿಂದಲೆನ್ನುವನೂ ||೮|| ಧನ್ಯನೆಂದೆನಿ
ಸುತ್ತೆಪ್ಪೊರೆಸಾ | ಜನ್ಯಶರಣಾಗತಮನುಜತತಿ | ಹೃನ್ನಳಿನಗತಕಾಮ್ಯ
ಪರಿಪೂರ್ತಿಯನೆಗೈಯ್ಯನುದೂ || ಉನ್ನತಿಕಪಥವೆನಿಸುವುದುಸ | ನ್ಮಾ
ನ್ಯರಹನಿವುಗಾನುಶಿಷ್ಯನು | ನನ್ನಿಯಿಂದೆನ್ನಭಿಮತವತೀರಿಸುವುದೆಂದೆನ
ಲೂ ||೯|| ಸುರುಚಿರಾಸ್ಯೋತ್ಥಿತಪರಸ್ಮಿತ | ಸ್ಪುರಣಸುಂದರವೆಸೆಯೆಮಿ
ಗಂ | ಚ್ಚರಿತಳೆಸದೆನಲೊಪ್ಪುವಕ್ಕಾನಾಗಲಾಂಬೆಯರ || ಪರಮಜಾಠರ
ಜನಿತನೆಂದನು | ಹರಸಮಯಹಿತವಂಬಯಸಿದುದೆ | ಸ್ಥಿರವೆನಿಪ್ಪುವುದೀದಿ
ನದರಾತ್ರಿಯೊಳೆಗಣಚಯವು ||೧೦|| ಒಡನೊಡನೆಕಡುಗೋಪ್ಯದಿಂದಂ |
ಪಡೆಯುಬೇಕುಸುರಾಳಿಕೀರ್ತನ | ವೆಡೆಬಿಡದದಿವ್ಯಾಮೃತಲಹರಿಎನಿಪಬೆಣ್ಣೆ
ನದಿ || ತಡಿಯೊಳಗುತಿಹವಡಿಗಲಿಂನೀ | ರ್ಗುಡಿವರಳಿಗಳುಎರಡುಮಿಗೆಪೆಸ
ರ್ಪಡೆದುಬೆಳ್ಳಿಯುಬೆಟ್ಟಕೈದಲುಸಾಧನಂಗಳೆನೆ ||೧೧||

## ಚೆನ್ನಬಸವೇಶ್ವರನು ಚರಣರೊಡನೆ ಕೈಲಾಸಕ್ಕೆ ತೆರಳುವಿಕೆ.

ನೃಪತಿಯುತ್ಸುಕನಾದಬಳಿಕಂ | ವಿಪುಲಜಾಗ್ರತೆಯಿಂದೆಪರಶಿವ |
ನಪರಮೂರ್ತಿಯುಕಲ್ಯಕೃತ್ಯವತೀರ್ಚಿಸುತೆಮುದದಿ || ಅಪರಿಮಿತಪ್ರಮ
ಥಾಳಿಯೊಡನಾ | ಸುಪಥನ್ಯತರುತಾಗಮಹಿಮಾ | ನಿಪುಣತೆಯೊಳುಧರಾಸ್ಥ
ಲದೊಳಿರುತಿಹನದಿಗಳೊಳಗೆ ||೧೨|| ಪರಮಸುಶ್ರೇಷ್ಠವೆನಿಪಾನದಿ | ಯ
ರಿದುಸ್ಮರಿಸಿದವರ್ಗೆ ಮೋಕ್ಷವು | ಕರದೊಳಿಹನವನೀತವೆಂದೆನುತಿಪ್ಪಕಾರಣ
ದೀ || ಉರವಣಿಸುವಾನದಿಯನೋಡಲು | ಭರದಿನಡೆಯಿರೆನುತ್ತೆಮುದವಾ |
ವರಿಸಿಪಾವನರುಗಳನೊಡಬಡಿಸುತ್ತೆಯಖಿಲರನು ||೧೩|| ಶ್ರೀವಿಭವಯುತ
ವೀರಭದ್ರಸು | ಭೂಪರನುತಾಂಬೆಂಬಳಿಯುನಡೆ | ವಾವಸರದೊಳಗಗ್ನಿ

ಸಂಭವನಂಶಜನುಸತ್ಸ್ರ ॥ ಭಾವದಿಂನಡೆತಂದುಸಿಲ್ಲೆಸು । ಭಾವಹನದಿ
ಯಮಹಿಮೆಯೆಂತೆನೆ । ಪಾವನತೆಯಾತಿರುವತಜ್ಜಲಪಾನವಂಗ್ಯೆವ ॥೧೪॥
ಮಾನವಾವಳಿದೋಷಭುಜಗಕ । ನೂನಬಲಯುತಬರ್ಹಿಯಾ । ಸನ್ಮಾನಿ
ನಿಯರನುದರ್ಶನೋತ್ಸುಕಮನುಜಸಂತತಿಯ ॥ ನೂಣಿರುವವೃಜಿನೌಘತಿ
ಮಿರಕೆ । ಭಾನುದೀಪ್ತಿಯುಸ್ನಾನಕರಣವಿ।ತಾನಕತಿಶಯುದೋಷಹೇತುಕ
ಜನ್ಮಸಪ್ತಕದೋಳ್ ॥೧೫॥ ಗಳಿಸಿರುವಕರ್ಮೇಂಧನೋತ್ಕರಂ । ಕುಳಕನ
ಲಮಿಂತಿದರಸ್ಯೆಕತ । ತಳದೊಳಾಡುವಮನುಜಸಂತತಿಕೃತಬಹುಲದೋ
ಷ ॥ ಕುಳಕ್ಷಿತಿಜಕೆಕುಠಾರಮುಂನಿ । ರ್ಮಳಸುಪುಣ್ಯಾಂಶಜಭುಜಗವಿಾ ।
ನ್ಗಳುಕಮಠಕರ್ಕಟಕಮೊದಲಹಜಂತುಸಂದೋಹ॥೧೬॥ ಕ್ರೀಡಿತಾಸ್ಥಾನ
ಮೆನಿಪುದೆನುತೆ । ನೋಡಿಬಳಿಗೈತಂದಮಾತ್ರದೊ । ಳೂಡುತಂಮ್ಯೆಸೋಂ
ಕಿದುದುಉತ್ತುಂಗಕಲ್ಲೋಲಂ ॥ ನಾಡೆವೀಚಿನಿತಾಂತಭಂಗಾ। ತಾಡಿತೋ
ತ್ಥಿತಶೀಕರವನೊಡ । ಗೂಡಿಘನಭೊಮಾಲತೀಕನಕಾಮ್ರಮುಖಭೊಜ-॥
॥೧೭॥ ಸ್ಥಿರಸಮಾಕ್ರಾಂತಪ್ರಸೂನೋ । ತ್ಕರಪ್ರಭೂತಸುಗಂಧಘನಬಂ
ಧುರಜಗತ್ಪ್ರಾಣಾಂಕುರವ್ರಾತೋತ್ಸವದೆನಡೆದೂ ॥ ಸೊರಗಿದಾಯಾಸವ
ದುತೀರಲು । ಪರಮಮಂಗಳಕರಸುರವ್ಯೋ । ತ್ತರಪ್ರದೇಶದಿಸಕಲಸ
ದ್ಭಕ್ತಾತ್ತ್ಯರುಗಳೊಡನೆ ॥೧೮॥ ಚನ್ನಬಸವೇಶ್ವರನುಕುತುಮ । ಹೋನ್ನ
ತರೊಳಿಂತೆಂದಭಕ್ತ್ತವ। ದಾನ್ಯರುಗಳೇಎನ್ನನುಂಸತ್ಕರುಣದೊಳುನಿಮ್ಮಾ॥
ಸನ್ನಪರಮಪ್ರಸಾದಸಂಚಿತ । ನನ್ನುಮಾಡುತೆಇರುವಕೊರತೆಗ । ಳನ್ನು
ತೀರಿಸುತಾವವಿಗಡವುಸಂಘಟಿಸದಂತೆ ॥೧೯॥ ಪ್ರೊರೆಯುವುದೆಮನದಣಿಮತ
ವುನಿ । ಭರ್ಗರಸುಖಾನುಭವಾಯ ತದಿಸು । ಸ್ಥಿರವಮುಕುತಿಯುಂಹೊಂದುತಿ
ರ್ಪನವೋಘದಿಂದೆವಗೆ ॥ ನಿರತದಿಂದಪ್ಪಣೆಯನೀಯಲು । ತೆರಳುತಿಹೆನೆ
ನೆತದ್ಗಣಾಧೀ । ಶ್ವರರುಮಹಿಮಾನ್ವಿತನೆನೀನಿಂತೆನಲುಸಮುಚಿತವೇ॥೨೦॥
ಬಸವರಾಜನುಸಂಗಮೇಶ್ವರ । ನಸಮಗರ್ಭಾಂತರಪ್ರವೇಶೋ । ಲ್ಲಸನೆ
ದಿಂದಾಗಿರ್ಪನಂತರನಿನ್ನನಂಬಿಯೆವ॥ ರ್ತಿಸುತಲಿರ್ಪವಯೆಮ್ಮನುಂಈ ।
ವಸುಮತೀತಲದೊಳಗೆಬಿಡಲಿ ಚ್ಛಿಸುವುದೊಳಿತೇನಯ್ಯನೀನೋರ್ವನೆತೆರ
ಳುತಿಹುದೂ ॥೨೧॥ ಧರ್ಮವೇನ್ಯೆಹೇಮಭೂಧರ । ಧರ್ಮನಾವಾಸಕ್ಕೆನಡೆದಡೆ

ವ್ರೋಕ್ಕೆಯುಂನಿಮ್ಮುವನಗಲಿನಾವ್ರೊಂಪುನಿಮುಷವನೂ || ದುರ್ಮದಾಂಧಕ
ರಿರ್ಸಭುವಿಯೊಳು | ಪೇರ್ಕೆಯಿಂಸಂಚರಿಸುತಿರೆದು| ಷ್ಕರ್ಮವದುಸಂಘಟಿಸ
ದೇನ್ನೈಕರುಣದಿಂದೆಮ್ಮ||೨೨|| ನೆರೆವೆರಸಿಪ್ರೋಪುದೆನೆಘನವು| ದ್ಬರದಿಚೆನ್ನ
ವೃಷಾಧಿನಾಥನು | ನಿರುಪಮಿತವಿನಯಾನುಲಾಪದೊಳೆಂದನಿಮ್ಮಾಜ್ಞೆ||
ಖಿರವದೆಂತದರಂತೆಗೈಯ್ಯುವೆ | ನುರುತರಸುಮಹಿಮಾನ್ವಿತರೆಮಿಗೆ|ಭರ
ದಿನಡೆಯಲ್ಬೇಕುಶಂಕರಭವನಕೆನೆಭಕ್ತ||೨೩|| ಪುಂಗವರುಇಂತೆಂದುನುಡಿ
ದರು | ಲಿಂಗರೂಪನೆಇನಿಬರುಂನೈ | ಜಂಗದಿಂದವೆಕುಂಡಲೀಶ್ವರಕುಂಡ
ಲನವಿಮುಳ || ಮಂಗಳಾಲಯಕ್ಕೈದುವಂತಾ|ಇಂಗಿತವ್ರೊಆಪರಿಯುನಿರ್ದೇ |
ಹಂಗಳಿಂದಲೊತಿಳಿಯಲುಸುರುವುದೆಮಗೆಸತ್ಕರುಣ ||೨೪|| ದೀದೆಪೇಳ್ವು
ದೆನಲ್ಕೆಗಿರಿಜಾ | ನಂದನಾಂಶಜನೆಂದಮಹಿತಾ | ನಂದಸಿಂಧುಸುರೂಪರೇ
ಬಾಲೇಂದುಶೇಖರನಾ || ಹೊಂದಲಾಗುವವಿಧವನಿಮಗಾ | ನಿಂದುತಿಳುಪುವೆ
ಶರಭಮೂರ್ತಿಯು | ದೊಂದುಕಾರಣವಿಡಿದುನಿರುಪಮರಯದಿಪ್ರೋಗುತಲಿ|
||೨೫|| ಬೆಣ್ಣೆನದಿಯಾತೀರದೊಳರಲಿ | ಯುನ್ನತದಧರಣೀರುಹದ್ವಯ|ವ
ನ್ನುನೋಡುತ್ತದರಮೇಲ್ಗಡೆನಿಂದುನಿಜಭಾರ || ವನ್ನುವಹಿಸಲ್ಕಮಿತದೃಢ
ಸಂ | ಪನ್ನತೆಯೊಳಾತರುಯುಗಳನಿ| ರ್ಭಿನ್ನತೆಗೆಭಲಭಾಪುರೇಎಂದೆನು
ತಲುಘಟಿಸೀ ||೨೬|| ಕಾಮಸಂಚಾರವನುಬಲಯುಕ್ | ಕ್ಷಾಮಹಿತಚಿರ
ಜೀವತೆಯನಾ |ಪ್ರೇಮಕರುಣಾಪೂರ್ವಕದೊಳೀವೃಕ್ಷಗಳಿಗಿತ್ತು|| ಕೋ
ಮಲಚ್ಛದಗಳನುಭಕ್ಷಿಪ | ಕಾಮಿತದಿಕೊನೆಸಾಗಿಸಲ್ಕಿ | ಕ್ಸಾಮಜಂಗಳು
ಮೇಯುತಿಹವಾಕುಜದತಳಿರುಗಳಂ ||೨೭|| ಪಿಡಿದುವ್ರುಯ್ಯಾಲೆಯೊಲುತೂ
ಗುವ | ರೆಡೆಯೆಡೆಯೊಳಾನಾಗಕನ್ನೆಯ | ರುಡುಪಥದೊಳಮರಾರ್ಭಕರುತ
ಭ್ಯಾಖೆಗಳಮರೆಯೋಳ್ || ಕಡುಮುದದಿಕ್ರೀಡಿಪರುಮರಗಳ | ಬುಡದೆ
ಕುಳಿತಿಹಮನುಜಸಂತತಿ | ಬಿಡದೆನೋಡುತ್ತಿಹರುಪಗಲೊಳುದೀಪನಿಚ
ಯವನೂ ||೨೮|| ಆನಗಂಗಳಮೇಲೆಪಕ್ಷಿವಿ | ತಾನಕಲಕಲದಿಂದೆಗೂಡುಗ
ಳೇನುಮಿಡದಿರೆಚಿಂತಿಪುದುದಿಕ್ಪಾಲಕೋತ್ಕರವು || ಮಾನಯುತತನ್ಮಹಿ
ಮೆಯುಂವಾ | ಗ್ಜ್ಞಾನಿಗಾದರುಪ್ರೊಗಳಲರಿದಸ | ಮಾನವೆನಲೆಸೆದಿರುವತರು
ಗಳುಮತಿಸಮಿಪದೊಳೀ ||೨೯|| ಇರುವವಲ್ಲಿಗೆಪ್ರೋಗಿನಾವೆ | ಲ್ಲರುಗಳಂ

ರೋಹಿಸುತೆವೃಕ್ಷವ । ಭರದೊಳತ್ಯಾನಂದದಿಂಬಾಲೇಂದುಶೇಖರನ ॥ ಪ
ರಮಪದಮಂಸೇರುವುದೆನಿ । ರ್ಧರವೆನುತ ಲ್ಲಿಂಪೋರಬುಬಸ । ವರಸನಳಿಯ
ನುಸಮಧಿಗತಸದ್ಭಕ್ತಿಪ್ರಭೆಯಿಂದೆ ॥೩೧॥ ಪೋಗಿನದಿಯಸವಿೂಪದಲ್ಲಿಹ
ನಾಗಭುಕ್ತ್ಯಯುಗವನೆಕಂಡರಿ । ದಾಗಿಸಪ್ರಮದಾಂತರಂಗದೊಳೈಕಭಕ್ತ
ವರ ॥ ಪೂಗದೊಡನಿಂತರುಹಿದಂಶಿವ । ಯೋಗಯುತರಹತಾವುಕಂಡಿರೆ ।
ಭೂಗಗನವ್ಯಾಪ್ತಿತ್ವಚಲದಳಭೂರುಹಂಗಳಿವೇ ॥೩೧॥ ಧನಪತಿಯದಾರು
ಣದೊಳುಂಸಂ । ಜನಿತಪಥಿಕಶ್ರಮವಿದಾರಿತ । ಘನಪ್ರಮೋದನಿದಾನವೆ
ನ್ನುತೆಗಳಿಲನೇಪೇಳು ॥ ವನಿತರೊಳುಶಂಕರನುಪ್ರಿಯದಿಂ । ತನಯನ್ನೈತ
ಹನಪರಿಮಿತಪಾ । ವನಸ್ವರೂಪರುಮುಸ್ವಗಣಸಿಪ್ಮಂಗಳೊಡಗೂಡಿ ॥೩೨॥
ಬುವಿಯಬಿಡುತುಮುದ್ಭವನಕು । ತ್ಸವದೊಳೆನ್ನುತೆಕಾಂಚನಪ್ರಭಾ । ನಿವ
ಹಕಾಂತಗಳಾದಪುಷ್ಪಕಗಳಿಗೆಸಿಂಗರದಾ ॥ ಕವಲತಂತಿಗಳೊಡನೊಪ
ರ್ದ್ಪಿದ । ಸವನವಾಗಿಹಸರಪಳಿಗಳಿಂ । ದವೆಮೆರವುತಿರಲಾವಿಟಪಿಶಾಖೆಗಳೊ
ಳಗೆಶರಣ ॥೩೩॥ ವಿತತಿಗನಿಬರಿಗನಿತುಕಲ್ಪಿಸಿ । ದ್ಯುತದೊಳಿವರಾಗಮನ
ವಾಂಛಾ । ನ್ವಿತನುಮೂಗುತೆನೋಡುತಿರ್ದನುಮಾಸಹಿತನಾಗೀ ॥ ವಿತತಚ
ನ್ನವೃಷಾಧಿನಾಥನು । ಕ್ಷಿತಿರುಹಂಗಳಶಾಖೆಗಳೊಳೂ । ರ್ಜಿತಮಹಾಪ್ರ
ಭೆಯೊಡನೆಮೆರೆದಿರುತಿರ್ಪ್ಪವತಿಶಯದ ॥೩೪॥ ಪರಮಗೌರವದಿಂದೆಚಲುವೆ
ಸೆ । ದಿರುವಯಾನೋತ್ಕರವನೋಡುತೆ । ಶರಣವಲ್ಲಭರುಗಳೆಕಂಡಿರೆಶರ್ವ್ವನ
ತಿಕರುಣ ॥ ಸ್ಫುರಣವಾಗಲುಕಳುಹಿದನುಕ । ರ್ಬ್ಬುರಮಯಾಸನಗಳನೆನ
ಲುಘನ। ತರಮೃಗೇಂದ್ರಗುಹಾಶ್ರಮದೊಳಿರ್ಪ್ಪವಮನುಜತತಿಗೆ ॥೩೫॥ ವಾ
ರಣಸುಕುಂಭಸ್ಥಮುಕ್ತಾ । ವಾರವುಲಭಿಪುದೇನರಿದುತ । ತ್ಸಾರಕರುಣಾ
ಮಾತ್ರದಿಂದೆಶಶಾಂಕಮಂಡನನ॥ ಪಾರಸತ್ವದಪಿಯನುಪಡೆಯುವ।ದಾರಯ
ಲುಘನತರಪೆಯುದರಿಂ । ಭೋರನೇಸುಖಿಯಹೆವೆನುತೆಗಣವರರುನುಡಿಯ
ಲ್ಕೆ ॥೩೬॥ ಆಸಮಯದೊಳುವೊಗದಿಮುಗುಳ್ನಗೆ । ಸೂಸುತಿರಲಾಚನ್ನ
ಬಸವವಿ । ಲಾಸದಿಂದಿರೆಬಸವಲಿಂಗದೊಳಾದನಂತರದಿ ॥ ವಾಸುಕೀವಲ
ಯಾರ್ಚಕಾಳಿಯು । ತಾಸಮಂಚಿತಭಕ್ತಿವಿಭವಾ । ವಾಸವಾಗಿರುವಕ್ಕ
ನಾಗಾಂಬಿಕೆಯುರುಕಪ್ಪಡಿಯೋಳ್ ॥೩೭॥ ಪರಮಗೌರವದಿಂದಿರುತೆನಿಜ ।

ವರಕುಮಾರನು ತಾರಕಾದ್ರಿಗೆ। ಹರಶರಣರುಗಳೊಡನೆ ಗಮನೋನ್ಮು
ಖನೆನಿಸುತಿರುವ ॥ ಕರಿಯುನಾಶಿವಲಿಂಗದರ್ಪಣ । ಸ್ಫುರಣದೊಳಿಗಾರ್ಶ್ರೈ
ಮುತವೆನಿ । ರ್ಭರಸುಬಾಷ್ಪೋದ್ಗಾಢಧಾರಾಪೂರಿತಶರೀರಿ ॥೩೯॥ ಯಾಗಿತ
ಪಕದಿ ಬರುವತಾಯ್ಗಿದಿ । ರಾಗಿನಡೆತಂದಡಿಗಳಿಗೆಶಿರ । ಬಾಗಿನಮಿಸಿದತ
ನಯನಂಬಿಗಿಡಪ್ಪಿನಿಜವಾಮ ॥ ಭಾಗಕಕ್ಷಾಂತರದಿಸೇರಿಸು । ತಾಗಮೂ
ರ್ಧ್ನಿಘ್ರಾಣಗೈವುತ್ತಾ।ಗರಿಮೆಯಿಂದಂಮನ್ನಿಸುತ್ತವಿಯೋಗದುಃಖವಡೂ
॥೯೯॥ ತೊಲಗಿಪ್ರಮುದೋತ್ಕರ್ಷಯುತನಿ । ರ್ಮಲಹೃದಯಳೆನಿಸಿರುವತಾ
ಯಿಯು । ಬಲುಮೆಯಂಕೊಂಡಾಡಿಚಲಡಳಪಾದಪ್ರೋಪಾಂತ ॥ ಸ್ಥಲ
ಕೆನಡೆತಂಡಭವಭಕ್ತಿಸು ॥ ಘಲಿತನಹಚೆನಬಸವಧೀಮಣಿ । ಯಲಘುಮಹಿ
ಮರಕಂಡು ಸದಯಗುಣಾನ್ವಿತರುಮೆನಿಸಿ ॥ ೪೦ ॥ ಮೆರವುತಿಹಗಣವರರೆ
ಯೋಲವು । ದಣದೆನಿಕಸುಪಿಮಾನಪಂಕ। ತ್ವರದೊಳೀಸಮಯಾಂತರದಿವ್ಯೈ
ಳಂಬನವದೇಕಂ॥ ಜೊರೆವುತಂತಃಯ್ನಳನುನಿರ್ಜರ । ತರುಪ್ರಸೂನಾನೂ
ನದಾವೋ । ತ್ಕರಮಯಾಂಚಿತಪೀಠದೊಳುಕುಳ್ಳರಿಸಿಸಾದರದೀ ॥೪೧॥
ವೀರಭದ್ರಧರಾಧಿಪತಿಸಹ । ವೀರಿಕುಳಿತುಗಣಾಧಿಪರಪುರಿ । ವಾರವಾರಿ
ಹಿಸಿದಪಿಧವಾರೈದುಹರಚರಣಾ ॥ ಸಾರಸಂಗಳನದಮಾತ್ರದಿ। ಸಾರ
ರುಪಮುವೆನಿಕವೊದಲವ । ತಾರವೈದುತೆಚೆಲುವೆಸೆವದ್ವಾದಶಕರಾಕ್ಷಿಗಳು
॥೪೨॥ ಮೋದುರಸುಮುಖಷಣ್ಮುಖಂಶ । ಕ್ತ್ಯಾದಿಸಾಧನವೊಪ್ಪುತಿರೆಸು
ಶ್ರೀದಸಖತನುಜನ್ಮನೆನಿಸುಪಶರವಣೋದ್ಭವನು ॥ ಮೋದಮಂತಳೆದಿಂ
ಗುಹನನುವೇದಸಾಟಪದಾರ್ಚಕರುಕಂ ॥ ಡಾದರದಿಮನ್ನಿಸುತಲೊಡನೆಶು
ಭೋದಯದಿಪೂರ ॥೪೩॥ ಕಾಯುಸಮಿತಿಯನ್ಯೈದಲಾಗಳ । ವಾಯುಶಾಪವ
ನೀಗಿನಾಗಾಂ । ಬಾಯುವತಿನಾಗೇಂದ್ರಗಮನೆಯಳೆಂಬನಾಮವನು॥ ಶ್ರೀ
ಯುಸಡಲಕ್ಷಣದೆತಳೆದುವಿ । ಧಾಯಕದೊಳಿರುತಿರಲುಘಣಿಸಮು । ದಾಯ
ಭೂಷಣತನುಜನಿದೊಬಂದನು ಜಯಜಯವೆನೆ ॥೪೪॥

ಅಂತುಸಂದಿ ೪೪ಕ್ಕಂ ೨೪೯ಕ್ಕಂ

ಮಂಗಳಮಸ್ತು.

ಶಿವಶರಣರೊಡನೆಚೆನ್ನಬಸವೇಶ್ವರನು ಕೈಲಾಸವನೈದಿದಕಥೆ

ಸವ|| ಭೋಜನರು ಕಳವಳಿಸೆನಿಜ ರ | ರಾಜಿಭಜಿಸಲುಗುಹನುವಿಭವ ವಿ | ರಾಜಮಾನದೆ ಜನಕಜನನಿಯರ್ರೈದೆನಮಿಸಿದನು||

ಪದ|| ಮುವದೊಳಾಖಂಡಲಮುಖಾದಿಕ| ತ್ರಿದಶಸಮಿತಿಪ್ರಮೋದದಿಂದ | ಭ್ಯುದಯಮಂಗಳರಾವಯುತಜಯಭೇರಿನಿಸ್ವನಿತ || ವಿದಿತಸುರನಿಕರಾಕ್ರಿವರಾಪ್ವ | ಸ್ಪದವಿಲಾಸಿತನೃತ್ಯಸೌಗಂ | ಧ್ಯುದಯಕುಸುಮಸುವೃಷ್ಟಿಮಾಗಧಸನ್ನುತಿಗಳಿಂದ ||೧|| ಒಪ್ಪಿಕೃತುಭುಂಗ್ನಿಕರವಿರುತಿರ | ಲೊಪ್ಪಿಭಲರೇ ಎನುತೆವಿಸ್ಮಯವಪ್ಪವಂಡದೊ ಳಾವಿಟಪಿಯುಗವಮುರಪುಫವಡರಿ || ಇಪ್ಪವಾಶಾಧ್ಯಕ್ಷರುಗಳುಮು | ಹಃಪತಿಯುಮೊವಲಾದ ಗ್ರಹಮಿಶಿ | ದಪ್ಪದಿಹಮುನಿಸತ್ತಮರು ಇದಿರೈತರುತೆನಮಿಸೆ ||೨|| ಕರಿಯಮೇಲ್ಧ್ವಜವಿಟ್ಟುಕ್ರತುಭು | ಗ್ವರನುಧೂಪದಪಾತ್ರೆವಿಡಿದಸು | ಸ್ಥಿರಭಕುತಿಯಿಂಗೋತ್ರಭವವೇತ್ರವನೆಪಿಡಿದಿಹನು || ಹರಿತನೂಭವಖಡ್ಗವನೆಪಿಡಿ | ದಿರಲುಕರ್ಬುರಜಲಕಲಶಗಳ | ಧರಿಸಿದನುಸಲಿಲಾಧಿನಾಥನು ವಾಯುಬಿಜ್ಜಣಿಗೆ ||೩|| ಯೊಡನೆಧನಪತಿಪಾದುಕೆಗಳನು| ಪಿಡಿದುನಡೆಯೆಖಗಾಧಿನಾಥನು | ಕಡುಸರಳಹಾರಾಯುತಮೊಳಿಹಕಾಲಕಂಧರಗೆ || ಹಿಡಿದಕೊಡೆಯೆನಲೊಪ್ಪುತಿರುತಿಹ | ಹೆಡೆಯಫಣಿಪತಿಯಿರೆ ಸದನುಪಮ | ನುಡಿಸಳಿಂಸ್ವಸ್ತಿಯನುಪೇಳಲುತೊಡಗಿದಂದ್ಬೃಹಿಣಂ || ೪ || ತೋರಣಾಕೃತಿಯಿಂದಲೆಸೆದುಡು | ತಾರಕಾವಳಿಯಮರಸೇನಾ | ಧಾರನಾಗಿಹಗುಹನು ಶ್ರೀ ಕೈಲಾಸನಗರಕ್ಕೆ || ಸೇರುವಾವಸರಾಂತರದಿಕಾ | ಮಾರಿನಂದನಜನಕನಂಘ್ರಿಸು| ಸಾರಸಂಗಳಬಳಿಗೆ ನಡೆತಂದತಿವಿನಯನವು ||೫|| ಭಾವದಿಂಸಾಷ್ಟಾಂಗವೆರಗುತೆ | ದೇವನುಂದೇವಿಯರು ಸಂಭ್ರಮಿ | ತಾವಧಾನದೊಳಾತ್ಮಘನಬಾಹುಗಳಪಿಡಿದೆತ್ತಿ || ಓವುತಂದ್ಮಕ್ಸರ್ವವಾಗಲು ತೀವಿನೋಡುತಲಪ್ಪಿಪ್ರಿಯಮುದ | ವಾವರಿಸೆಸಿರಿವೊಗಗಳೊಳುಮೊಗವಿಟ್ಟು ಮೆಚ್ಚಿದರು ||೬|| ಆಸಮಯದೊಳು ನಾಗಗಮನೆವಿ | ಲಾಸದಿಂಮುನ್ನಿರ್ದ್ದತೆರದಿಪ್ರ | ಭಾಸಮುಂಚಿತದೇಹದಿಂದಗಜಾಂಪ್ರಿಸೇವೆಯನೂ || ಮೋಸವಿಲ್ಲದೆಮಾಡುತಂವಿ| ಶ್ವಾಸಪೂರ್ಕ್ವದೊಳಿರೆಪ್ರಮಥಗಣ | ವಾಸದಾಶಿವನಂಘ್ರಿಸಾರಸಗಳನುಬಿಡೆಬಿಡದೇ ||೭||ಸೇವಿಸುತೆಸಂತಸದೊಳಿರಲುಸ | ದಾವ

ಕಾಲದಿಪಿಪ್ಪಲಾಗಮು। ವಾವರಿಸಿಗೋಪತಿಸಮಾರೂಢಾಂಘ್ರಿಸದ್ಭಕ್ತಿ
ಜೀವವಾಗಲುಮೋಕ್ಷದ್ವಾರವ। ನೇವಿವಂದಿಂದಾಶ್ರಯಿಸಿಸುಗ। ಮಾವಿಶಿ
ಷ್ಟದೊಳಿರುತಿರಲ್ಕಾಪ್ರಮಥವಿತತಿಶಿವ ॥೮॥ ಧ್ಯಾನಪರರೆನಿಸಿರಲುಮನುಜ
ವಿ। ತಾನವದುಕ್ಷೋಣೀತಲದೊಳಸ। ಮಾನಚೆನ್ನವೃಷಾಧಿನಾಥನುಮಾ
ಮನೋಂಬುಜಚಿ ॥ ದ್ಯಾನುವಿನಪುರಿಗಳಲಪ್ರಮಥವಿ। ತಾನದಿಂನಿಜಕಾ
ಯಸಹಸಂ। ಧಾನದಿಂತೆರಳಿರುವವಾರ್ತೆಯನಾಲಿಸುತ್ತೋರ್ವ ॥೯॥ ರೋ
ರುವರುತವ್ಮೊಳಗೆತಾವುವಿ। ಚಾರವಾಡುವಪರಿಯಿದೆಂತೆನ। ಲಾರಿಗಪ್ಪು
ವದಿಂತುಪರಮಸ್ವತಂತ್ರಪರಶಕ್ತಿ ॥ ಸಾರಭಕ್ತಿಸಮಾಹಿತವದೀ। ಧರು
ಣೀತಲದಲ್ಲಿನಿಜಶ। ರೀರಸಹಿತಂಶಿವನಪುರಮಂಸೇರಿದನುಕಆತ ॥೧೦॥ ನೆಂ
ತುಸದಮಲಭಕ್ತಿಚರಿತನೊ। ಅಂತವರಿಯಲ್ಕಾಬ್ಬರದ್ಭುತ। ನ್ನಂತೆವಾಸಿಗ
ಳಂವಿಶಿಷ್ಟರಗೂಡಿನಡೆದಿರುವ ॥ ನಂತುತನ್ಮಹಿಮಾತಿಶಯಮಂ। ಅಂತ
ಕಾಂತಕಬಲ್ಲನಾವಿ। ನ್ನೆಂತುತಿಳಿಯುವೆವಾಗುರೂತ್ತಮನಡಿಗಳಂ ಪಿಡಿದು
॥೧೧॥ ಪೋಗಲಿಲ್ಲವುಫಲವುಪಕ್ವವ! ದಾಗೆಬಿಡುವುದುತೊಟ್ಟುಕಾಯ್ಮಡಿ
ದಾಗಬೀಳುವುದದರವೋಲ್ತಪವಡುವೆಫಲಿಸಿರುವ ॥ ಯೋಗಿಗಳನೊಡಗೂ
ಡಿಪೋಪುದು। ಸಾಗುವುದುನವ್ಮಂತೆದುರ್ಕ್ರಾಡ। ರಾಗಿರುವಹೀನಾತ್ಮರಿಗ
ಘನತಪವನೆಸಗಿದರು ॥೧೨॥ ಹರನಸನ್ನಿಧಿಗಿಂತುಪೋಪುದು। ತರವೆಕಆತ
ನುವೀರನೃಪಚಂ। ದಿರನಪೊಳಲೊಳಗಿರುವಸಮಯಾಂತರದೊಳಾನೃಪನ।
ಭರದಿಸೇರಿಪದಾಂಬುಜಂಗಳ। ಮರೆಯಪೋಗಲುಕೃಪಾರಸಾಮೃತ। ಶ
ರಧಿಯಾದುದರಿಂದಲೆಮ್ಮನುಕಾಯ್ವಸಾಮರ್ಥ್ಯ ॥೧೩॥ ವಿಲ್ಲದಾತನೆತ್ರಿ
ಭುವನದೊಳಿಹ। ಬಲ್ಲರೊಳುಬಲ್ಲವನುಮಾತ್ಮರ। ನುಲ್ಲಸದಿಪಾವನನವಸ್ಥೈ
ಯ್ಯಲ್ಬೇದಕತದಿಂದೆ॥ ನಿಲ್ಲೆನುತೆಜಂಕಿಸಲುಬಿಡದರ। ಮೆಲ್ಲನೇಯುವನ್ಗಳಿಂ
ಮುನ್ನವೆ। ಸಲ್ಲಲಿತಚಲವಳವಿಟಪಿಶಾಖೆಗಳಮರೆಯೊಳಗೆ ॥೧೪॥ ನೆಲಸಿಯು
ಭ್ರದೊಳಾಗಮಿಪತೊ। ಟ್ಟಲುಗಳೇರುವಸಮಯದೊಳುಮಿಗೆ। ಯಲಘುತರ
ಸುಮಗುಚ್ಛಸಂತತಿಯನ್ನುಪಿಡಿದಿರಲು ॥ ಮಲಹರನಪುಟಭೇದನಕನಿ।
ರ್ಮಲದಿಸೇರುತಲಿರ್ದ್ದವಿಂತಹ। ನಿಲವನರಿಯದೆಭ್ರಾಂತರುಗಳಾಗಿರ್ಪೆವ
ಕಟಕಟಾ ॥೧೫॥ ಗುರುಗಳನುನಿಂದಿಸೆದೆವೋಪರ। ಸರಸಿಜೇಕ್ಷಣೆಯರ

ರತಿಯುಬಯ । ಸಿರುವೆನ್ನೆೀಪರಾಪರನುಕಂಪಾಕ್ಷಣವೆನವಿುಸದಲಿ ॥ ಇರುವೆ
ವ್ವೋಪರಮಪ್ರಸಾದದೊ । ಳುರವಣಿಸಿರುಚಿಯಾರಿಸಿದೆವ್ವೋ। ಪರಧನಾಪೇ
ಕ್ಷೆಯನುಹೊಂದಿರುತಿರ್ಪೆವ್ವೋಸತ್ಯ ॥೧೬॥ ವ್ರತಸುನಿಷ್ಠಾನ್ವಿತದಿಗಿರಿಜಾ।
ಪತಿಸಮರ್ಚನಕಾಲದೊಳುಗು । ಪ್ತತೆಯುಗ್ರೈದಿರುತಿಹೆವ್ವೊಭಕ್ತಿಯಮಾ
ರ್ಗತಪ್ಪಿದೆವ್ವೊ ॥ ಕೃತಕಬುದ್ಧರಕೂಡಿದೆವ್ವೋದು । ರ್ಮತಿಗಳೊಳುಚರಿಸಿದೆ
ವ್ವೊಯಕೃತದಿ । ಸಿತಗಳನಧ್ಯಾನವನುಮರೆದವ್ವೊಅಂತರಿಕಶತ್ಯ ॥೧೭॥ ಕ್ಷು
ಲಕಸೋತೆವ್ವೋಕ್ಷುದ್ರದ್ಯೆವಾ । ವಲಿಯುಸೇವಿಸಿದೆವ್ವೊಮಹೇಶನ । ನಿಲವ
ನರಿಯದೆನಿಂದಿಸುತ್ತಿಹಸ್ಥಲದಿನಿಂದಿಹೆವೆ ॥ ಹಲವುದುರ್ವ್ಯಾತ್ತಿಗಳನೆಸೆದ
ವ್ವೊ । ಫಲಿತನೇವಸುಮಂತ್ರವಿದ್ಯೆಯ । ಚಲನಭಾವದಿಪರಿವಲೊಲ್ಲದೆ ಜಂ
ಪರಾಗಿಹೆವ್ವೊ ॥೧೮॥ ಅದರಿನಾಚನಬಸವದೇಶಿಕ । ಪದವುಲಭಿಸದೊಲಾ
ಯ್ತುಒದಸಿರೆ। ಸದಯತಾಂಕರದೊಯ್ಯನೇಎಂದೆಂಬಚಿಂತೆಯದು ॥ ಹ
ದಯದೊಳುಪರ್ಬಿರಲುಭೂಲೋ । ಕದನಿಖಿಲಮನುಜಾಳಿಕೀರ್ತಿಸೆ । ಸದ
ಮಳಸುಭಕ್ತ್ಯೈಕಮಾನಸದಿಂದಲೀಕಥೆಯಾ ॥೧೯॥ ಆರುಓದಲುಕೇಳ್ದ
ಡುಂಮೇಣ್ । ಸಾರಸುಸ್ಥಿತಿಮನದಿಬರೆಯಲು । ವಾರಿಜಾರಿಕವರ್ಧಿಕತು
ಣಾವೃದ್ಧಿಯಿಂಭೋಗ ॥ ವಾರದಿಂಸೌಭಾಗ್ಯವಾಳು । ತ್ತೀರಸಾತಲವಲ್ಲಿ
ಯುಂಪರಿ। ಪೂರಣಾಯುವಪಡೆದು ಸಂತಸದಿಂದಲಬ್ಧಭವ ॥೨೦॥ ಪ್ರನು
ಖರಿಗೆನಿಲುಕದಿಹಮುಕ್ತಿಯ। ಸಮುಚಿತದಿಪಡೆದಪರೆನುತ್ತಂ।ಸಮತೆಸಾಂ
ಗಿಕಭಾವರೇಣುಕನೆಂಬಗಣವರನು ॥ ಅಮಿತಮಹಿಮಾಧಾರನಾಶ್ರಿತ । ಸು
ಮನಪಾದಪಕಾರ್ತಿಕೇಯನ । ವಿಮಲಚಾರುಚರಿತ್ರೆಯಂ ವಿಸ್ತರಿಸಿಪೇಳ
ಲ್ಕೆ ॥೨೧॥ ವಿನಯನಿಧಿಯುಹಕುಂಭಜನುಚಿ । ದ್ಘನಮುನೀಶ್ವರರುಗಳುಸ
ವ್ಮದ । ವನಧಿಯೊಳಗೋಲಾಡುತ್ತೈದೆಭವತ್ಕೃಪಾಗರಿಮ ॥ ದನುವಿಸಿಂ
ಸಕಲಾರ್ಥಸಾಧನ। ಜನಿತಹೇತುವೆನಿಪ್ಪಚರಿತೆಯ। ನನಿಬರುಂಕೇಳುವಸಮ
ಯವೆಡೆಗೊಂಡಕಾರಣದಿ ॥೨೨॥ ಧನ್ಯರಾದೆವುಸತ್ವಗುಣಚೈ । ತನ್ಯಶಾಶ್ವ
ತಪುಣ್ಯಯುತವ ॥ ನ್ಮಾನ್ಯನಿಮ್ಮಕಟಾಕ್ಷದಿಂಕೃತಕೃತ್ಯರಾದೆವಲಾ ॥ ಎ
ನ್ನುತಶಿಶುಭಕ್ತಿಯಿಂಪರ । ಮೋನ್ನತೋಕ್ತಿಗಳಿಂದಲವರ್ಗಳು । ಸನ್ನು
ತಿಗಳಿಂಮಾಡಲರಿದುಚಿತಾನುಲಾಪಗಳಿಂ ॥೨೩॥ ಸಂತಣಿಸುತಂಯೋಗಿಪೊ

ಗವ । ನಂತರಂ ಸದಿಬಂದಘನಸ್ಸ್ಮೃತೆ । ಯುಂತೆನಸೆದಾವಪಾತ್ರದೊಳೆಮುನಿ
ವರರುಗಳಹಿಂಡು ॥ ಸ್ವಾಂತಸಾರಸವಿಕಸನದಿನಿ । ಶ್ಚಿಂತರಾಗುತಲೀಕಥಾ
ಮನ । ನಾಂತರದೊಳೆಂದಿನತೆರವೆಸುಖಿಸಿದರುದಿನದಿನದೀ ॥೨೪॥ ಶಕ್ತಿಧರ
ನಿಜಮುಕ್ತಿಕಾರಣ । ಭಕ್ತವತ್ಸಲಭಸಿತಲೇಪನಿ । ರುಕ್ತವಿಲಸಿತರಾಮಪಾ
ವನನಾಮಗಣಪ್ರೇಮ ॥ ಯುಕ್ತಮುಕ್ತೋಪೇತಪರಮವಿ । ರಕ್ತಮಂಜು
ಲಸೂಕ್ತಶಾಂತಿನಿ । ಯುಕ್ತನಿರುಪಮಧಾಮನಿರ್ವಿಷಯೈಕನಿಸ್ಸೀಮ-
॥೨೫॥ ಶರ್ವಶಾರ್ವರಿನಾಥಚಂದ್ರನ್ನ । ಷಾರ್ವಶಾರದಮೇಘಪೇನಸು । ವ
ರ್ವಭೋಜಮರುತ್ಕಬಳಪತಿದೇವಗಂಗಾವಾಕ್ ॥ ಪೂರ್ವದಿಗ್ಗಜಪುಂಡರೀಕ
ಭ । ಪರ್ವತಾಧಿಪಗೋಸಹೀರಕ । ಗೀರ್ವರಾತ್ಮಜತುಲ್ಯಕೀರ್ತಿಸುಪೂ
ರಿತೋದ್ವಿಭವ ॥೨೬॥ ನಿನ್ನತನುಜನ್ಮನಚರಿತೆಯೊಳು । ನನ್ನಿಯಿಂದಾರನೆ
ಯಪದ್ಯದಿ । ನಿನ್ನನುಂಸ್ತುತಿಮಾಡಿದುದನೇಕೆಡಿಸಿಬೇರೆನಿಸೆ ॥ ಉನ್ನತಿ
ಕೆಯಿಂದ್ವೈದುಪದ್ಯಗಳ । ಳನ್ನು ಪೇಳಿದೆತಾಯ್ಗಳಡಿಯಪ । ಸನ್ನತೆಗೆಪೌರಾ
ಣದಂತ್ಯದೊಳಿಡಲುಬೇಕಾಗಿ ॥೨೭॥ ಶಿವನುನಿನಗರ್ಧಾಂಗವಂಕೊ । ಟ್ಟ
ವನೆನಲ್ಸಟೆಮಂತ್ರರೂಪದೊ । ಳವಿರತಂನೀನವಗೆದೇಹವಕೊಟ್ಟಕಾರ
ಣದಿಂ ॥ ಭುವಿಜನರಪಾವನವಮಾಡಲು । ಸವನಿಸಿತುಚರರೂಪದಿಂದು ।
ತ್ಸವದಿನಿನ್ನಮಹಾತ್ಮ್ಯವರಿಯಲ್ಕಾರಳವುಜನನೀ ॥೨೮॥ ಶರಧಿಯೊಳುಜ
ನಿಸಿದಗರಳವಮಂ । ಗಿರಿಶನೀಂಟಲ್ಮಡಿಯುದೋಲ್ಪುರ । ಹರನಬದುಕಿಸಿ
ತಮುಮನಿನ್ನಯುಗಳದಮಾಂಗಲ್ಯಂ ॥ ಪರಿಪರಿಯಮುದದಿಂಭವಚ್ಛ್ರೀ ।
ಚರಣಸಾರಸಯುಗಳಮಂಮಿಗೆ । ಸ್ಮರಿಪಜನರಿಗೆಶ್ರೇಯಸವಜನನಿಯೆ
ಕುಡುವೆಸಹಜಂ ॥೨೯॥ ಹಸುಳೆಗೊಂದಗಿರ್ಸೆಡರವರಿಹಾ । ರಿಸುವಭಾರವು
ತಾಮಿಗಲ್ಲದೆ । ದೆಶೆಯುದಿಕ್ಕುಂನೀನೆಗ್ತಿಮತಿಬೇರೆಕಾಯ್ವವರೂ ॥ ಪೊಸ
ಪರಿಯೊಳುಂಟೇಕೃಪಾಮೃತ । ರಸಭರಿತನಯನದಿನಿರೀಕ್ಷಿಸು । ಅಸ
ಮವಿಜಯಪ್ರದಾಯಿಶ್ರೀಕಲ್ಯಾಣಿಶರ್ವಾಣೀ ॥೩೦॥ ದೀನನಂದುರ್ವಿಷಯ

ದುಸ್ತರ। ಕಾನನದಿಬಿದ್ದಳಲುವವನ। ಜ್ಞಾನತಿಮಿರಾನ್ವಿತಕೂಪದಿಮುಳು ಗಿಪೊರೆಯಿಡುವ ॥ ಹೀನನಾವೆನ್ನುವನುಕೃವಿತಿ। ದೇನುಕೊರತೆಯನೆಣಿಪ ದಲಿಮಹ್ವ| ದಾನಿಮದ್ಭಾಗ್ಯೈಕನಿಧಿಮಂಗಳವೆನಿಸುಭರದಿ ॥೩೧॥ ಇದು ವೆರೇಣುಕಸಿದ್ಧಸದ್ಗುರು। ಪದಪಯೋರುಹಜನಿತಶಿಷ್ಯಸ। ಮುದಯ ದೊಳುನಿಜಮಠಸುದೇಶಿಕರುಗಳಕಾರುಣ್ಯ ॥ ಒದವಿರುವಶ್ರೀಸಿದ್ಧರಾಮಂ। ಮುದದಿಪೇಳಿದಚೆನ್ನಬಸವಾ। ಭ್ಯುದಯವೆನಿಪಪುರಾಣದೊಳಗಿದುಪಂಚ ಮಾಶ್ವಾಸಂ ॥೩೨॥

ಅಂತು ಸಂಧಿ ೪೩ಕ್ಕಂ ಪದ ೨೪೦ಂಕ್ಕಂ ಮಂಗಳಮಸ್ತು.

ಶ್ರೀ ಚೆನ್ನಬಸವಾಭ್ಯುದಯವೆಂಬ ಪುರಾಣವು



